ದಿಂನಂಧಿನಾಥಂಗಿಂದು ಧರನಿಂತೆಂದ||

ಕಂ|| ಛಲಕೆಶಿಬಿಬಲಗಕ್ ನಿಜಜಂಳಂ | ಗಲಮಂತಲಾಗಿತ್ತನೆಂಭರಂತ್
ಮಕ್ಕೆಲಾ||ಮಳೆಯಂಸುತನಂತನ್ನಂ| ನಲವಿಂಕೊಟ್ಟಮರನೀತಿಗಾ
ರೆಯೆಂದ|| ೯೦

ವ|| ಎಂದು ಶಿವನಾನಂದದಿಂ ಕೊಂಡಾಡುತ್ತಮಾಗಳ್

ಕಂ|| ಸತಿಪುತ್ರಸ್ವೆರಸುಮಹೋ| ಜಿನ್ತನೂದಿಂದೊಪ್ಪುವಮ
ತಿಗೆಗಿರಿಜಾ || ಪತಿಗಣಪದವಂಸುರಸಂ | ತತಿಪೊಗಳಲೊಟ್ಟುವೆ
ನಾಸ್ಥಾಯಿಕೆಯೊಳ್ ೯೧

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯ ಮಾಲಾಮ
ಪುಂಜರಂಜಿತವಾದ ಪಂಕಜಶ್ರೀಮತ್ಪಲಿಸೆರೆ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿವಿರಚಿತಪುಷ್ಪ
ಷ್ಮಪುರಾತನರಚಾರಿತ್ರದೊಳಮರನೀತಿಮಾಹೇಶ್ವರಕಥಾವೃತಾಂತ

ನವಮಾಶ್ವಾಸಂ

ಶ್ರೀ

ಓಂ

## ದಶಮಾಶ್ವಾಸಂ

### ಚೆರುತೊಂಡಭಕ್ತನ ಕಥನಂ

ಕಂ॥ ಕರುಣದಿ ಚೆರುತೊಂಡಂಗಂ ನಿರುಪಮಗಣಪದಮನಿತ್ತು ಮೆರೆದಗತನಯಾ । ವರಪ್ರದಮುವಾರಿಜಾಕರ॥ ಮರಾಳಸೋಮೇಶನೊಲ್ದು ಪಾಲಿಕೆನಮ್ಮಂ॥ ।೧॥

ಮ॥ ಸತತಂ ಶಂಕರನಿರ್ಪ ಸೆಜ್ಜೆವನೆ ತಾನೆಂದೆಂಬು ಪೊಂದುರ್ವಿಯೊಳ್। ಕೃತಕಕ್ಷ್ಮಾಧರದಿಂ ವನಾವಳಿಗಳಿಂ ಪುಂಪ್ರೇಕ್ಷುವಾಟಂಗಳಿಂ। ನುತಕೇದಾರಸಮೂಹದಿಂದುರು ತಟಾಕಬ್ರಾತದಿಂ ಪೆರ್ಗವೆ। ತ್ತತುಳೋತ್ಸಹವನಾಂತು ರಂಜಿಸುತಮಿರ್ಕುಂ ಚಾರುಕಾಂಚೀಪುರಂ॥ ೨॥

ಕಂ॥ ಪರಿಖಾವಳಯುಂ ದುರ್ಗಂ । ವರಸೌಧಂ ಭಕ್ತಮಂದಿರಂ ಶಿವನಿಳಯಂ। ಧರಣೀಪನಿವಾಸಮೆಂಬಿವು। ಪಿರಿದೊಪ್ಪಲ್ ಕಾಂಚಿಯೆಂಬ ಪುರಮೆಸೆದಿರ್ಕುಂ॥ ।೩।

ಪಿರಿದುಂ ರಂಜಿಪ ಕಾಂಚಿಯ । ಪುರದೊಳ್ ಚೋಳಾದಿಗಳ್ಗೆ ಘನತರಧನದಿಂ। ಸರಿಯೆನಿಸುತ್ತ ತ್ಯಾಗನ। ವರಸುತ ಚೆರುತೊಂಡನೆಂಬ ವೈಶ್ಯಂ ಮೆರೆವಂ। ।೪॥

ಧನದಿಂದಂ ಕಳೆಯಿಂದಂ। ಮನಸಿಜಹರಭಕ್ತಿಯಿಂ ಕುಬೇರಂ ಚಂದ್ರಂ। ವನಜಾಕ್ಷನೆನಿಸುತಂ ಭೂ। ವಿನುತಂ ಚೆರುತೊಂಡನೆಂಬನೆಸೆವಂ ಜಸದೊಳ್ ॥೫।

ಧನದಾನದಿನತ್ಯುತ್ತಮ । ವೆನುತೆ ಒಲವಿಂದನ್ನದಾನಮಂ ಮಾಡಲ್ಕಿಂ । ಪೆನೆ ಧರೆಯೊಳ್ಪುಟ್ಟದನೆನೆ। ಘನಮನ್ನತಿಯಿಂದಮಿರ್ಪನಾಚೆರುತೊಂಡಂ॥ ।೬।

ಮತ್ತಂ

ತನುಲಿಂಗಂಪಾಷಾಗೂ। ಪನಿಕೆಂಬೆಡದಿರ್ಪ ತೆರದಿ ಸಿರಿಯೊಳಿಂಗಂ। ಜನನುತೆ ಚೆಂಗಳೆಯೆಂಬಾ। ವನಿತೆ ಕರಂ ರಂಜಿಸಿರ್ಪಳದನೇವೇಳ್ವೆಂ।

ವರಸಂಪದದಿಂ ಸಿರಿಯಿಂ। ಪಿರಿದರಿವಿಂ ವಾಣಿಯಿಂ ಪತಿವ್ರತೆತನದಿಂ ನಿರುತಮರುಂಧತಿಯುಂ ಪೋ॥ ಲ್ವಿರುತಿರ್ಪಳ್ ಕೀರ್ತಿವೆತ್ತು ಚೆಂಗಳೆವು

ವಡಿ ॥

ಹರವರ ಕೃಪೆಯಿಂದಿರ್ಪಾ| ಸಿರಿಯಾಳಂಚಂಗಳವ್ವೆತಮಗೀಶ್ವರಭ
ಕ್ತರೆತಾಯ್ತೆಂದೆಗಳೆಸುತಂ| ಪಿರಿದುಂಬೆಸಕೆಯ್ಯುತಿರ್ದರವನೀಪ್ರ
ಳ್ಯಂ|

ವ| ಅಂತುಚಂಗಳವ್ವೆ ಸಿರಿಯಾಳರ್ತಮಗೀಶ್ವರ ಭಕ್ತರೇತೆಂದವ
ಪ್ಪಗಳೆಂಬಭಾವದಿಂತನುಧನ ಮನದೊಳ್ವಂಚನೆಯಿಲ್ಲದೆ ಬೆಸಕೆಯ್ಯು
ತ್ತುತುಳಭಕ್ತಿಯುಜನಮುಂ ತಾಳ್ದಿರುತಿರ್ದ ರಂತುಮಲ್ಲದೆಯುಂ|

ಮ|| ನಿರುತಂಸನ್ನುತದಾನವೇಳ್ಗೆ ಯುಜಸಂದಿಗ್ಭಾಗಮುಂಮುಟ್ಟೆಕ
ಡಿಸೆಕೇಳ್ದೀಶ್ವರಭಕ್ತರೋತುಘರ ದೊಳ್ವಾಂಛಾನ್ನದಿಂ ಪೊನ್ನಿ
ವರವಸ್ತ್ರಂಗಳನೆಯ್ದೆ ತುಷ್ಟಿಪಡಿಸುತ್ತತ್ಯಂತ ಸದ್ಭಕ್ತಿಯಿಂ ಸಿರಿಯಾ
ಸತಿಚಂಗಳವ್ವೆವೆರಸಂತಿರ್ದಂ ಮಹೋತ್ಸಾಹದಿಂ||

ವ| ಅಂತೀಪರಿಯೊಳಿರ್ಪಲ್ಲಿ ಯೊಂದುದಿವಸಂಚಂಗಳಾದೇವಿ
ಗಪುತ್ರೋತ್ಸಾಹವಿಲ್ಲೆಂದುಚಿಂತಿಸು ತಿರಲಾಸಮಯದೊಳುಸಿರಿ
ಳೆಂಬಂದುಸವಿಾಪದೊಳ್ಕುಳ್ಳಿರ್ದು ಇದೇನುಕಾರಣಂಖೇದವೆಂದು
ಗೊಳಲ್ಕಿತೆಂದಳ್|

ಕಂ| ವರದೇಹಂಸಂದೇಹಂ| ನೆರಸಿರ್ದರ್ಥಂಸ್ವರರ್ಥವುತಿರಂಜಿ
ರ್ದರಮನೆಕೆಂಮುದೆಯೆನಿಪುದು| ಧರೆಯೊಳ್ಸುತರಿಲ್ಲದವರ್ಗೆತಾ
ಸಹಜಂ||

ವ|| ನಲಿದುತ್ಸಂಗದೊಳಿಟ್ಟುಪಾಣಿಯುಗದೊ ಳ್ಸೃತಪ್ಪಿಚ್ಛೆ
ದೆ| ವೆರ್ಗಲೆಯೊಳ್ತೀವಿದಪಾನುದಿ ತೊಟ್ಟುಮಲ್ವೆಂದೊಟ್ಟಿಲ
ಶೀವಿಕೋ| ಮುಳಚೇನಾಂಬರದಿಂಮುಸುಂಕಿಭರದಿಂದಂಜೋ
ಳಂಬಾದಿತ| ವ್ಯೋಮಲನಿಂದಂಪಿರಿದುತ್ಸವಂಬಡೆವವೆಣ್ಣೇಂನೋಂಪಿ
ನೋಂತಳೋ||

ಕಂ| ಕಿರಿದೊಪೆವಿವಿಡೆನ್ನಯಮುಂ|ಜೇಗಿನೊಳಿಡದಡಗಿಜನನಿ
ರೆನ್ನೆನುತಂ|ಉರೆಮುದ್ದು ಮಾತನಾಡುವ, ಕಿರುಗೂಸಂದೀಕನೆ
ದಿತ್ತಪನೋ|

ವ| ಎಂದುಪ್ಪಲುಂಬುಸಚಂಗಳಾದೇವಿಯನುಡಿಯುಂ ಕೇಳ್ದು ವಿ

ದೊಡಂ ಪುತ್ರರಿಲ್ಲದವರ್ಗೆ ಕಿರ್ತಿಕವಿಲ್ಲೆಂಬುದುಕಾರಣವಾಗಿಭಕ್ತ

ನಕಾಮಿತ ಫಲಪ್ರದನಪ್ಪೇಕಾಮ್ರನಾಥ ಲಿಂಗದಲ್ಲಿವರಪುತ್ರನೋರ್ವ್ವನಂ ಬೇಳ್ಪೆನೆಂದು ತದನಂತರಂ ಬೋಳಯಿಸಿ ಚಿರುತೊಂಡಮಾಹೇಶ್ವರನ ಭಯಮನಿತ್ತೆರ್ದು ಮಹಾ ಭಕ್ತಿಯಿಂ ಶಿವಲಿಂಗ ನಿಳಯಕ್ಕೆಯ್ತಂದೊಳಗಂ ಪೊಕ್ಕು ಲಿಂಗದಸಮೀಪದೊಳ್ ಪದ್ಮಾಸನಮನಿಕ್ಕಿ ಯೋಗಮೋಕ್ತಿಯಿಂ ವಿಭೂತಿ ರುದ್ರಾಕ್ಷಿಯಂ ತಾಳ್ದಷ್ಟಮೂರ್ತಿಯಪ್ಪಶಿವಂಗಷ್ಟವಿಧಾರ್ಚನೆಯಂಮಾಡ್ಡಿ ಕಿವಿವಿಡಿದಾಡಿ ಪಾಡಿ ಪೊಡಮಟ್ಟು ಹರುಷೋತ್ಸುಕ ಹೃದಯನಾಗಿ ಕರಮಂ ಮುಗಿದಾಗಳ್

ಕಂ|| ಪುರಹರ ಭವಹರಮಖಹರ | ತರಣಿಜಹರದುರಿತಹರಗಜಾಸುರಹರಶಂ | ಬರಹರಹರಜಯಜಯಸುಖ | ಶರಧಿಯೆವಿಕಾಮ್ರನಾಥಸದ್ಗುಣಮೂಥ| ||೧೪||

ಎಂದುಪೊಗಳುತ್ತಮಾಗಳ್

ಮ|| ಅನಿಶಂನೀಂಪತಿನಿನ್ನನರ್ಚಿಸುವೆನಾಂನಿನ್ನಿಂದಮೀಸಂಪದಂ| ನಿನಗೇನೂರ್ಜಿತಭಕ್ತನಿನ್ನದೆಸೆಯಿಂಬಾಳ್ವೆಂದಿಟಂನಿನ್ನರೂ|ಪನೆಜಾನಿಪ್ಪುದುಮನ್ಮನಂ ಪದಪಿನಿಂನಿನ್ನಲ್ಲಿ ಬೇಳ್ಪೆಂಮಹಾ| ಘನಮಂನೀನೆಪೊದಳ್ದು ರಕ್ಷಿಸೊಲವಿಂಗೌರೀಮನೋವಲ್ಲಭಾ ||೧೫||

ವ| ಅಂತುಬಿನ್ನಪಂಗೆಯ್ದು ಮತ್ತಮಿಂತೆಂದಂ

ಕಂ || ಕರುಣಿಪುದಭರ್ಕನಂಸಾ|ದರದಿಂದೆಲೆದೇವಯೆಂಬ ಸಿರಿಯೊಳಂಗೀ|ಶ್ವರ ನೊಲ್ದೊಂದು ರಸಾಳದ| ವರಫಳಮಂ ಕುಡಲು ಮಾತ್ಮಕರದೊಳ್ತಳೆದಂ|| ||೧೬||

ವ|| ಅಂತುವರಮಂ ಪಡೆದಾಯೇಕಾಮ್ರನಾಥನಂ ಬೀಳ್ಕೊಂಡುಸಂಭ್ರಮದಿಂ ನಿಜಮಂದಿರಕ್ಕೆಯ್ತಂದು ಕುಳ್ಳಿರ್ದು ನಿಜಸತಿಯಪ್ಪಚಂಗಳಾದೇವಿಗಾವರಫಳಮ ನೀಯಲ್ಕಡುಹರುಷದಿಂ ಕೆಯ್ಕೊಂಡಿರುತ್ತಿರಲೊಂದುದಿವಸಂ |

ಕಂ|| ಕಡುಭರದೆ ಮಾಣಿಕಂಗಂ|ಡುಡೆಭೈತಿಟ್ಟದಿರ್ದೆ ಶಂಕೆಪಂಥದಿಪಿರಸಾರ್ದುಡುಗೆಯ ನಾಂಕುತ್ತೀಕ್ಷಿಪ ಮಡದಿಯರುತು ಪೊಂದುಭಾವನಿತ್ತುದುಸೊಗಸ|| ||೧೭||

ವ| ಅಂತೀಪರಿಯೊಳ್ನಾಲ್ಕುದಿನಂಗಳೆದು ಶುದ್ಧವತಿಯಾಗಿ ಧವಳಾಂಬರಮ ನುಟ್ಟು ಚಂದನಮನ್ನುಂಪಿಟ್ಟು ಮುತ್ತಿನಾಭರಣಮಂತೊಟ್ಟು ಮಲ್ಲಿಗೆಯಂಮುಡಿದಿತ್ತು ಬೆಳ್ಪಸದನಂ ತಾಳ್ದಾನಂದದಿಂದ್ರಾಧಿನದಿರು

ಳುನಿಜಪತಿಯುಪ್ಪ ಸಿರಿಯಾಳನಿಪ್ಪ ಸೆಜ್ಜೆಮನೆಯಂ ಪೊಕ್ಕು ಪಕ್ಕ
ತಲ್ಪದೊಳ್ಕುಳ್ಳಿರಲ್ಕಾಗಳ್ ॥
ಕಂ॥ ಸಿರಿಯಾಳಂ ಚಂಗಳೆಯಂ|ಪರಿರಂಭಂ ಗೆಯ್ದು ಕಂತುರತ
ವಿಯುರೋ॥ ಲ್ಸುರತವಿನೋದದಸುಖಮಂ ಧರಿಯಿಸಿಸಿನಪತಾಳ್ಪದ
ಧ್ರೆಯೊಳಿರ್ದನರ್ ॥ ॥೧
ವ॥ ಅಂತುಸುಖನಿದ್ರೆಯೊಳಿರ್ಪಲ್ಲಿ ನಿಶಾವಸಾನಸಮಯದೊಳ್
ಪ್ನವಂ ಕಂಡೆರ್ದ್ದು ಚಂಗಳಾದೇವಿ ನಿಜಪತಿಯುಪ್ಪವಡಿಸಿಕಳ್ಳಿದ
ಗಳಿಂತೆಂದಳ್ ॥
ಕಂ॥ ಮುತ್ತಿನಪೊಸಪುತ್ಥಳಿತಳ|ಪೆತ್ತಿದಮನ್ಮಥನ ಖಡ್ಗಲತೆಕ
ರದಿಂ॥ಬಿತ್ತರಿಸಿದ ಕರುವಿನೆಲೆಸೆ | ದತ್ತಬಲಿಯುದೇಪ ಕಾಂತಿ ಬ
ಯ ದಿನವೊಳ್ ॥ ॥
ಕಂ॥ ವನಜಾರಿಯುಬರವಂ ನೆ | ಟ್ಟನೆ ಬಯಸುವವೆಂದು ಕಟ
ದರಥಾಂಗಾ | ನನವಸಿತೋತ್ಪಳಯುಗಮಂ | ದೆನೆ ವನಿತೆಯ ಕು
ಚಚೂಚುಕದ ಕರ್ಪಿನಗುಂ ॥ |
ಲಲಿತಾಂಗದಿನಾಗಳ್ಮ | ತ್ತೊಳಗುವ ಪೃಕ್ಕಮಳ ನಾಳವೆಂಪಸ
ಕೋ॥ ಮಳೆಯುಬರದಮೇಲಿಪ್ಪವ | ತಳುಗರ್ಪಿನಬಾಸೆ ನಿ
ಕಣ್ಗೆಸದಿರ್ಕುಂ | |
ವ |ಅಂತೀಪರಿಯೊಳ್ಪರಿಪೂರ್ಣಗರ್ಭ ವನಾಂತಿರೆಯಿರೆ
ಕಂ | ನವಮಾಸಂನೆರೆಯಲ್ಕು!ತ್ಸವದಿಂದಂಚಂಗಳವ್ವೆಗುರುಪು
ವುಂ | ಜವೆನಿಪೊಬ್ಬಾತ್ಮಜನು| ದ್ಭವಿಸಿದನಗಜೇಶಪಾದ ಪಂಕಜ
ಗಂ |
ವ | ಅಂತುಪುತ್ರೋದಯಮಾದುತ್ಸವದೊಳ್ ಸಿರಿಯಾಳನಖಿ
ಭಕ್ತರಿಗೆ ಪಲವುಪೊಂಗಳಂ ಕೊಟ್ಟು ಅನಂತರಂ ಶುಭದಿನದೊಳ್
ಕಂ | ಚೋಳಧರಿತ್ರಿಯಶಿವಭ |ಕ್ತಾಳಿಮುದಂಬಡೆಯಲಂದು
ನಮುಂಗಂ ! ಲೀಲೆಮಿಗಲ್ ಸಿರಿಯಾಳಂ ಚೀಲಾಳನೆನಿಪ್ಪಪೆಸರನೋ
ದಿಪ್ಪಂ|
ವ | ಅಂತುಪೆಸರನಿಟ್ಟುಬಳೆಯಲ್ ಡಾಕರಣಕಳಾಪಮಂತಾ
ಶವಮಂ ಪತ್ತುವಿಡಲ್ಚೀಲಾಳಂಗೆಚಂಗಳಾದೇವಿಸಿರಿಯಾಳರ್ವ

ಭ್ರಮದಿಂ ಗುರುಕಾರುಣ್ಯಮಂ ಮಾಡಿಸಿ ವಿದ್ಯಾಭ್ಯಾಸಮಾಗಲ್ವೇಳ್ಕುಂ
ಬೇಡಲಿಪ್ಪ ಪರಮಭಕ್ತಿಯಿಂ ಮಾಹೇಶ್ವರರ ಪರಿಚರ್ಯೆಯಿಂದಿಂದಿರಾತಿ
ದರ್ಕರೇತುಮಲ್ಲದೆಯುಂ||

ಕಂ| ಸಿರಿಯಾಳಂಭಕ್ತರ್ಗಾ!ದರದಿಂದಿಷ್ಟಾನ್ನಮಿಕ್ಕುತಿರ್ಪುದಯು
ಶೋಭೆವಲ್ಲರಿಕೈಲಾಸವನೆಡರ್ದಿರೆ|ಹರನೀಕ್ಷಿಸಿಚಿತ್ತದಲ್ಲಿವಿಸ್ಮಿತನಾದಂ|

ವ| ಅಂತುಸದಾಶಿವಂವಿಸ್ಮಿತನಾಗಿಭಕ್ತಿಯನೊರೆದು ನೋಡಲ್ಕೆಂ
ದುಪುರಂದರಾದಿವೃಂದಾರಕ ವೃಂದಮಂಕರೆದು ನೀವೆಲ್ಲತಪಸಿವೇಷ
ದಿಂಕಾಂಚೀಪುರಕ್ಕೆಪೋಗಿಮತ್ತಮಾಸಿರಿಯಾಳನಲ್ಲಿನಿಮ್ಮನಿಮ್ಮಿಷ್ಟಾನ್ನ
ಗಳಂ ಬೇಡಿಕಾಡಿಭಕ್ತರ್ಗೆಬೇಡಿತ್ತನೀವೆನೆಂಬಬಿರಿದಿನಬಲಮಂ ಮುರಿ
ದುಬರ್ಪುದೆಂದುನಿಯಮಿಸಲ್ಕಾಗಳ್ |

ಕಂ|| ಹರನನಿಯಾಮದಿಕಾಂಚೀ | ಪುರಕ್ಕೆಬಂದಿಂದ್ರ ಮುಖ್ಯದೇವ
ಶಿರ್ವ| ತಪೋವೇಷಮನಾಂತೊಲವಿಂ,ಸಿರಿಯಾಳನಮುಂದೆ ಪರಸುತ
ನಿಂದಿರ್ದರ್| |೭೬||

ವ|| ಅಂತುಬಂದುನಿಂದಿರ್ದನೇಕ ಸಹಸ್ರತಪಸ್ವಿಗಳಂ ಸಿರಿಯಾಳಂ
ಕಂಡು ಜೀವಬಂದಂತೆ ಹರುಷಪುಳಕಿತನಾಗಿದಂಡಪ್ರಣಾಮಮಂ ಮಾ
ಡಿಕೈಗಳಂಮುಗಿದುನಿಮ್ಮನಿಮ್ಮ ಮನದಿಚ್ಛೆಗಳೇನೇನುಂಟವನೆನಗೆ ನಿ
ರೂಪಂಗೊಡುವುದೆಂದು ಬಿನ್ನಪಂಗೆಯ್ಯಲವರ್ಕೇಳಿರೆ ಮಗನೆ ನಮ್ಮ
ನಿಬರ್ಗಿಷ್ಟಾನ್ನಮನಿಕ್ಕುವುದೆನಲ್ ಹಸಾದವೆನುತ್ತಂ ಕೈಕೊಂಡುನಿ
ಮ್ಮಡಿಗಳೇಕಾಮ್ರನಾಥನ ನಿಳಯದೊಳಿರ್ಪುದಾಂಕರೆಯಲ್ಪಟ್ಟನೆಂ
ದವರಂ ಕಳುಹಿ ಚೆಂಗಳೆಯಂಕರೆದು ಅಡುಗೆಯಂ ಬೇಗಂ ಮಾಳ್ಪುದೆಂದು
ನಿಯಾಮಿಸಲ್ಪರಮಾನಂದದಿಂ ತತ್‌ಕ್ಷಣವನೇಕಸ್ತ್ರೀಯರ್ವೆರಸು ಬಾಣ
ಸದ ಮನೆಗೆಳ್ತಂದು ಬೋನಮಂ ಸಮೆವುತ್ತಿರ್ಪರ್ ಗಳತ್ತಲ್

ಕ|| ಚಿರುತೊಂಡನಮನೆಯಡುಗೆಯ ,ನುರೆ ಕಿಡಿಸುವೆನೆಂದು ದಿವಿಜ
ಪತಿಮರಮಳೆಯಂ|ಕರೆವುತ್ತಿರೆತತ್ಪುರದೊಳ್ |ನೆರೆನಡಿದೆಗಳಿಲ್ಲ ದಂತು
ಟಾಯಿತ್ತಾಗಳ್| ೭೭|

ವ|| ಅಂತುಬಿಡದೆ ಕರೆವಮಳೆಯಂಕಂಡೀಶ್ವರನಾಣತಿ ಯೆಂದರಿದಚ
ಳಭಕ್ತಿಯಿಂ ಸಿರಿಯಾಳಂ ಮನೆಯೊಳಿಟ್ಟಿರ್ದ ಚಂದನದ ಪೊರೆಗಳಂತಂ
ದುರುಪಿ ಭರದಿಂದಡುಗೆಗಳಂ ಮಾಡಿಸುತ್ತಿರಲ್ಕವ್ರಂ ನೆರೆಯದಿರೆ ಸೀರೆ

ಯುದಿಂಡುಗಳಂಚಿಟ್ಟು ತೈಲದೊಳರ್ದಿ ಚೆಂಗಳಾದೇವಿ ನಿಯಾಮಿಸಿ
ಗಳ್ ||

ಕಂ| ಸಾರಂಗವಟ್ಟವಳಿಸಂ| ಥ್ಯಾರಾಗಂತ್ರಿವಳಿಮುಂಚಿಟಗೆಸ
ಲ್ಲೂರತೆಳಗಾವಿಯೆಂಬಾ | ಶೀರೆಗಳಂನತಿಯುರೊ ಲಿಯೊಳುರುಪಿ
ಗಳ್||

ವ|| ಅಂತದಂಕಂಡುಭಯಗೊಂಡು ಸಿರಿಯಾಳನಭಕ್ತ್ಯ
ಕ್ಕೆ ದೇವೇಂದ್ರಮೆಚ್ಚಿ ಮಳೆಯುಂವಾಣಿಸಿ ಪಿರಿದಪ್ಪೊಲೆಗಳ್ತುಮ
ತಾವೇಉರಿಯಲ್ಕೆಂದಗ್ನಿಗೆನೇಮಿಸಲ್ಕಡು ವೇಗದಿಂಪಾಗಲ್ಕಾಗ

ಕಂ|| ಮಳೆವೊಣ್ದು ದಡುಗೆಯಾದುದು| ತಳುವದೆಕರೆವುದುತ
ಗಳನೆನುತಂಚೆಂ| ಗಳನುಡಿಯಲ್ಸಿರಿಯಾಳಂ| ಗಳಗಳನಿರದೆಯ್ದಿ
ಯಿಂಕರೆತಂದಂ|| |೭

ವ| ಅಂತುಸವಿನಯದಿಂಕರೆದುತಂದು ಪಾದಪ್ರಕ್ಷಾಳನಂಗೆಯ್ದು
ಯಾಳಂತನ್ನರಮನೆಯೊಳಗೆ ದೇವಮುನಿಗಳ್ಗೆ ಮಣಿಪೀಠಂಗಳನಿಕ್ಕಿ
ಳ್ಳಿರಿಸಲ್ಕಾಗಳ್||

ಮ|| ಷಡುಸಮ್ಮಾರ್ಜನೆರಂಗವಾಲಿಪರಿ ಯಾಣಂಸ್ಥಾನಸೋ
ಪೊಂ ಗೊಡದೋಳಘ್ಫಣಿತಾಣ ದೀವಿಗೆಯುಂ ನೀರಾಜನಂಚಂ
ಕೆಡುರಯ್ಯಕ್ಷತೆಧೂಪವಟ್ಟಣಿಗಿಣ್ಣಲ್ಗಳ್ಗೊದಲ್ದಾವಳಾ ಮೃದಸ
ಕದತಾವಸವೇರ್ಧೆರೆವುದೋಸದ್ಭಕ್ತಗೇಹಾಂತದೊಳ್

ವ| ಅಂತುಸವಿನಯದಿಂಕುಹಕಮುನಿಗಳ್ಸಂಭ್ರಮದಿಂಲಿಂಗಾರ್ಚ
ಳಂಮಾಡಮಾಲ್ಪ ಚೆಂಗಳಾದೇವಿಯುರ್ಮೊದಲಾದ ನೇಕಕಾಮಿನಿಯ
ಖ್ಯೆಯುಪೊಂಬರಿ ಯಾಣಂಗಳಂತಂದಿಚ್ಛಾನ್ನಂಗಳಂ ಬಡಿಸಲುದ್ಯು
ರಾಗಿ

ಕಂ| ಸರವಳಿಗೆಯುಕ್ಕಿಸೇವಗೆ, ಪರಡಿಗಳೆಂಬದರವಾಯಸಂಗಳ
ದರದಿಂದಂಗಡಣಿಸಿಸ| ಕ್ಕರೆಗಳನಿಕ್ಕಿದರು ಚಂದ್ರವದನೆಯರ
ಪಾಗಲ್ಕೂಷ್ಮಾಂಡಮಡು| ವಾಗಲ್ಪೊಸತವರೆತೊಂಡೆ
ವೋಚಂ|ಕೂಗರಿಬದಣೆಯೆನಿಪಮೋ| ಲೋಗರಮಂಫಲವನಿಕ್ಕಿ
ಶಿವಾಳಿಯಂ|| |



ಫಲತೆರದಾಸಿಕರಿಣಿಗಳ| ಜಳಜಳಸುತ್ತಿರ್ಪಪಾನಮಂಪಳಿದ

ಲಲನಾಸಂತತಿಬಡಿಸಿ| ತ್ತೊಲವಿಂದಂಬೇವಮುನಿಜನಕ್ಕಂತಾಗಳ್‌|
ಪೂರಿಗೆಮುಂಡಿಗೆಚಕ್ಕುಲಿ | ಗಾರಿಗೆವಡೆದೋಸೆಯಿಡ್ಡಲಿಗೆತರಗೌ
ಗಂ| ವೋರುಂಡೆಗಳೆಂಬುವನಾ| ನಾರೀತತಿಮುನಿಜನಕ್ಕೆಬಡಿಸಿದರಾ
ಗಳ್‌|| |೨೬|

ಅರೆಮಾವ್ನಾಗಳಿಮೆಣಸಿನ ಕರೆಹಿಪ್ಪಲಿಚಳ್ಳೆಚಿಲ್ಲೆಗಾವಟೆಯುದಿಕೊ
ಗರಿನೆಲ್ಲಿಯಾಮ್ರವಂಬಟೆ|ಯರನೆಂದೆಂಬುಪ್ಪುಗಾಯ್ಗನಿಕ್ಕಿದರರೆಬರ್‌|
ಸಿರಿಯಾಳನಸತಿಚಂಗಳೆ |ಪರಮ್ಯಗನಾಭಿಜಮುನಿಳಿಪಪೊಸತುಪ್ಪವ
ನಾ|| ದರದಿಂದಾದಿವ್ಯಮುನೀಶ್ವರಸಂತತಿಸಂಕುಲಕ್ಕೆ ಬಡಿಸಿದಳಾಗಳ್‌||
ವ| ಅಂತೀಪರಿಯೊಳಿಚ್ಛಾನ್ನಂಗಳಂ ಗಡಣಿಸಿದುದಂಕಂಡುಸಿರಿಯಾಳ
ನಾನಂದದಿಂಬಂದು

ಚಂ| ಘನಮುನಿಪಂಜ್ತಿಗಂಸುರಭಿಚಂದನ ವಿಟ್ಟವುಳಾಕ್ಷತಾಳಿಯಂ
ವಿನಯದಿನೊತ್ತಿ ಪೂಗಳಸರಂಗಳನುದ್ಭಜಟಾಕಳಾಪಮಂ|| ಮನವೊಸೆ
ದೆಯ್ದಿಸುತ್ತಿತನಿಗಂಪಿನಧೂಪಮನಿಕ್ಕಿಸಾರೆಸೂ| ತನವಮಣಿದೀಪವೆತ್ತಿ
ಪಿರಿದರ್ಚಿಸಿದಂಚೆರುತೆಂಡನರ್ಥಿಯಿಂ|| ||೨೭||

ವ| ಅಂತೀಪರಿಭಕ್ತಿಯಿಂದರ್ಚಿಸಿಶಿರಿಯಾಳ ನಾಪೋಶನಕ್ಕೆರೆದಂಪು
ಷ್ಪಾಂಜಲಿಯಂಕೊಟ್ಟುನಮಸ್ಕರಿಸಲಾಮುನಿ ಜನಂಪರಸುತ್ತಾರೋಗ
ಣೆಯಂಮಾಡಿಕೈದೊಳೆದುಕೈಘಟ್ಟಿಮಂ ಕೊಂಡುನಿಂದಿರಲ್ಕಾಗಳ್‌||
ಕಂ| ಘನಸಾರದವೀಟಕನ್ರು| ತನವಸ್ತ್ರಾಭರಣತತಿಯನಿತ್ತಾಸಿರಿ
ಯಾ| ಳನನುರೆಪಶಿವಮುನೀಶ್ವರ| ರನನಯದಿಂಪೋಗಿರಜತಗಿರಿಯಂ
ಪೊಕ್ಕರ್‌|| ||೨೮|

ವ|| ಅಂತುಪೊಕ್ಕುಮುನಿವೇಷಮನುಳಿದುನಿಜಮೂರ್ತಿಗಳಿಂದೇವಗ
ಣಂಗಳ್‌ ಶಿಪನಡಿದಾವರೆಗೆರಗಿಸಿರಿಯಾಳನ ಭಕ್ತಿಯಬಲಮಂಬೊಗ
ಳ್ದು ಕೊಂಡಾಡುತ್ತಿರ್ಪಾಗಳ್‌ಶಿವಂಕೇಳ್ದು ನಸುನಗುತ್ತಿಂತೆಂದಂ
ಕಂ|| ಅವನಿಯಹೋಮದಹೊಗೆದಿಂ|ಬವರ್ಗಂಸವಿಯುಣಿಸುದೊರ
ಕಲುಣಲೊಲ್ಲದೆಮ| ತ್ತವನನುವಂಮುರ್ಗಿವೊಡೆಸ| ತ್ವವಪಾಯ್ತೆನ್ನುತ್ತೆ
ಸುರರನಘಟಂಜರಿದಂ|| ೨೯|

ವ|| ಅಂತಿಂದ್ರಾದಿದೇವಗಣಮಂಜರಿದುನಗುತ್ತೆದುರ್ಗ ಪಾರ್ವತೀಮು
ಖ್ಯಗಣಂಗಳಂ ನಿವಾರಿಸಿನೀವಾಕಾಶಮಾರ್ಗ ದೊಳಿರ್ದಾಗಂವಾಳಪ್ಪಿ
ನೋದಮಂ ನೋಳ್ಪುದೆಂದು ನಿಯಾಮಿಸಿತಾನೊರ್ಬನೆಕೈಲಾಸದಿಂ

ಪೊರಮಟ್ಟುಬಂದುಕಾಂಚಿಯಪೊರವಳಲನಂದನ ದೊಳೆಸೆವವಾಕಂಡು
ತಣ್ಣೆಳಲೊಳ್ಸದಾಶಿವಂ ಕುಳ್ಳಿರ್ದನೋಳ್ಪನ್ನೆಗಮಲ್ಲಿ||

ಕಂ|| ಪರಿಚೂತದಕೋಟರದೊಳ್| ಗಿರುತಿರ್ಪರಗಿಳಿಗಳೆರಡುತನ್ನ
ಯಶಿಸುವಂಮರವಾವುಪಿಡಿಯೆಸೋಯಲ್ ! ಪಿರಿದುಂದುಃಖದೊಳಳುತ್ತ
ವಿರಲಂತಾಗಳ್ |೬೬

ವ|| ಅಂತಾಮರಿಯ್ಗ||

ಚಂ||ಕಿರುಮರಿಯಂಕಡಂಗಿ ಮುರಿದೊಯ್ದು ದರಿಂದ ಕಟೆಮ್ಮನಿರ್ಭಯ
ರೆಮುರಿದೊಯ್ವನೇಕೆಜವಪಾಪಿ ಯೆನುತ್ತಿದುಃಖದಿಂದಳು|ತ್ತಿರ್ಪ
ರಳುತ್ತೆಬಾಯ್ಬಿಡುತವಿರ್ಪಶುಕದ್ವಯಮಂಕೃಪಾಕ್ಷಿಯಿಂ|ಕರೆಗೊ
ಳಂಪೊದಳ್ದುಪರಿಭಾವಿಸಿ ಜೀವಮನಿತ್ತನೊಲ್ಮೆಯಿಂ| ೬೭

ವ|| ಅಂತುಮರಿಯನಿತ್ತೀಗಿಣಿಗಳ್ಗೆಮುದಮನಿತ್ತು ತಿರ್ಯಗ್ಜಾತಿಯೊ
ಳಿಂತರ್ಪನಮಾಯೆಯೆಂದೊಡೆ ಮನುಷ್ಯಜಾತಿ ಯೊಳೆಂತುಂನೋಳ್ಪ
ದುಕಾರಣಮುಂ ಸಿರಿಯಾಳನನಿದರಿಂದೋಡಿಸು ವೆನೆಂದುಕುಹಕವೇ
ಷಂಧರಿಸಿರುದ್ರ ನಾತಾವಿಂದೆರ್ದು ಬಂದುಕಾ ಂಚಿಯಪುರಮೊ
ಕ್ಕಾಗಳ್||

ಕಂ|| ಕರವೊಳ್ದಮುರುಗಶೂಲಂ| ವುರುನೈತಂಬದೊಳು ಘಂಟೆಯ
ಪದಯುಗದೊಳ್| ಸುರುಚಿರನೂಪುರ ವೆಸೆಯಲ್| ಗಿರಿಶಂಪರಭೈರವ
ಕೃತಿಯೊಳೇಳ್ತಂದಂ|| |೬೮

ವ|| ಅಂತೇಳ್ತಂದುಕುಹಕವೇಷದೀಶಂ ಮನೆಯಬಾಗಿಲೊಳ್ನಿಂದಿ
ಲ್ಕಂಡುಚಂಗಳಾದೇವಿ ಪರಮಾನಂದಮನೆಯ್ದಿ ಪದಕೆರಗಿಪಾದಪ್ರಕ್ಷಾ
ಳನಂಗೈದುಪಾದತೀರ್ಥಮಂಕೊಂಡು ತಾಂಬೂಲಮಂಕೊಟ್ಟುದೇ
ಗರ್ಬೋನಮಂಸವೆವನ್ನ ಬರಮಿಲ್ಲಿಕುಳ್ಳಿರ್ಪುದೆಂದುಬಿನ್ನವಿಸಿದಳ್ಗೆ
ಯೊಳನೆತ್ತಪೋದನೆಂದುಬೆಸಗೊಳಲ್ಮಾಹೇಶ್ವರ ನರಸಿಪೋಗಿರ್ಪನ
ದೆಂಬಮಾತಂಕೇಳ್ದುಬಿಮಗಳೆಪುರುಷರಿಲ್ಲದಮನೆಯೊಳಿರಲಾಗದದು
ಣನಾಂಪೊರಪೊಳಲೊಳೊಂದು ಆಲದಮರದ ನೆಳಲಿಲ್ಲಿರ್ದಪೆನಲ್ಲಿಗೆ
ನ್ನಪತಿಬಂದಾಗಳ್ಕಳುಪುವುದೆಂದುವಿನೋಪ್ಪೈಕಶೀಲಂತಿರಿಗಿಬಂದಾಪ
ಡಿಯೊಳ್ಕುಳ್ಳಿರ್ದುಗಿರಿಜೆಯಂಕರೆದೆನ್ನಭಕ್ತನಮನದನಿಷ್ಠೆಯುಮಂಕೇ
ನುತ್ತಿಂತೆಂದಂ||

ಕಂ| ತನುಗಳ್ ಬೇರಲ್ಲದೆಜೀ| ವನವೊಂದೇ ಶತಿಗೆಪತಿಗೆಪುತ್ರರಿಗೆಂದಾ
ತನಮಹಿಮೆಗಳೊಂದೊಂದನೆ i ವಿನಯದಿನುಮೆಗಭವನೋತುನುಡಿದ
ವಸರದೊಳ್| ||೪೨|

ಚ|| ಎಳಗರುತಾಯನೊಲ್ದರಸುವಂ ದದಿಭಕ್ತಿಮಿಗಲ್ಕೆಭಕ್ತಸಂ
ಕುಳಮುಮನಂಬುಜಾಕರತಟಂಗಳೊಳೀಶ್ವರಮಂದಿರಂಗಳೊಳ್| ವಿಳ
ಸಿತನಂದನಂಗಳೊಳವೀಕ್ಷಿಸಿ ಕಾಣದೆಬಾಷ್ಪಪೂರ್ಣನಿ| ರ್ಮಳಚರಿ
ತೊಂಡನಾಗಳಿರದಿತ್ತರು ಶಿರ್ದನತೀವಚಿಂತೆಯಿಂ|| ೪೩|

ವ || ಅಂತುಚಿಂತಿಸುತ್ತೆಸಿರಿಯಾಳಂಬರು ಶಿರ್ವಾಗಳ್ ತನ್ನ ಬಲದ
ತೋಳ್ಕಣ್ಣಿಕೆಳದುವಿದಕ್ಕಿ ದೇಂಶುಭಸೂಚನೆ ಯಾಗುತ್ತಿರ್ದವುದೆನ್ನೊ
ಡೆಯರಪ್ಪಮಾಹೇಶ್ವರರಂ ಕಾಣ್ಬೆನೆನುತಂ ನಡೆಯೆಮುಂದೊಂಪಾಲದ
ಮರದಡಿಯೊಳು||

ಕಂ| ಪುಲಿದೊವಲುಡೆಭಸಿತಂಕಂ| ಡಲಮುನ್ನತ್ರಿಶೂಲಡಮರುಗಂ
ಕಿರುಜಡೆಗಳ್| ಸಲೆಮೆರೆವರುದ್ರನಂ ಕಂ! ಡೊಲವುಮಿಗಲ್ಚರಣಕೆರಗಿ
ದಂಸಿರಿಯಾಳಂ| |೪೪|

ವ| ಅಂತುಪದಕ್ಕೆರಗಿಜಾತ್ಯಂಘಂಗೆಕಣ್ | ಬಂದಂತೆಹರುಷಮನೆ
ಯ್ದಿಕೈಗಳಂ ಮುಗಿದೆಲೆದೇವಾನಿಮ್ಮಡಿಗಳಿಂದುಬಂದೆನ್ನಜನ್ಮಂ
ಸಫಲಮಾಯಿತ್ತಾಂಬ ದುಸಂಕಿದೆಂಲಿಂಗಾರ್ಚನೆಗೆ ತಡುವಪ್ಪುದೀಗಬೆ
ಗಲೆಳ್ದುಮಧ್ಭವ ನಕ್ಕೆಬಿಜಯಂ ಮಾಡುವುದೆಂದು ಬಿನ್ನಪಂಗೆಯ್ಯೆಸಿರಿ
ಯಾಳಂಗೆಲೆ ಮಗನೆನೀಂಭಕ್ತಿಗೆರ್ಕೆ ಮಿಷ್ಟಾನ್ನದಕೀರ್ತಿ ಯಂಕೇ
ಳ್ದುತ್ತರಭಾಗದಿಂಬಂದೆಂ ಕಡುಸುಖಮಾದುದೇನಾಲ್ಗಿನ್ನೂಟಂಘಟಯಿ
ಸದೇಕೆಂದೊಡೆ ನಮಗೆನರಮಾಂಸ ಮಿಲ್ಲದೊಡನುಮಾಗ ದದುಕಾರಣ
ಮಾ ಮಾತದಂತಿರಲಿಯೆಂದು ಕುಹಕವೇಷದೀಶನಿಂತೆಂದಂ

ಕಂ|| ಶರಣಗೆಮಿಷ್ಟಾನ್ನಮನಾ| ದರದಿಂದಿಕ್ಕುವೆನೆನಿಪ್ಪಬಿರಿದದುಸಾ
ಕಂ| ತಿರಲೇಕೆಂದೆನೆಕೇಳಾ| ನೆರೆದಿಷ್ಟವಂನೀವುದರಿದುನಿನಗಿಂದೆಂದಂ||

ವ| ಉರುದಿವ್ಯಾನ್ನಮನುರ್ಚಿತಂದು ಶರಣಪ್ರಾತಕ್ಕೆನೀನಿಕ್ಕಿದಾಪ
ರಿ ಯಲ್ಲಿನ್ನೆಲೆಭಕ್ತಕೇಳ್ ಒಡಗಣಿಂದಂಬಂದೆನಾಂಬೇಡಿತಂ | ನಿರು
ತಂ ಕೈಕೊಳಲಾಪುದುಳ್ಳೊಡೆ ಭವತ್ಸತ್ಪುತ್ರನಂಪಿತ್ರಾತಾಯ್ಕರದಿಂ
ದಂಕಡಿದಿಟ್ಟುನೆಲ್ಮೆಮಿಗಲಿಕ್ಕು ಲ್ಕಂಬೆನುತ್ಸಾಹದಿಂ|

ಎನುತ್ತುಮತ್ತುಮಿಂತೆಂದಂ

ಕಂ॥ ಸಿರಿಯಾಳನಿನ್ನಚಂಗಳೆ। ವೆರಸಣುಗನನೆಂತುಕಡಿಯುಬಳ್ಳಿ ಕೇಳ್ವ। ಗರ್ ರಿದೆಂದುದಿಕ್ಕಲಳವೇ। ನಿರುತಂಬಿಡುಬಿರಿದನೆಂದು ಗಿರಿಜೆ ನುಡಿದಂ॥ ೪೩॥

ಮೊದಲೊಳ್ನಿನ್ನಯಸುತನಂ। ಸುದತಿಯನುರೆತಿಳಿಬಳಿಕ್ಕನಮಗೆ ತಣಮಂ। ಮುದದಿಂಪೇಳೆನುತಂಕಪ। ಟದರುದ್ರನೆನಲ್ಕೆನುಡಿದನಾಸಿ ಯಾಳಂ॥ ೪೪॥

ವ॥ ಅಂತುನಿಜಸುತನಂ ಕಡಿದುಣಲಿಕ್ಕೆನಲ್ಕೆ ಹಸಾದವೆನುತ್ತಂ ಕೈಕೊಂಡು ಸಿರಿಯಾಳಂಕುಹಕವೇಷದೀಶಂಗೆನಿಜಭಕ್ತಿಯಿಂಕಾಪಂಗೊ ಟ್ಟುಬೀಳ್ಕೊಂಡುತನ್ನಮನೆಗೆ ಬಂದುಆತ್ಮಸತಿಯುಮನಮಂನೋ ಲ್ಕೆಂದು ಮಹಾದುಮ್ಮಾನಮಂ ತಾಳ್ದುಬಂದಿಂತೆಂದಂ।

ಕಂ। ನರಕಾಪಾಲಿಕನಿಂದು। ತ್ತುರಡಿಕ್ಕೆಂಬಂದುನಿನ್ನಸುತನಂಕೆ ಡಾ। ಸುರದಿಂದಿಕ್ಕೆನಲೊಂಸೌಂ। ದರಿನಿನ್ನಂಬೆಸಗೊಳಲ್ಕೆಭಯದಿ ಬಂದೆಂ।

ಎನುತ್ತುಮತ್ತುಮಿಂತೆಂದಂ।

ಕಂ॥ ಜನಮರಿಯದಂತುನಮ್ಮಯ। ತನೂಜನಂಬ್ಯೆತುಪೆರರಮ ನಂಕಡಿದಾಮನಸಿಜಹರಗಿಕ್ಕುವೆವಾ। ವೆನೆಕಿವಿಯಂಮುಚ್ಚಿಕೊಂಡು ಚಂಗಳೆನುಡಿದಳ್॥ ॥೪೫॥

ಪತಿಕೇಳ್ನಿಮ್ಮಯಪುಣ್ಯೋ। ನ್ನತಿಯಂಪೆರಗೀವುದಲ್ಲಮ ನಂಬೇಳ್ಪಂ। ಕ್ರತುರಿಪುವೆಂದರಿದೀಗಳ್। ಮತಿಪಿಗೆಕುಡದಿಂತುಟು ರೇವನೆಗೆಂದಳ್। ೪೬

ವ। ಎಂದುಚಂಗಳವ್ವೆಮನದೊಳ್ಮರುಗುತ್ತು ಕಟ್ಟಿನ್ನಂಬೆಸಗೊಳ ನೆಂಬಬುದ್ಧಿಯುಂಬಗೆವರೆ? ಬೇಗಂಪೋಗಿಕೊಟ್ಟೆನೆಂದು ಕೈಯ್ಯೊಳು ಗಿದುಬಡಿಹುರ ನೊಡಗೊಂಡು ಬಾಹೋಗೆಂದುನುಡಿಯುಲ್ಪಂತೋ ಬಡುತ್ತುಮಾಗಳ್।

ಕಂ। ಆನುಡಿಗಮೃತವನುಂಡಂ। ತಾನಂದಮನೆಯ್ದಿಮುಚ್ಚಿಚಂಗ ಕೊಟ್ಟೆಂ। ಸೂನುವನೆನೆಸಿರಿಯಾಳಂ। ಗಾನತೆಯಾದಳ್ಮಹೋತ್ಸ ವಿಗಲಾಗಳ್॥

ವ॥ ಮತ್ತಮಿತ್ತಲಾಶಂಕರ ... ಸಿರಿಯಾಳನತ್ಮ ಜನಮನ

ನೋಡಲೆಂದು ವಿದ್ಯಾನಿಕೇತನಕ್ಕೆ ಬರಲ್ಕಂಡು ಚೇಲಾಳನಿದಿರೆದ್ದು ಚ
ರಣಕ್ಕೆರಗಿ ಪರಮಾನಂದ ಮನೆಯಿಂ ದೇವರಿಲ್ಲಿಗೆ ಬಿಜಯಂಗೆಯ್ದುದರಿಂ
ದೆನಾಂ ಧನ್ಯನಾದೆನೆಂದು ನುಡಿವುತ್ತಿರಲ್ಕಾಗಳ್.
ಕಂ। ಎರಡುಂ ಕಂಗಳನಶ್ರುಗಳಿರದೊಗುತಂ ಪುಸಿಯದುಃಖಮುಂ ಮುಂ
ದಿಟ್ಟಾ। ಸುರದಿಂ ಚೇಲಾಳನ ಮುಖ। ಸರಸಿಜವಂ ನೋಡಿ ಕುಪಕ ದೀಕ್ಷಂ
ನುಡಿದಂ। ।೫೩॥
ಚಂ॥ ಗರುವನೆನಿಪ್ಪ ಮುದ್ದುಮಗನಿನ್ನು ಮನಾ ಸಿರಿಯಾಳನೋರ್ವ
ನಿ। ಪ್ಕರುಣದ ಭೈರವಂಗೆ ಕಡಿದಿಕ್ಕು ವನಕ್ಕಟ ಜೇಡ ಜೇಡಚೆ । ಚ್ಚರ
ನಿರದೋಡು ನೀಂ ಹತ್ತಣ ಮುಳ್ಳೊಡೆ ಪಾಡಿ ವರ್ದುಂ ಕೆಲಕ್ಕೆ । ನಿರ್ಭ
ರವೆನಲಾ ಕುಮಾರನೊಲವಿಂ ನುಡಿದಂ ನಗುತಾ ಕಪಾಲಿಯೊಳ್ ೫೪॥
ಕಂ। ಜನನುತ ಮುನಿಪತಿ ಕೇಳ್ಮೆ । ಜ್ಜನನೀಜನಕರ್ಕಳಿವರು ಮುಂಶಿ
ವನೀಯಂ । ದೆನಲೆನ್ನ ಯತನುವಿದು ಪಾ । ವನತೆಯು ನುರೆ ಪಡೆವುದೆಂದ
ನಾಚೇಲಾಳಂ। ॥೫೫!
ಮತ್ತಮಿಂತೆದಂ॥
ಕಂ। ಕೆಡುವತನುವಿಂ ದಿಡಕ್ಷ್ಣೆಯು। ನೊಡಲಂಪುಗುವೊಡೆ ಕೃತಾರ್ಥ
ನಾದೆಂ ನೀವೀ। ನುಡಿಯುಂ ನುಡಿದಂಜಿಸುವರೆ। ಮೃಡರೂಪನೆ ಎಂದು ನುಡಿ
ದನಾಚೇಲಾಳಂ। ।೫೬।
ವ॥ ಈ ನುಡಿಯುಂ ನುಡಿವ ಚೇಲಾಳನ ನಿಚ್ಚಟದ ಕಲಿತನದ ಭಕ್ತಿಗೆ ಭೂ
ತೇಶಂ ಮನದೊಳ್ಕೂರತೆಯಂ ಕಾಣದೆ ಪರಸುತ್ತೆ ವರ್ದಮುನ್ನಿನಾಲದ
ಮರಕ್ಕೆ ಪೋಗಲ್ಕಿತ್ತಲ್॥
ಕಂ॥ ಗಿರಿಜಾಪತಿ ಪಸಿದಂತಿರ । ಲಿರಡಾತ್ಮೇಶ್ವರ ನನೇಮದಿಂ ಚಂಗಳೆ
ಮುಂ। ದಿರದಿಂ ಭರದಿಂದಾಗ । ಳ್ವರಸುತ ಶೋಭಮುಪಮುತಕ್ಕೆ ನಡೆತರು
ತಿರ್ದಳ್॥ ॥೫೭॥
ನುಡಿಗರೆನಿಳಿವೆಗಂಪಿಂ । ಗಳಿಯಡಿಗಳ್ಗಂಚೆಯೊರಲ್ದು ಬರೆ ಚಂಗಳೆ
ತನ್ನ ಮೃಡನ ಸವಿಡುತ್ತನಿಪ್ಪ। ಕಡು ನೇಹದ ಮಗನ ಪೊರೆಗೆ ಬಂದಳದಾ
ಗಳ್॥ ೫೮॥
ಅಂತು ಬಂದ ಚಂಗಳಾದೇವಿಯುಂ ಕಂಡಿದಿರೆದ್ದು ಕೈಯ ಮಲಗೆ ವೆರಸು ಪರಿ
ತಂದು ಚೇಲಾಳಂ ಕಾಲ್ಗೆರಗಲ್ಕೆರಗಲೀಯದೆ ನೇಹದಿಂದಪ್ಪಿಕೊಂಡಾಗಳ್.

ಕಂ॥ ಸೊಗಸಂಬೀರುವಪೋಷವ.। ಮಗನಂತೆಗೆದೆತ್ತಿಕೊಂಡು
ತಸದಿಂದಂ। ಮಗುಳ್ದರಮನೆಗಾಚಂಗಳೆ । ಬಗೆಯಿಂಬಂದಳ್ನಿಜೇ
ರಂಬೆರಗಾಗಲ್॥ ॥

ವ॥ ಅಂತುಬಂದುಚಂಗಳಾದೇವಿ ಚಿರುತೊಂಡಮಾಹೇಶ್ವರಂ
ಸಂಬಡಲ್ಕೆನಿಜಮಂದಿರ ದೊಳ್ತ್ರಿನಚೌಕಮಂತುಂಬಿ ಪೊನ್ನ
ಣೆಯೊಳ್ ಚೇಲಾಳನಂಕುಳ್ಳಿರಿಸಿ ಸಂಭ್ರಮದಿಂದಂಗ ತೈಲಮಂ
ಬಹಳ ಪರಿಮಳೋದಕದಿಂ ಮಜ್ಜನಮಂಮಾಡಿಸಿವಿಭೂತಿಯನು
ಳನಂಗೆಯುದ್ರುದ್ರಾಕ್ಷಾಭರಣಮಂ ತೊಡಿಸಿಬಾಣಸದೊಳಯಿಂ
ದುತೊಡೆಯಮೇಲಿಂತೆಗೆದುಕೊಂಡಾಗಳ್॥

ಕಂ॥ ಪರಉತನಂಚಂಗಳೆಪಿಡಿದಿರೆಕೊರ್ಗತ್ತಿಗೆಯುನಾಂತುಸಿರಿ
ಳಂಕಂ। ಧರಮಂಕುಯ್ಯಲ್ಕಿರವದು । ಹರಹರಯೆನುತಿರದೆ ಧರೆಗೆ
ಲ್ದತ್ತಾಗಳ್॥ ॥

ಗಿರಿಜಾತೆಮುಖ್ಯಸುರರ । ಚ್ಚರಿವಟ್ಟೀಕ್ಷಿಸುತೆಬೆರಗುವಡೆವಿರ
ಲ್॥ ಸಿರಿಯಾಳಂನಿಜತನಯನ । ಶಿರಮಂಕರದಿಂಪೆತೆಗೆದನತು
ತ್ಸವದೊಳ್॥

ವ॥ ಶಿರಮಂಬೇರಿರಿಸಿಟ್ಟುಭೋರೆನುತಮುಣ್ಮುತ್ತಿರ್ಪರಕ್ತಾಂ
ಭರದಿಂಸ್ಥಾಲಿಯೊಳಾಂತು ತೋಳ್ತೊಡೆಗಳೊಳ್ಪಿಂಡಂಗಳಂ ಕ
ನೊಣ್ಣರಳಂಕಾಯ್ದತಿವೇಗದಿಂ ತೊಳೆದುತನ್ಮಾಹೇಶ್ವರಂಗಿಕ್ಕ
ದರದಿಂಚಂಗಳೆಶಾಕಮಂ ನಲಿದುನಾನಾಭೇದದಿಂಮಾಡಿದಳ್॥

ಕಂ। ಪರಿಮಳಿಪಸಂಬರದಿನುರೆ। ಪೊರೆದಾತ್ಮಜನಡಗನಿಕ್ಕಿವ
ರಿಗಯೆಂ। ಬುರುತರಭಕ್ಷ್ಯಂಗಳನಾ । ದರದಿಂದಂಚಂಗಳೆಪ್ಪೆಮಾ
ಳಾಗಳ್। ॥

ವ। ಅಂತೀಪರಿಬೊಳ್ ಚೇಲಾಳನಚಾರುಪಿಸಿತಂಗಳನಿಕ್ಕಿಷಡ್ರಸಾ
ಗಳಂಸಮೆದು ವಿಭೂತಿಯಿಂಭಾಂಡಂಗಳಂರಕ್ಕೆ ಗಟ್ಟಿಬಾಸಣಿಸುತ್ತಿ
ತ್ತಲ್ಮನೆಗೆನಿಶ್ಚಾಸಿಚಂಡಿನಿಯೆನಿಪ್ಪ ಚೇಟಿಕೆಲಕ್ಕೆಬಿಸುಟಿರ್ದ ತಲೆ
ಡಂಕಂಡುತೆಗದು ಕೊಂಡಾಗಳ್॥

ಕಂ॥ ಲೀಲೆವಿಗಲ್ಬಂಡಿಣಿಚೇಲಾಳನತಲೆಯೋಪನಟ್ಟುಪುಳಯು
ಲವಿಂ। ಮೇಲೋಗರವೆಂದೆನಿಸಿನಿ । ಜಾಳಯುದೊಳ್ಮುಚ್ಚಿ ಜತನ
ಪ್ರೆಶಿಟ್ಟಳ್॥

ವ॥ ಅಂತುಶಿವಲಿಂಗದಬೋನಮೆಲ್ಲಂ ಮಾಡಲಾಗಲ್ಕೆ ಪರುಷದಿಂಚಂ ಗಳಾಪೇವಿಷಹುಸಮ್ಮಾರ್ಜನೆಯುಂ ಮಾಡಿರಂಗವಾಳಿಯುನಿಕ್ಕಿ ಗುಡಿ ತೋರಣಗಳಂಕಟ್ಟಿ ಚಿರುತೊಂಡಮಾಹೇಶ್ವರಂಗಿಂತೆಂದಳ್। ।೬೪।

ಕಂ। ವಡೆಯುಪ ಸಿವರ್ಚಾಜ್ಞರ! ನೊಡಗೊಂಡೇಳ್ತಪ್ಪೆಂದುಚಂ ಗಳೆನಲವಿಂ। ನುಡಿಪಲ್ಕಾಸಿರಿಯಾಳಂ; ಕಡುತವಕವಿಪ್ರೋದನಭವನಿ ರ್ಪಡೆಗಾಗಳ್॥ ।೬೫॥

ವ। ಅಂತುಪೋಗಿ ಕೆರೆಯಲ್ಕೆಂದು ನಿಂದಿರಲ್ಕಂಡು ಸಿರಿಯಾಳನಮುನ ಮುಂನೋಡಲ್ಕೆಂದಾತಾವಿನೊಳ್ ಸದಾಶಿವನದೃಶ್ಯಮಾಗಿರಲ್ಕಾಗಳ್।

ಕಂ। ಜಳವಿಲ್ಲದಕೆರೆಪುಕ್ಕಾ ಘಳವಿಲ್ಲದಚೆಪ್ಪುನಯನವಿಲ್ಲದವಧುಸ ತ್ಪಳಮಿಲ್ಲವಂದವಾಯಿತ್ತು।ಗಳೆಈಶ್ವರನಿಸ್ಸನುಳಿಪುಚೆಮುನಮುದಿಕರ್ಗಂ

ವ॥ ಅಂತಾಲದಮರದಡಿಯೊಳ್ ಹರನಿಲ್ಲದೆ ಹಾಳಾಗಿರಲ್ಕಂಡಬೇಳಾಗಿ

ಕಂ। ಪರಹರವಿಕಳನೆಸಿಸುವ।ಸಿರಿಯಾಳಂಶಿವನಲ್ಲಿಕಾಣದೆಕಣ್ಗೆ।ಟ್ಟ ರದರಸಿಮೂರ್ಛೆಯೊಳ್ಬಿ। ದ್ದಿರೆಕೃಪೆಯಿಂಬಂದುಗಿರಿಶನೆತ್ತಿದನಾಗಳ್।

ವ। ಅಂತುಹರಣಂಬಂದಂತೆದರ್ದು ಸಿರಿಯಾಳಂಪರನ ಪಾದದೊಳ್ಪೊ ರಳ್ದಲಿದೇವಮಾಡಿದ ಬೋನವಾರಿದ ಪುದೆಂದುಬಿನ್ನಪಂಗೆಯ್ಯಲ್ಕರುಣ ದಿಂಸದಾಶಿವಂ ಪೂರಮಡಲ್ಕಾಗಳ್!

ಕಂ। ಸಿರಿಯಾಳಂಕೈಗೊಟ್ಟು! ದರದಿಂದೇವಾಳಿಪೊಗಳೆಕಪಟದಗಿರಿ ಜಾ। ವರನಂಸಂತಸದಿಂತ । ನ್ನರಮನೆಗೆಡೆಗೊಂಡುಬಂದನುಬ್ಬಿದ ತ್ತಾಗಳ್॥ ೬೮॥

ವ। ಅಂತುಬಂದುಗ್ರರೂಪಿನ ಸದಾಶಿವನಡಿಗೆರಗಿಭಕ್ತಿಮಿಗೆಪಾದಪ್ರ ಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡುಚಂಗಳೆ ಸಿರಿಯಾಳಕೈದು ಗೊಟ್ಟೊಳಯಿಂಕತಂದುಪೀಠಮನಿಕ್ಕಿಕುಳ್ಳಿರಿಸಿಗಂಧಾಕ್ಷತೆಗಳನಿಟ್ಟು ಪುಷ್ಪಮಾಲೆಯಿಂದ ರ್ಚಿಸಿಪೊನ್ನ ಪರಿಯಾಣಮನಿರಿಸಿಕೆಲವಟ್ಟಲನಳವಡಿ ಸಿಮುತ್ತಮಾಗಳ್

ಚಂ। ಮಿಗೆಪರಿಪಾಕಮಾದನಿಜಪುತ್ರನಪೇಹದ ಮಾಂಸಶಾಕಮುಂ ಮಗಮುಗಿಸುತ್ತಮಿರ್ಪವಡೆ ಪೂರಿಗೆಗಾರಿಗೆ ಪೇಣಿಖಂಡಮುಂ। ಡಿಗೆಗ ಳನಿಕ್ಕಿಭಕ್ತಿಮಿಗೆಮಜ್ಜಿಯತುಪ್ಪದ ಒಟ್ಟಲಿಟ್ಟುಕೈಮುಗಿದೆರಗಲ್ಕೆಚಂ ಗಳೆವನೀಕ್ಷಿಸುತೆಂದನುದಗ್ರದೀಶ್ವರಂ। ೬೯॥

ವ|| ವುತ್ತಂ|

ಕಂ|| ಎಲೆವುಗಳೆಇಕ್ಕಿದಿವರೊ| ಳ್ತಲೆಯೋಡಿನಶಾಕಮಿಲ್ಲೆನ
ಗಳೆಚಂ|ಚಲೆಯಗಿದಿಟಕೆ ಮಾಡಿದಪೊಲ ಬಿಲ್ಲೆನುತಂಜಿಪತಿಯ
ಸುವಾಗಳ್|

ಅದನರಿತಂತಾಚಂಡಿಣಿ| ಮುದದಿಂದಟ್ಟೆರ್ದತಲೆಯುಮೇಲೊ
ಮಂ| ಪದೆದೀಯಲ್ಸಂತಸದಿಂ|ಮದನಾರಿಗೆಚಂಗಳವ್ವೆಬಡಿಸಿದಳಾ

ವ|| ಅಂತುಕಠೋರತೆಯಿಲ್ಲಪೆಲ್ಲಮಂ ಒಡಿಸಲ್ಕಂಡು ಮನದೊಳ್ಕ
ಗುತ್ತಮಿನ್ನಾಪಕಠೋರತೆಯನಿಕ್ಕುವೆ ನೆನುತ್ತೆಲೆ ಸಿರಿಯಾಳಕೇಳ್
ಸಂಗಡದೊಳೊಬ್ಬರಿಲ್ಲದೆ ಂದುಂಭೋಜನವೆಮಗಳವಡದದು ಕಾ
ನೀಂನಮ್ಮ ಪಂಜ್ತಿಯೊಳ್ಕುಳ್ಳಿರ್ದಾರ್ ರೋಗಣೆಯುಮಾಳ್ಪದೆನೆ ಹ
ಮೆಂದು ಪೊಡಮಟ್ಟುಕುಳ್ಳಿರಲ್ಕಾಗಳ್||

ಕಂ|| ತನಯನಮಾಂಸವನದನಾ| ಮನಸಿಜರಿಪುಗಿಕ್ಕುವಂದದಿ
ಗಳೆತ| ನ್ನಿನಿಯಂಗೆಮನದೊಳಳ್ಕದೆ | ಕನಕದಹರಿಯಾಣದಲ್ಲಿ
ಳಾಗಳ್|

ವ|| ಅಂತದಂಕಂಡು ಚಿತ್ತಜಾರಾತಿಚಿತ್ತ ದೊಳ್ಪದರಿತಾನೇ
ದಂಮಾಡಿದುದರ್ಕೆತನ್ನೊಳ್ಮೆಚ್ಚಿ ಮೆರೆಯಲ್ಕೆಂದು ನಿಮ್ಮತನಯ
ರೆದುಕೊಂಡುಬನ್ನಿ ಮೆಂಜೊಡೆಮನ ದೊಳ್ಬೆಗಡುಗೊಳುತಿ ಪ
ಯೊಳವೂಹೇಶ್ವರಂಗೆ ಚಂಗಳಾದೇವಿಧೈರ್ಯಮಂಪಿಡಿದು ನಿ
ದಿಂತೆಂದಳ್|

ಕಂ|| ಮದನರಿಪುವಾಡಿಸುವಸೂ ತ್ರದಬೊಂಬೆಗಳಿಂದೆನಿಪ್ಪನ
ನಿಮಗಂ| ಬೆದರಲ್ಕೇಂಸುತನಂನಿ| ಲ್ಲದೆಕರಯೆನೆಕರೆವುದೆಂದು
ನುಡಿದಳ್|

ವ|| ಅಂತುನುಡಿದಚಂಗಳೆಗೆಸಿರಿಯಾಳನಿಂತೆಂದಂ||

ಕಂ|| ಕಾರುಣ್ಯಾಕರಶಂಕರ|ನಾರೋಗಿಸಲೊಲ್ಲನಮ್ಮಸುತನಿ
ತ್ಕಾರಣಮೆಲೆಚಂಗಳೆನೀಂ| ಧೀರತೆಯಿಂಕರೆವುದೆಂದನಾಚೆರುತೊ

ವ|| ಅಂತದಂಕ್ಯೆಕೊಂಡು ಚೆಂಗಳೆಚೇಲಾಳನಂಕ್ಕರೆಯಲ್ಕ ನಂ

ಚಂ|| ಸುರುಚಿರದು ವಿರ್ಗಯೊಳ್ನವಶರಾವೆಯೊಳು ಗ್ರನಚಾರು
ದ ... ಜನಶರೀರದನೂ ತನ್ ...

ಚೆರ್ಱುತಿರೆ ಕಾಣುತಂ ಘರದಿ ಚೆಂಗಳೆ ನಿಷ್ಠೆಯೊಳೀಶನಾಜ್ಞೆಯಂ ಘಟಿಯಿ
ಸಿ ಬಾಕುಮಾರಪನ ಲಾಕ್ಷಣದೊಳ್ ಪರಿತಂದನರ್ಥಿಯಿಂ। ೭೫॥
ಕಂ। ಕರೆಯಲ್ತ್ವರಿತದಿ ಬಂಪಾ । ವರಸುತನಂ ಕಂಡು ಜನನಿ ಪುದ
ಮಂ ತಳೆದಳ್। ಪಿರಿದುಂ ಪರುದಿವಸಕ್ಕಾ। ಹರಂಗಶಾಕವನೆ ಮಾಳ್ಪೆನೆಂ
ಬೀಬಗೆಯಿಂ॥ ॥೭೬
ನೆಳತೋಳ್ಲೊಡೆಬಸುರಂಬೆಡೆ । ಗಳೊಳೊಲವಿಂ ತಳಿವ ಸಂಘರಂಗಳ
ಕಂಪು। ಗ್ಗಳಿಸುತಿರಲ್ ಚೇಲಾಳಂ ಘಳಿಲನೆ ಬಂದೀಶನಂಘ್ರಿಗೆರಗಿದನಾ
ಗಳ್। ।೭೭।
ವ। ಅಂತಡಿಗೆರಗಿ ಕೈಮುಗಿದು ನಿಂದಿರ್ದು।
ಕಂ॥ ನೊಸಲವಿಭೂತಿಯು ಶ್ರುತಿಗಳ। ಪೊಸಮಿಸುನಿಯ ನಂದಿಕೊರ
ಳಮುತ್ತಿನ ಹಾರಂ। ಲಸಿತಾಂಘ್ರಿನೂಪುರಂ ಪಿರಿ। ದೆಸಯಲ್ಚೇಲಾಳನೀಕ್ಷ
ಸಿದಿರೊಳಿಮೆರೆದಂ। ।೭೮।
ವ। ಅಂತು ಮೆರೆವಧೀರೋದ್ಧಾರನಪ್ಪ ಚೇಲಾಳನಂ ಪಶುಪತಿ ಪರಿಭಾವಿ
ಸಿ
ಕಂ। ಘನತರಕೃಪೆಯಿಗೆ ಚೇಲಾಳನನೀಕ್ಷಿಸಿ ಕರೆದು ತೆಗೆದು ಬಿಗಿಯಪ್ಪಿ
ಮಹಾ॥ ವಿನಯದಿ ಮುದ್ದಾಡಿಸಿ ಕರ। ವನಜದಿ ಮೈಯ್ದಡವಿ ಶಂಭು ಪ್ರೋವಿ
ದನಾಗಳ್। ।೭೯॥
ವ॥ ಅಂತು ಬಿರಿದಿನ ಛಲದೆಸಕದ ಮಹಾಭಕ್ತಿಯಂ ಮೆರೆದ ಸಿರಿಯಾ
ಳನಂ ಚೆಂಗಳಾದೇವಿಯಂ ಶಂಕರಂ ಕಾರುಣ್ಯದೃಷ್ಟಿಯಿಂ ನೋಡಿ।
ಕಂ। ತರಕಟಗಾಡಿಸ್ಪೈರಿಸಿ। ಚೆರುತೊಂಡಂ ಚೆಂಗಳವ್ವೆ ನೇಹದ ಮ
ಗನಂ। ತರಿದಿಕ್ಕಿದುದ ಕೆಯ್ಕಲವಿಂ ಕರೆಗೊರಲಂ ಮುಚ್ಚೆ ರೂಪದೋರಿದನಾ
ಗಳ್। ।೮೦।
ಚಂ॥ ವರಜಡೆ ದೇವಗಂಗೆ ಪೆರೆ ಭಾಳದ ಕಣ್ಣಣಿ ಕುಂಡಲಂ ವಿಷಂ । ಸು
ರುಚಿರ ರುಂಡಮಾಲೆ ಭಸಿತಂ ಲಸಿತಾಂಗದ ಗೌರಿ ಸಾಮಜಾ। ಸುರನನಿ
ಜಾಜಿನಂ ದಮರು ಗಂ ಘನಶೂಲ ಮತೀವರ ವ್ಯಾಪ್ರ । ಪ್ಪುರುದಶ ಬಾಹು
ಪಂಚಮುಖ ಮೊಪ್ಪೆ ವಿರಾಜಿಸಿದಂ ಮಹೇಶ್ವರಂ। ॥೮೧।
ಮ॥ ಬಿಳಿಪೆತ್ತಂ ಮುತ್ತಿಗಂ ಕರ್ಪುರದ ಬೆಳಕು ಮಾಮುತ್ತಿಗಂ ಕರ್ಪು
ರಕ್ಕಂ॥ ಜಳಜಾತಾನೀಕದುದ್ಯತ್ಪ್ರಭೆಯೆ ಬಿಳಿಪದಾ ಮುತ್ತಿಗಂ ಕರ್ಪುರ
ಕ್ಕಂ। ಜಳಜಾತಕ್ಕಂ ಪವಿತ್ರ। ದ್ಯುತಿ ನಿಗಬೀವಾ ಮುತ್ತಿಗಂ ಕರ್ಪುರಕಂ

ಜಳಿಜಾತಕಂಪವಿಪ್ರದ್ಯುತಿ ಗುರಬಿಳಿಪಾವರ್ವತೀನಾಥ ||ಹಂ||೪೩||
ಕಂ|| ಹರನಮುಳದಿವ್ಯರೂಪಂ| ಸಿರಿಯಾಳಂಚಂಗಳಪ್ಪೆಚೇಲಾಳಂ
ಡುರುಪರವಶದಿಂದು ಘೇಯೆನು| ತಿರವೇಲ್ತಂವತುಳಸುಖದಿನಡಿಗ
ರ್ದರ್| |೪೪||
ವ|| ಅಂತುಪದಕಮಳದೊಳ್ಪೊಗಳ್ದು ನಂದಾಶುಜಳಭರಿತ ನಯ
ರಾಗಿಭಕ್ತಿರಸದಿಂಪುರಿಡೊರಗಿ ಪರವಶೀಭೂತರಾಗಿ ರ್ಪತದ್ಭಕ್ತ
ಭಯುಹಸ್ತದಿಂದೆತ್ತಿಕುಳ್ಳಿರಿಸಿಬೋಳೈಸಿ ಮೆಯ್ದಡವಿಕರುಣಾಕರ ಶ
ರಂವೀರಭದ್ರಾದಿಗಣಗಳ್ಗಿಂತೆಂದಂ||
ಕಂ|| ಪಿರಿದುಂತಾವುತ್ತಂಪೆಮಗಂ! ದಿರೆನಿಪ್ಪೀಭಕ್ತರವಯವ
ಳ್ ಬೇರಾಗಿರುತಿರ್ಪುವಲ್ಲದಾತ್ಮಂಪರಿಕಿ ಪೊಡೊಂದೆನುತವಿರ್ದನ
ದಗಜೇಶಂ|| |೪೫||
ವ|| ಮತ್ತಂ ತನ್ನಂಕದೊಳ್ಮೆರೆವಗಿರಿಜಾದೇವಿಗೆಗಿರಿಶನಿಂತೆಂದ
ಕಂ|| ಧರೆಯೊಳ್ಸರಿಯಾಳಂಗಾ ದ್ವೊರೆಗುಣನಿಧಿಚಂಗಳೆಪ್ಪೆಗಾಪ
ಸಟಿಸಚ್ಚರಿತದಚೇಲಾಳಂಗಾರ್ಸರಿಯೆನು ತಂಗಿರಿಜೆಗಭ ವನೊಲಿ
ನುಡಿದಂ|| |೪೬||
ವ|| ಮತ್ತಂಮುಂದೆ ನಿಂದಿರ್ದನಂದಿನಾಥಂಗಿಂದು ಧರನಿಂತೆಂದ
ಕಂ|| ಕಡಿದಿಕ್ಕೆನೆನಿಜಸುತನಂ|ಕಡಿದಿಕ್ಕರೆಯೆಂದೊಡಾಕ್ಷಣಂಕ
ರೆನಲ್|ಪೊಡವಿಯೊಳಪರಂತೆನ್ನನುಡಿಯಂ ಪಾಲಿಸಿದರಾರೆನುತ್ತ
ಪೊಗಳ್ದಂ|| |೪೭||
ವ|| ಅಂತಾಸದ್ಭಕ್ತನಂಪೊಗಳ್ದು ಕೆಂಪಾಡುತ್ತಾತ್ತಕ್ಷಣಂದಿವ್ಯವಿ
ಣಮುಂಬರವೇಳಲ್ಕಾಗಳ್||
ಕಂ|| ವೃಂದಾರಕಭೇರೀರವ ವೃಂದಮುದಪ್ಸರಸಯುವತಿಯರನ್ನ
ಮುನಾನಂದದಿನಾಡಲ್ಕಂಬರ| ದಿಂದಂಪುಷ್ಪಕಮುದಿರದೆಬಂದುತ್ತಾಗ
ವ|| ಅಂತುಬಂದದಿವ್ಯವಿಮಾನದೊಳ್||
ಕಂ|| ಚೇಲಾಳಂಚಂಗಳೆಸಿರಿ |ಯಾಳಂಚಂಡಿಣಿಯೆನಿಪ್ಪಭಕ್ತರನ
ವಿಂ| ದಾಲಸಿತಪುಷ್ಪಕದೊಳತಿ, ಲೀಲೆವಿುಗಲ್ಕೊಳಕುಳ್ಳಿರಿಸಿದಂಗಿರಿ
ವ! ವತ್ತಮಾಗಳ್|
ಸಿರಿಯಾಳಂಚಂಗಳೆಯುಂ|ಪರಚೇಲಾಳಂಪೊದಳು ಮೆರೆವೆಡೆಯೆಂದಿ

ರನೆಲವಿಂತತ್ಕಾಂಚೀ ಪುರಜನವಂ ಪುಗಿಸಿದಂವಿಮಾನದೊಳಾಗ

ವ|| ಅಂತುಸಿರಿಯಾಳಂಮೊದಲಾದ ಪುರಜನಂಪರಿಜನಂಬೆರಸುಬಹುಶತತಳಮಪ್ಪದಿವ್ಯವಿಮಾನಮಂ ತಳರ್ವುದೆಂದುನಿಯಮಿಸಲಾಗಳ್||

ಕಂ|| ಸಿರಿಯಾಳಂಮೊದಲಾದಾ | ಪರಿಜನಸಹಿತೆಸೆವರತ್ನಮಯಪುಷ್ಪ
ಕಮಂ| ಬರಮಂಬೇಗುತ್ತಂನ್ನಿ|ರ್ಜರರಿದಿರ್ಗೊಳೆತಾರಗಿರಿಗೆಬಂದುತ್ತಾ
ಗಳ್| |೯೦||

ವ|| ಅಂತುಬಂದ ಸತಿಸುತರ್ಸಹಿತಮೆಸೆವ ಚಿರುತೊಂಡಮಾಹೇಶ್ವರಂ ಬೆರಸುನಿಜಪ್ರಮಥಗಣಪರಿ ವೃತಂಕೈಲಾಸಾಸ್ಥಾನಮುಂಟಪದೊಳ್ಸದಾಶಿವನೊಡ್ಡೋಲಗಂಗೊಟ್ಟುಕುಳ್ಳಿರ್ದಾಗಳ್ ||೯೦||

ಕಂ|| ಚೆಂಗಳಿಗೆಮೇಣುಚಿರುತೊಂ.ಡಂಗಂಚೆಂಡಿನಿಗೆತನುಜಚೇಲಾ
ಳಂಗಂ|ಮಂಗಳಮಯಗಣಪದವಿ| ತ್ತಂಗಜಹರನೆಸೆವುತಿರ್ದ ನಾಸ್ಥಾ
ಯಿಕೆಯೊಳ್|| ೯೦

ಗದ್ಯ— ಇದುಸಕಲಸುರ ನಿಕರಮುಕುಟಮಾಣಿಕ್ಯ ಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿವಿರಚಿತ ಮಪ್ಪತ್ರಿಷಷ್ಟಿಪುರಾತನರಚಾರಿತ್ರದೊಳ್ಚಿರು ತೊಂಡ ಮಾಹೇಶ್ವರ ಕಥಾವೃತ್ತಾಂತಂ

ದಶಮಾಶ್ವಾಸಂ



ಓಂ

## ಏಕಾದಶಾಶ್ವಾಸಂ

### ಇಹಪ್ಪಗೆಯೊಂಪರೆಂಬ ಸಿಂಘುಬಲ್ಲಾಳನಕಥನಂ

ಕಂ॥ ಶ್ರೀಮದಿನಿಪಪಗೆಯೊಳ್ಯ। ಮಹಾವಮ ಹೇಶಂಗೆವೆಚ್ಚಿ
ದವಿತ್ತಾ। ಕೋಮಳಕಮಳಾಕರವುದ। ಸಾಮಜಸೋಮೋ
ಲ್ದು ಪಾಲಿಕೆನವ್ಮಂ॥
ವರಚೋಳದೇಶದೊಳ್ಸಿರು ಚೆರಚನ್ಸೋದ್ರ್ಯೇಪಳದದುರ್ಗದಿಂಪರಿ
ಹರಗೃಹನಿಕಾಯದಿಂದಂ ಪಿರಿದುಂಕಾವೇರಿಯೆಂಬಪುರಮೆಸದಿಕು
ಮತ್ತಮಲ್ಲಿ
ಕಂ॥ ವಗಶಾಲಿಯುಗರ್ದೆಗಳೊ।ತ್ತರದಿಂಪುಂಡ್ರೇಕ್ಷುವಾಟಸಂ
ವಿಂಭಾ। ಸುರತರತಟಾಕನಿಕರದಿ। ಪಿರಿದುಂಕಾವೇರಿಯೆಂಬಪುರ
ದಿಕುರ್ಜಂ॥
ಮತ್ತಮಲ್ಲಿ
ದೇವಾರ್ಚನೆಗಳಘಂಟಾ। ರಾವಂಧೂಪದಸುಗಂಧದಿಂದೊಪ್ಪ
ಕ್ಕಾವಾಸಂಚಲ್ವಿಂದಂ। ಕಾವೇರಿಪಟ್ಟಣಂಕರಂಸೊಗಯಿಸುಗು
ಘನಕಾವೇರೀಪುರದೊಳ್। ಗನುರಾಗದಿನಿರ್ದನಧಿಕತರಘನವಿ
ಘನವನನಿಳಕೆಯ್ವುವೃತ್ತಂ।ಜನನುತಗುಣಗಣನೆನಿಪ್ಪಹಪ್ಪಗೆಯೊಂ
ಪಿರಿದುಂಘನದುನ್ನತಿಯಿಂ। ವರಕಿಸದಾಚೇರಚೋಳರಂ ಶಿವ
ಶ್। ಒರಲೊಲವಿಂದೆರಗುತ್ತಂ। ಹರುಷಂಮಿಗಲಿರ್ದನೆಂದಹಪ್ಪ
ಪಂ।
ದಿನದಿನದೊಳ್ಭಕ್ತಿಮಿಗಲ್।ಘನಲಿಂಗದಪೂಜೆಗೆಯ್ದು ಕರಲಿಂಗ
ನೆನಿಸುವಜಂಗಮಭಕ್ತಿಯ।ನನುನಯದಿಂಮಾಳ್ಪನೆಂದಿಹಪ್ಪಗೆಯೊ
ಮ. ಸ್ರ. ಮನವೊಲ್ದಿಷ್ಟಾನ್ನವಂಸದ್ವಸನತತಿಗಳಂ ರತ್ನಭೂ
ಳಿಯುಂವಾ।ಹನಸಂದೋಹಂಗಳಂಬೆಳ್ಗೊಡೆಗಳನು ರುವಿತ್ತಂಗಳ
ಳ್ಳಸುಚ್ಛ್ವಂ। ದನಮುಂಕರ್ಪೂರಮಂ ಸಚ್ಛರಣಸಮುದಯಕ್ಕಿತ್ತು
ಣ್ಯಮಂನೆ। ಟ್ಟನೆತಾಳ್ದಾನಂದದಿಂದಂ ಪೆಸರ್ವಡೆದೆಸೆದಂ ಸಿಂಘುಬ
ಭಕ್ತಂ॥

ಕಂ|| ಅತಿಶಯವಿತರಣಸಮುಹೋ| ನ್ನತಿಯಂಪರಿಭಾವಿಸಲ್ಕಿಹಪ್ಪ
ಗೆಯಾಂಡಂ| ಕ್ಷಿತಿತಳದೊಳ್ಜಂಗಮಸಂ| ತತಿಬೇಡಿತನೀಯದಿರ್ಪರಾ
ಯರಗಂಡಂ|| |೯||

ಪರಿಕಿಪೊಡೀಬಿರಿದಂನಿ| ರ್ಭರದಿಂಪಾಲಿಸುತೆಭಕ್ತಸಮುದಯಕತ್ಯಾ
ದರದಿಂಬೇಡಿತನೀವು ತ್ತಿರುತಿರ್ದಂಸುಖದಿನಂದಿಹಪ್ಪಗೆಯಾಂಡಂ|| ೧೦

ಪಿರಿದುಂಸೌಂದರ್ಯದಿನಾ|. ಸ್ಮರನಂವಿಧುವಂಜಯಂತನಂ ಮಾರು
ತನಂ| ಹರಿಯಂಪಳಿಯುತ್ತುಂಸಾ | ದರದಿಂದಿರುತಿರ್ದನಂದಿಹಪ್ಪಗೆ
ಯಾಂಡಂ|| ||೧೧||

ಸುರರುಚಿರಚುಕ್ಷ್ಮಗಣಂಬೆರ | ಸಿದೊಪ್ಪುವಚಂದ್ರನಂತೆನೂರ್ಸಂಖ್ಯೆ
ಯಸೌಂ| ದರಿಯರೊಳಖಂಡಸುಖದಿಂ| ದಿರುತಿರ್ದಂಪ್ರೀತಿಯಿಂದಿ
ಹಪ್ಪಗೆಯಾಂಡಂ|| ||೧೨||

ಪಿರಿದುಂನೂರ್ಸಂಖ್ಯೆಯಸೌಂ|ದರಿಯರೊಳುಡುಗಣಪೊಳೆಸೆವಶಶಿ
ಕಳೆಯಂತಾ| ದರದಿಂರತ್ನಾವತಿತ| ದ್ವರನಮನೋರಮೆಯೆನಿಪ್ಪಳ
ಡನೇವೊಗಳ್ವೆಂ|| ||೧೩|

ಚಂ|| ಸರಸತಿಯಂತೆಜಾಣ್ಮೆಗೆ ತವರ್ಮನೆಗಾಡಿಗೆಗೊತ್ತುಪೆರ್ಮೆಗಾ
ಗರವೊಲವಿಂಗೆ ಪೇಟೆಸೊಬಗಿಂಗೆಡೆಮ್ಮೆಮೆಗೆ ತಾಣಮಾವಗಂ ಗರುವಿ
ಕೆಗಿಕ್ಕೆಸಂದಜನದೇಳ್ಗೆಗೆಪಕ್ಕೆಯೆನಿಪ್ಪಪೆಂಪಿನಿಂ ಪಿರಿದೆಸೆದಿರ್ಪಳಾಮ
ಡದಿಲಕ್ಕಣಮುಂಸಲೆಬೀರುತಕ್ಕರಿಂ|| ||೧೪||

ಕಂ|| ಸ್ಮರಲೀಲಾಪಾಲಿಕೆಸ| ದ್ವರಲೋಚನಭೃಂಗಕುಸುಮಮಾಲಿ
ಕೆಭಕ್ತ್ಯಂ| ಬರುಹಮರಾಳಿಕೆಯೆನಿಸು ! ತ್ತಿರುರಮ್ಯತೆವೆತ್ತು ಕಾಂ
ತೆಕರಮೆಸೆದಿರ್ದಳ್|| ೧೫||

ವ|| ಅಂತೆಸೆವನಿಜಮನೋಹರೆಯುಪ್ಪರತ್ನಾವತೀದೇವಿ ಯೊಳ್ಕಾಮ
ಕೇಳಿಯಿಂದಿ ಹಪ್ಪಗೆಯುಯಾಂಡಂ ಸಂಸಾರಸುಖವನನುಭವಿಸುತಮಿ
ರ್ದನಂತುಮಲ್ಲದೆಯುಂ||

ಉ|| ಬಾಲಹಿಮಾಂಶುಶೇಖರನ ಭಕ್ತಸಮಾಜಕೆಸಿಂಧುವೆತ್ತಿಸ ಲ್ಲೀಲಿ
ಯೊಳೆಂದುದಂ ತುಡುಕಮಾಳ್ತನಮುಂ !ಮೆರೆವುತ್ತೆಸಿಂಧುಬಲಲ್ಲಿಳನೆನಿ
ಪ್ಪನಾವೆ ದೊಳಿಹಪ್ಪಗೆಯಾಂಡನಿರಲ್ಕೆಕೀರ್ತಿಯಂ ಕೇಳನೀರೀಕ್ಷಿಸಲ್ಕಿ
ರವೆಬಂದುದು ಲೋಕದಶೈವಸಂಕುಳಂ|| |೧೬||

ವ॥ ಅಂತು ಶಿವಭಕ್ತರ್ಬರ್ಪರಲಿದಿರೆರ್ದು ಪೋಗಿ ಭಯಭಕ್ತಿಯಿಂ ಸಾ
ಷ್ಟಾಂಗವೆರಗಿ ಪೊಡಮಟ್ಟು ಕೈಗೊಟ್ಟುಬಿ ತಾಸನಂಗಳಂ ಕುಳ್ಳಿ
ರಿಸಿ ಸನ್ಮಾನಿಸುತ್ತಾಗಳ್।

ಕಂ॥ ಹರಭಕ್ತರ್ಗೀಯದರಾ। ರ್ಯರಗಂಡನೆನಿಪ್ಪ ಬಿರಿದನುಲಿವು
ಲ್ಮ। ತ್ಕರಿಯಂಪ್ಪಯಮಂವಿತ್ತಮ। ನೆರೆಯಲ್ಭಕ್ತರ್ಗೆ ಕೊಟ್ಟನಂ
ಸ್ತ್ರಂ॥

ವ॥ ಅಂತು ಭಕ್ತಜನಕ್ಕೆ ಬೇಡಿತಂ ಕೊಟ್ಟು ತುಷ್ಟಿವಡಿಸಿ ಸನ್ಮಾ
ಕಳಿಸಿ ಭಕ್ತಿರಸಾನಂದದಿಂದಿರುತಿಪ್ಪಗೆಯೊಂಡನಮಹಾದಾನದೇಳ್ಗೆ
ಸವೊಳ್ಪಸರಿಸಿ ಶಿವಸಂಮುಟ್ಟಲ್ಕಾಗಳ್।

ಕಂ॥ ಹರಭಕ್ತರ್ಗೆಂದುದನಾ। ದರದಿಂದೀವುತ್ತವೊಲ್ದು ಹಪ್ಪಗ
ಡಂ। ಸುರುಚಿರಕೀರ್ತಿಯೊಳಿರುತಿರೆ। ಹರನೊಲವಿಂ ಮೊರೆಯಲೀ
ನದೊಳ್ನಿನದಂ॥

ವ॥ ಅಂತು ನೆನೆದು ತನ್ನ ಚಾರುತರ ಮಕುಟಮಂ ಕಿರುಜಡೆಗಳ
ಡಿ ಫಣಿಕುಂಡಲಮಂ ಮಣಿಕುಂಡಲವಂ ಮಾಡಿ ನೃಕರೋಟಿಯಂ ರು
ದ್ರಾಕ್ಷಾಭರಣಮಂ ಮಾಡಿ ಕಮಳಜಕಪಾಲಮಂ ಶಂಖಪಾತ್ರೆಯಂ
ಖಟ್ವಾಂಗಮಂ ಪೊನ್ನಲಾಕುಳಮಂ ಮಾಡಿಯಿಂ ತುನಬನಾಟಕಸೂ
ಥಾಬಿಯಪ್ಪ ಶಿವಂ ನಿಜರೂಪಂಬೈತುಮರ್ತ್ಯಮುನಿವೇಷವಂತಾಳ್ದಿ
ಲಾಸಾದಿ / ಯಿಂಪೋರಮಟ್ಟೇಕೋರುದ್ರನದ್ವಿತೀಯನೆಂಬ ಕೃತ
ವಂ ಪ್ರಕಟಸಲ್ಕಾನೋರ್ವನೇ ಬಂದಿಹಪ್ಪಗೆಯೊಂಡನಬೀಡಿ
ಯಂ ನೋಡಲ್ಕೆಂದು ಕಾವೇರೀಪಟ್ಟಣವಂ ಪೊಕ್ಕು ವೀಧಿಯೊಳ್
ಹರತೆಯಿಂ ಬರುತಿರ್ಪಾಗಳಾ ಲೋಕನಕತೂಹಲ ಮಾನಸ

ಕಂ॥ ನೂಪುರಝುಂಕೃತಮೆಸೆಯಲ್। ಚಾಪಳಕರಲೋಚನಾ
ವಿರುತ್ತಿರಲಂ। ತಾಪುರಸತಿಯರ್ತವಕದಿ। ತಾಪಸವರ್ಯನನೀ
ನೋಡಿದರಾಗಳ್॥

ವ॥ ಅಂತವರೊಳೋರ್ವಂ ಗನೆ ಮುನಿವೇಷಧೀಶನ ರೂಪ
ಯುಮಂ ಕಂಡಿಂತೆಂದಳ್।

ಚಂ॥ ಇಳೆಯೊಳನಂಗನೇ ತಪಸಿಯಾದನೊ ಚಂದ್ರನೆ ಮೌನಿ
ನೋ ಮಳಯಸಮೀರನೆ ಮುನಿಸನಾದನೊ ಮಾಧವನೆ ಪ್ರತಿ

ತಳಿದನೊ ಸತ್ಯಮಲ್ಲ ದೊಱೆಯೊ ಕಮನೀಯಮವೆತ್ತ ರೂಪದಾ| ಗರ್ಗಳವೆನುತೋರ್ವ ಕಾಂತೆ ಪುಸಿವೇಷದ ಶಂಭುವನೊಲ್ದು ನೋಡಿದಳ್

ಮತ್ತಮೋರ್ವಳ್

ಭಸಿತದನೀರನಂಜಡೆಯು ಚೆನ್ನಿಗನಂಧೃತಶಂಖಪಾತ್ರೆಯಿಂ| ದೆಸೆಪವಿನೋದಿಯಂ ಕರೆದುತಂದೆನಗಿಂದೊಲವಿಂದಮಿತ್ತೊಡಾ ವಸುವೊದಲಾಗಿಕೇಳ್ನಿನಗೆಬೇಡಿದಲಂ ಚಮನೀವೆನಕ್ಕಟಾ| ಕುಸುಮಶರಾಸನಂಗೆಗುಱಿಯಾದೆಡೆ ರಕ್ಷಿಸುನೀಂ ತಳೋದರೀ|| |೨೧|

ಮತ್ತಮೋರ್ವಳ್ಮುಗ್ಧೆ

ತೊಳಗುವಹಾರಮಂಕಟಿಗೆ ಮೇಖಳೆಯಂಕರ್ರಳಂಗೆ ಕಂಕಣಂಗಳನೆಸೆವಂಘ್ರಿಗಳ್ಗೆ ವಿಲಸನ್ಮಣಿ ನೂಪುರಮಂಕರಕ್ಕೆ ಕ| ಜ್ಜಳಮನದಂ ನೊಸಲ್ಗೆ ಮೃಗನಾಭಿಜಮಂನಯನಕ್ಕೆ ಸಾರ್ಚೆ ವಿಹ್ವಳೆನೆರೆತಪ್ಪಿಸಿಂಗರಿಸಿಕೊಂಡಗಜೇಶನ ನೊಲ್ದುನೋಡಿದಳ್|| ||೨೨||

ಮತ್ತಮೋರ್ವಳ್ಪ್ರೌಢೆ

ವರಮುಖಮಂಡನಕ್ಕೆ ಮುಡಿಗಂಪಿಗೆಚೆಲ್ವಿಗೆ ಭೋಗದೇಳ್ಗೆಗಂ| ಸರಿಪಡಿಪಾಟಿಪಾಸಟಿಗಳಾಗಡೆ ತದ್ವಿಘುವಾಯುಕಂತುಬಂ ಘುರವಘುಕಂದಿದಂಕರ ಮಿಚುಂಬಳ ನಾದನನಂಗನಾದನಾ ಸುರವನವಾಸಿಯಾದನೆನುತಂಗನೆಬಣ್ಣಿಸಿದ ಳ್ಮಹೇಶನಂ||

ಮತ್ತಮೋರ್ವ ಳ್ವಿಕ್ವಳೆ

ಪದೆದುನಿರೀಕ್ಷಿಪುತ್ತ್ಸ ಕತೆಯಿಂಕರ್ಪುಮುಮ್ಮರೆದಾತ್ಮ ವಾಮಭಾಗದಪದದಲ್ಲಿ ನೂಪುರಮನಕ್ಷಿಯೊಳಂ ಜನಕೇಳಿಯೆಂಕರಾ ಗ್ರದೊಳೆ ಸುವರ್ಣಕಂಕಣಮನೊಪ್ಪವಕರ್ಣದೊಳೋಲೆ ಯಿಕ್ಕಿತತ್ಸ್ಪದತಿಬ ರುತ್ತೆ ಭಾವಕರಲೋಚನಕೊಪ್ಪಿದಳರ್ಧ ನಾರಿಭ್ರೋಳ್ ||೨೪||

ಮತ್ತಮೋರ್ವಳ್

ಕಂ|| ಪದಿನಾರರ ಹರೆಯದಚ| ಲ್ವೊದವಿದವರಮೂರ್ತಿ ವಿಡಿದಮೃಡನಂಬಿಡಲಾ|| ರದೆನಿರಿಸಿದಿಲ್ವದನರಿಯದೆ| ಸುದತಿಕರಂಸೋಲ್ತುಬೆನ್ನೊಳೇಳ್ತರುತಿರ್ದಳ್ ||೨೫|

ಅಂತೀಪರಿಯೆಳೆಯ್ಮೋಹಿಸುತ್ತಾಗಳ್

ಕಂ| ತನ್ನಯಚೆಲ್ವಂಪೆಣ್ಗಂ| ಪೆನ್ನದೆತತ್ಪುರವ ನುರೆಪುರಾಳ್ಮಾಡುತ್ತಂ| ಪನ್ನಗಭೂಷಂಬಂದುಜ| ಗನ್ನುತಶಿವಭಕ್ತ ನಾಲಯಕ್ಕೇಳ್ತಂ

ಡಂ॥ ॥೩

ವ॥ ಅಂತೇಳ್ತಂದು ಬಾಗಿಲಂಪುಗುವ ಮುನಿರೂಪಿ ನಟಿವನಂಕಂ
ದೌವ್ವಾರಿಕರ್ತರ್ಮತಮಗೆಸಾಷ್ಟಾಂಗವೆರಗಿಪೊಡಮುಟ್ಟಿದ್ದರ್ ಕೈ
ಗಿದುದೇವರ್ಬಿಜಯಂಗೆಯ್ಯುವುದೆಂದುಬಿನ್ನಪಂ ಗೆಯ್ಯಲೊಳಗಂ
ಕ್ಷ್ಯಾನಂದದಿಂಬಪರ್ರಗಳ್॥

ಕಂ॥ ಅರಮನೆಯುಮರ್ದಿನರಸದಿಂ|ಪೊರೆದಂದದಿನಭವನಂಗಟ
ಬ್ಬಿರ್ದಿರಲ| ಚ್ಚರಿವಟ್ಟ ದೇನೆನುತ್ತಂ| ಪರಿಭಾವಿಸುತಿರ್ದನೆಂದಿ
ಯಾಂಡಂ॥ ।೩

ವ। ಅಂತಿಹಪ್ಪಗೆಯಾಂಡನತಿಭಕ್ತಿಭಾವದಿಂ ನಿರೀಕ್ಷಿಸುತ್ತಿರ್ಪಾ

ಚಂ। ಕಿರುಜಡೆಶಂಖಪಾತ್ರಭಸಿತಂಮಣಿಪಾದುಕೆ ಪೊನ್ನಲಾ
ಮಿರುಪ್ಪದುಕೂಲಮುಬ್ಜಗುಣದಿಂ ಸಮೆದಿರ್ದುಪವೀತಮುಗ್ರದೋ
ರವೆಸೆಯುಂದದಿಂದೆಸೆವಬೆಳ್ಳೊಡೆಯೊಪ್ಪೆ ತಪಸ್ವಿವೇಷದಿಂ|ಕರಗೊ
ಶಿವೈಕ್ಯನುರುದಿಟ್ಟ ಗಳಂಸೆರೆಗೆಯ್ಯುವುತೊಪ್ಪಿದ॥

ವ। ಅಂತೆಸೆವಜಗನ್ಮೋಹನಮೂರ್ತಿಯಂನೋಡುತ್ತಿಹಪ್ಪಗೆ
ಡಭಯಭಕ್ತಿಯಿಂದಿದಿರ್ವಂದು

ಕಂ॥ ಪಳುಕಿನಘಟದೊಳಗಿನಸೊಡ। ವೇಳಗದುಪೊಳಪೊ
ತೆತನ್ನುನಿಕನೊಳು| ಜ್ವಾಳಸಿನೆರೆತೋರ್ಪತಚ್ಛಿವ। ಕಳೆಯಂಕ
ಘ್ರಿಗೆರಗಿದಂಶಿವಭಕ್ತಂ।

ವ। ಅಂತುಪದಕೆರಗಿ ಗದ್ಗದ ಕಂಠನಾಗಿಭಕ್ತಿರಸದ ಪರವಶತೆ
ದಿರ್ಪುನಿ ಹಪ್ಪಗೆಯಾಂಡನಂ ಕರುಣದಿಂಕಮನೀಯಮೂರ್ತಿಯಪ್ಪ
ನಿರೂಪಿನ ಸದಾಶಿವಂಕರದಿಂ ಪಿಡಿದೆತ್ತಿಪರಸುತ್ತಿರಲಾಗಳ್।

ಕಂ। ನಿರುತವಿಹಪ್ಪಗೆಯಾಂಡಂ| ಭರದಿಂಕೈಗೊಟ್ಟುತಂದುನಿಜ
ದಿಗದೊಳ್। ವರಮಣಿಪೀಠಮನಿತ್ತಾಂ|ದರದಿಂಕುಳ್ಳಿರಿಸಿದಂಮು
ದ್ರನನಾಗಳ್॥

ವ। ಅಂತುಕುಳ್ಳಿರಿಸಿಸತ್ಪ್ರೀತಿಯಿಂತನ್ನಸೀಂದ್ರನಪಾದಪದ್ಮ
ಗೆಯ್ದುಪಾದತೀರ್ಥಮಂನಿಜಮುಕ್ತಕದೊಳ್ತಾಳ್ದು ಅಂತಃಪುರದ
ಯರ್ತಂದರನ್ನ ದಾರತಿಯನೆತ್ತಿಹರುಷಪುಳಕಿತನಾಗಿಕೈಗಳಮು
ದೇವಾರೋಗಿ ಸಬೇಕೆಸುವೆನ್ನ ಸುನಗುತಂ ಕೇಳೆಲೆಸಿಂಪ

ಳನೀಂ ಭಕ್ತರೇಣಂಬೇಳ್ಪ ರದಂತಡೆಯದೀವೆನೆಂಬ ಛಲದಿಂದೆಭಕ್ತಬೇಳ್ದಿತ್ತಂಕೊಡವರಾಯರಗಂಡನೆಂಬ ಬಿರಿದಿನಮಹಾದಾನಿ ತನದಕೀರ್ತಿ ದಶದಿಶೆಯಂಮುಟ್ಟಿರಲ್ ಕೇಳ್ದುನಿನ್ನಂನೋಡಲ್ಕೆಂದು ಬಂದೆನೆಲ್ಲಡಶನಾಛ್ಛಾದನಕ್ಕಂಬಂದು ದಿಲ್ಲನೆನಲಾತನಿಂತೆಂದಂ।

ಕಂ। ವರಮುನಿಪತಿಕೇಳೆನ್ನಯ। ಬಿರಿದದುನೀವಿತ್ತಬಿರಿದುಬಿಡಬಾರದುಚ। ಚ್ಛರನೆಬಯಸಿದುದನೆರೆಯಲ್। ಪಿರಿದೀವೆಂಕುಡದೊಡನ್ಯಭೂಪರ್ನಗರೇ ೨೧

ಎಂದಾಭಕ್ತನಿಂತೆಂದಂ

ತನುವಿದೆಮನವಿದೆಧನವಿದೆ। ಮುನಿರಾಜನೆನಿನ್ನ ಮನದೊಳಿರ್ದುದನಾನೆ। ಟ್ಟನೆಕೊಡುವೆನೀಯದಿರ್ದೊಡೆ। ಮನೋಜಹರನಾಣೆಯೆಂದನಂತಾಭಕ್ತಂ॥ ॥೨೨॥

ವ॥ ಎಂದುಧೀರೋದ್ಧತನಪ್ಪಿಹಪ್ಪಗೆಯಾಂಡರನುಡಿಯಂ ಕೇಳಲೊಡರೆದು ಸರಸವಾಡುವಮುನಿರೂಪಿನ ಶಿವಂನುಗುತ್ತಿಂತೆಂದಂ॥

ಕಂ। ಎರೆದುದನೀಯಲ್ಕಾರ್ಪಡೆ। ಬರಿಸೆಲೆಮಾಹೇಶನಿನ್ನಸತಿಯರನನಿತಂ। ತ್ವರಿತದಿನೆನಲಾಗಳುನ್ನರಸಿಯರಂ ತೊಡೆಗೆವೆರಸುಬರಿಸಿದನಾಗಳ್॥ ॥೨೩॥

ವ॥ ಅಂತುಪತಿಯಾಜ್ಞೆಯಿಂ ಸರ್ವಶೃಂಗಾರಗೆಯ್ದು ಇನ್ನೂರುಸಖಿಯರರಸಿಯರ್ಜಗನ್ಮೋಹನ ಮೂರ್ತಿಯಪ್ಪಮುನಿರೂಪಿ ನಶಿವನಂ ನೋಡಲ್ ಬರುತಿರ್ಪಾಗಲದರೊಳೋರ್ವಳ್॥

ಮ॥ ಪದಪಿಂನಿಟ್ಟೆಪುಡಾಪಗಾತತಿಯೊಳಾಭಾಗೀರಥೀದೇವಿಲೋಕದಕಾಂತಾಳಿಯೊಳುದ್ಘ ಕೀರ್ತಿಸಹಿತಂ ಕಾತ್ಯಾಯನೀದೇವಿ ಪುಣ್ಯದಸೌಭಾಗ್ಯದಿನೊಪ್ಪುತಿರ್ಪತೆರದಿಂ ಸತ್ಕಾಮಿನೀವೃಂದಮಧ್ಯದೊಳೊಪ್ಪುತಿರೆಕಂಡನಾಶಶಿಧರಂ ರತ್ನಾವತೀದೇವಿಯಂ ॥೨೪॥

ಅಂತುನೋಳ್ಪಾಗಳ್।

ಛಂ॥ ಸರಸಿರುಹಕ್ಕೆ ಸಂಪಗೆಗೆ ಭಾನುಗೆರಾತ್ರಿಗೆಮೇದಿನೀಧರ ಕುರುತರಮೋಚಸಂಚಯ ಕೆನಾಗನಿಕಾಯಕೆನಾವಜಾರಿಗಂ। ಸಿರುತಮಸೂಯಮಪ್ಪಪರಪೋಲ್ವೆಯನಂಗದೊಳಾಂತು ಚಲ್ವಿನಿಂ ವರಸತಿಶೈಲಜಾರಮಣನೊಲ್ದುನಿರೀಕ್ಷಿಸಲಾದವೊಪ್ಪಿದಳ್ ।೨೫।

ವ। ಅಂತಾರತ್ನಾವತೀದೇವಿಯ ರೂಪಾತಿಶಯಮಂ ಗಿರಿಜಾಕ್ಷಿ ಣಂನೋಳ್ಪಾಗಳ್
ಕಂ॥ ಅನಿಬರ್ಸತಿಯರ್ಮೊಳರ್ಪಳ್ । ಘನಲಾವಣ್ಯದನೆಗಳ್ತೆ ದಂಕಡೆಗೆ। ಣ್ಣಿನಕೊನೆಯೊಳಮದಿ-ನತನಿ । ಪೊನಲಂಬೀರುತ್ತ್ರವ ಒಲಿಯೊಪ್ಪಿದಳಾಗಳ್। ॥೪೭

ವ। ಅಂತಾಕಾಂತಾಶಿರೋಮಣಿಯಪ್ಪ ರತ್ನಾವತೀದೇವಿಯ ದಲಾದನೂರ್ಸಂಖ್ಯೆಯ ರಾಣಿವಾಸಂಬಂದು ತಮತಮಗೆ ಪುಷ್ಪಾ ಳಿಯಂಕೊಟ್ಟು ಪೊಡಮಟ್ಟುದಿಟ್ಟಗೆ ಗೋಚರಮಾದವೋಹನಮೂ ರ್ತಿಯಪ್ಪಮುನಿರೂಪಿನ ಸದಾಶಿವನಂಭಕ್ತಿಭಾವದಿಂ ನೋಡುತಿಪಾ ಗಳಿಹಪ್ಪಗೆ ಯಾಂಡನಿಂತೆಂದ॥
ಕಂ। ಮುನಿವರನೀಂಬರವೇಳ್ದಂ। ಗನೆಯರ್ಬಂದಿರ್ಪರೆನಗೆಪೆಸ ವುದುಭೋಂ। ಕನೆಚಿತ್ತ್ರೈಸದವಾಳ್ವೆಂ। ವನವೊಸೆದೆನೆಕೇಳ್ದುನ ತಮುನಿಯಿಂತೆಂದಂ। ॥೪೮

ಧರೆಯೊಳ್ಮನ್ನಾರ್ಬೇಡಿದ। ಪರಿಯಲ್ಲಾಂಬೇಳ್ಪವಸ್ತುಬೇಡಿದ ಳಿಕಂ। ಪಿರಿದುಂಮನದೊಳ್ಸಂಶಿಪೆ। ನಿರುತಮೆನಲ್ಮುನಿಗೆಭಕ್ತನಂ ತೆಂದಂ॥ ॥೪೯

ಮುನಿಪತಿನಿನ್ನಿಚ್ಛೆಯದೇ। ನೆನಲಿನಿಬರ್ಸತಿಯರೊಳಗೆನೀನಾಸ ನೆ ಟ್ಟನೆವೊಲ್ಮೆಗೆಯ್ವಯಂತಾ। ವನಿತೆಯನೆನಗೀವುದೆಂದೊಡುಳ್ಳಿ ದನಾಗಳ್॥ ॥೫೦

ವ। ಅಂತುಬರ್ಸಂತಸದಿಂ ನ ಸಂಖ್ಯೆಯಸತಿಯರೊಳಗೆನಿಜ ನೋರಮೆಯಪ್ಪರತ್ನಾವತೀದೇವಿಯರ್ಗೆ ಮುನಿಪನಪ ರಿಚರ್ಯೆಗೆಯ ದೆಂದುಬುದ್ಧಿವೇಳ್ದು ಕೈಪಿಡಿದುಸವಿನಯಂ ಮಿಗೆತಂದುಮುಂದೆನಿಂದಿ ಸಿಂಧುಬಲ್ಲಾಳಮಾಹೇಶ್ವರನಾಮಹೇಶ್ವರನ ಪದಕಮಲಕ್ಕೆರಗಿದ।
ಕಂ। ಹರಿಧಾತರ್ಗಗಗನದೊಳ। ಚ್ಚರಿಪಟ್ಟೀಕ್ಷಿಸುತ್ತಿರಲ್ಕೆರತ್ನಾವತಿಯ ಬರಸಿಯನಾಮುನಿರೂಪಿನ। ಹರಂಗೆನಲಿವಿತ್ತ ನಂದಿಹಪ್ಪಗೆಯಾಂಡ
ವ। ಅಂತುತನ್ನರಸಿಯುಂ ಸನ್ಮಾರ್ಗದಿಂದಿತ್ತು ದೇವಬರ್ಜಿಯ ಯಪ್ಪದೆಂದು ಸಿಂಧುಬಲ್ಲಾಳಭಕ್ತಂ ಕೈಮುಗಿದಿರಲ್ಕೆಮತ್ತಮಾ ನಿರೂಪಿನಶಿವನಿಂತೆಂದಂ।



ಚಂ। ಪುರಹರಭಕ್ತಪರ್ಯನೆ ನಿಪಸ್ಗದಿ ಹಪ್ಪಗೆಯಾಂಡಪಾನಿಕೇ

ತರುಣಿಯುನಿತ್ತೆನಿನ್ನ ಬಿರಿದಂತದುಸಂದದು ವುತ್ತೆ ಮಿೀಕೆಯಂ ಭುರ
ದೊಳಗೊಯ್ದುದೆಂತೆ ಮಗೆದುರ್ಘಟವೆಂತೆನೆ ನನ್ನನಟ್ಟರೆ| ಯ್ದಿದದೆ
ಡೆಗೊಕ್ಕು ಕೂಂಬರೆನುತಾಸುರ ದಿಂನುಡಿದಂಮುನೀಶ್ವರಂ|

ಎಂದು ಮುನಿರೂಪಿನಶಿವಂನುಡಿಯುಲಿ ಹಪ್ಪಗೆಯಾಂಡನಿಂತೆಂದಂ|

ಕಂ| ದೇವಿಯುರಂಪೋಗಲ್ಗುಡ.ದಾವವನಡವುಗುವನವನತಲೆಯಂಕ
ಡಿವೆಂ|| ನೀವಂಜದಿರ್ಪುದೆನುತಂ| ಭೂವಿನುತಶಿವೈಕ್ಯನಸಿಯನಾಂತಿರ್ದದಿ
ರ್ದಂ|

ವ| ಅಂತೆದುರ್ದ್ದುನಿಂದಿರ್ಪ ಪರಮಭಕ್ತಿಯಿಂಪಲ್ಲಣಿಸಿ ದರ್ಜಾತ್ಯಶ್ವ
ಮನವರಿಬ್ಬರು ಮನೇರಿಸಿಸಿಂಧುಬಲ್ಲಾಳಮಾಹೇಶ್ವರನಸಿಫಲ ಕಮಂ
ಕೊಂಡುಮುಂದೆ ನಡೆದರವುನೆಯುಂಪೊರಮಟ್ಟು ಬರುವವಾರ್ತೆಯನಿ
ತ್ತೆಲಾಪುರದೊಳಿರ್ಪ ತತ್ಕಾಂತೆಯುಸಹೋದರರ್ಬಂಧುಜನಂಗಳ್ಕೇ
ಳ್ದುಕಡುಮುಳಿದುನೋಡುನೋಡೆಮ್ಮಪೆಣ್ಣನೊಬ್ಬಭಿಕ್ಷುಕಂಗಿಹಪ್ಪಗೆ
ಯಾಂಡಂಮರುಳ್ಮಸಗಿಕೊಟ್ಟಂಗಡಾನಾವೆಯ್ದಿ ಪರಿದಡ್ಡಂಬೊಕ್ಕುಸೆಳೆ
ದುಕೊಂಬಮೆನುತ್ತಂ ಸಮರಕುದ್ಯತರಾಗಿನಿಸ್ಸಾಳಮಂಸೂಳೈಸಿಬೊ
ಬ್ಬಿರಿವುತ್ತಾಗಳ್|

ಕರಿಹಯರಥತತಿಗಳನೇ| ರಿದೆಯ್ದಿ ಮುಸುಂಡಿಗದೆಕೃಪಾಣಂಚಾಪಂ
ಶರವೆಂಬಿವನಾಂತತಿಕುಭ| ಟರುಮುಟ್ಟಿಪ್ಪಾರುತಡ್ಡಿಗಟ್ಟಿದರಾಗಳ್|

ವ|| ಅಂತಡ್ಡಿಗಟ್ಟಿಪೋಗಲೀಯದೆ ಪುರವೀಧಿಯೊಳಡ್ಡನೊಡ್ಡಿವಾ
ರಾಂತುಶರದಮಳೆಯಂ ಸುರಿದುನಿಜಮಿತ್ರರೆ ನಿಪಪುರಜನಂಪರಿಜನರಂ
ಕಂಡುಕಿಡಿಕಿಡಿಯೋಗಿಸಿಂಧುಬಲ್ಲಾಳಂಕಡುಮುಳಿದಿ ದಿರಾಂತುನಿಂದಿ
ರ್ದಾಗಳ್

ಕಂ| ತರುಣಿಮಸಮೇತ ವೊಪ್ಪುವ| ಪರಮುನಿಪನಮೇಲೆಬೀಳ್ವಬಾ
ಣವಸಾರೋತ್ಕರಮಂ ಫಳಕದಿಘಾಡಿಸು| ತಿರವಸಿಯಂಪಿಡಿದು ಭಕ್ತ
ನಾರುತ್ತಾಗಳ್| |೪೪||

ಚಂ| ಘಳಕಮನೆತ್ತಿತಾಟಸಿಸಿಡಿಲ್ದನಿಗೊಟ್ಟ ಪೊಲಾಗೆಕಾಯ್ಪಿನಿಂ
ತೊಳಪೆಳೆಮಿಂಚನೇಳಿಸುವತೀವ್ರಕರಾಸಿಯನುರ್ವಿಚಾರಿಸುತ್ತಿಳೆನಡು
ಗಲ್ಕೆಮೇಗೆಪುಟವೆದ್ದಿರ ದಟ್ಟಿದಿರಾಂತವೈರಿಸಂ| ಕುಳಮನಡಂಕಡಂಗಿ
ತರಿದೊಟ್ಟಿದನಾಪುರವೈರಿಕಿಂಕರಂ| |೪೫|

ಕಂ| ಸೂಲಿಗೆಯುಘಂಡಿಕಪಳೀ| ಜಾಲದೊಳಡಹಾಯ್ವತೆರದಿಮಿದಿ

ರಾಂತವೆಳಂ| ಕೂಲಿಮಿಗೆ ಮೆಚ್ಚೆ ತೀದಂ | ಕೀಲಾಲಂಪರಿವೃತಿರಲ್
ಗೆಯ್ದೊಂಡಂ|
ಮ| ಸ್ರ| ದ್ವಿರದಾನೀಕಂಗಳಂಕೇಸರಿಗಿರಿತತಿಯುಂವಜ್ರದಂಡಂ
ಜಂಗೋ| ತ್ಕರಮಂತಾರ್ಕ್ಷ್ಯಂತಮಿಸ್ರಬ್ರಜಮನೆ ನಿತನರ್ಕ
ಹಾರಣ್ಯಮಂನಿರ್ಭರದಿಂದಂಡಾಪವಹ್ನಿಪ್ರಹತಿಪತೆರದಿಂಸಂಗರಕ್ಷೆ
ಣಿಯೊಳ್ಭೀ| ಕರಸೈನ್ಯಬ್ರಾತಮಂ ತಾಂತರಿದು ರೆಮೆರೆದಂ ಸಿಂ
ಲ್ಲಾಳಭಕ್ತಂ|
ವ|| ಅಂತುತಾಂಮಾಡಿದ ಭಕ್ತಿಗೆವಕ್ರವಾದ ನಿಜಮಿತ್ರರನಿಷ
ಸಪರಿಜನಂಗಳಂ ತರಿದುಬರಿಕೆಯುದ್ಧನಿಷ್ಕಂಟಕತ್ವಂಮಾಡಿ|
ಕಂ| ಗಗನತಳದಲ್ಲಿನಾರದ| ನದೋಡಲ್ನೋಡಿಮೆಚ್ಚೆಗಣನಿ
ಬಂ| ಪೊಗಳಲಿಹಪ್ಪಗೆಯ್ದೊಂಡಂ | ಪಗೆಗಳನೆರೆಗೆಲ್ದು ಕಾಲಿಗೆ
ನಾಗಳ್|
ವ|| ಅಂತೆರಗಿಕ್ಕೈಗಳಂ ಮುಗಿದೆಲೆದೇವವಕ್ರಗಳೆಲ್ಲಂ ಮಡಿದು
ವಭಯಮಿಲ್ಲಿಂ ಸಮಾಧಾನದಿಂಬಿಜಯಂಗೆಯ್ವುದೆಂದಿ ಹಪ್ಪಗೆ
ಡನತಿಭಕ್ತಿಯಿಂದಾಗಳ್|
ಕಂ| ವನಿತಾಸಮೇತಮೊಪ್ಪುವ|ಮುನಿನಾಥನ ನರ್ಥಿಯಿಂದ
ಯ್ದೊಂಡಂ ಮನವೊಸೆದುಭಕ್ತಿಯಿಂಯೋ || ಜನಪರ್ಯಂತು
ಳುಪಿಯಿರದೇಳ್ತಂದಂ|
ವ| ಅಂತೇಳ್ತಂದಭಕ್ತಪರ್ಯಸಂನೋಡಿಮುನಿರೂಪಿನಶಿವಂಮು
ನೋಡಲ್ಕಿಂತೆಂದಂ|
ಕಂ|| ಮನದಭಯಂಪೋದುದುನೆ | ಟ್ಟನೆನಿನ್ನಿಂದೆಮಗೆ
|ನೀಂನಿಜಪುರಕಿಂ| ನನುನಯದಿಂಪೋಗೆನೆಮುನಿ | ಪನಚರಣ
ಪುರಕೆಮುಗುಳ್ದಭಕ್ತಂ|
ವ|| ಅಂತುಧೀರೋದ್ಧತನಪ್ಪಿ ಹಪ್ಪಗೆಯ್ದೊಂಡ ಸಂತಸದಿಂನಿ
ಕ್ಕೆ ಮಗುಳ್ದುನೋಡದೆಪೋದುದಂಕಂಡು ಶಿವಂಮೆಚ್ಚಿತಲೆದೂಗ
ಗಳ್||
ಕಂ| ವನಜಭವಾಂಡವನಾತ! ಧ್ಯನೀತೀವಲ್ಲಭಕ್ತಬಾರನುತ್ತ

ಯುಲ್| ಘನನಯವಿತಿರುಗಿಪರಿತಂ | ದನುಮಾಪತಿಯೆಡೆಗೆ

ಹಪ್ಪಗೆಯೊಂಡಂ॥
ವ॥ ಪೆರರಡೆಕ್ರೊಕ್ಕರೆಂಡಂ ಜಿಬಿಂದುನೋಳ್ಪಾಗಳ್
ಕಂ॥ ತುರಗವಮೇಲಾಕಾಂತೆಯು। ನಿರಿಸಿಮುನೀಶ್ವರನದೃಶ್ಯವಾಗಲ್ತಿಳಿದೀ।ಶ್ವರನಪ್ಪನೆನುತ್ತಕಾಣದೆ, ಕರವಶದಿಂದಳಲುತಿಳೆಗೆಬಿದ್ದಂ ಭಕ್ತಂ। ॥೫೨॥
ವ॥ ಅಂತುಸಬಾಷ್ಪನಯನೋತ್ಕರನಾಗಿ ಬಿದ್ದಿರ್ದ ಭಕ್ತನನಿದ್ದಿಸಲ್ಕಾರುಣ್ಯದಿಂದವೃಶನಾಗಿ ಮರಳಿತುರಂಗದ ಮೇಲೆನಿಜಮೂರ್ತಿಯಂ ಪಾರ್ವತೀರಮಣಂ ತೋರಿಸಲ್ಕಾಗಳ್,
ಚಂ॥ ಪುರಹರಭಕ್ತನಿತ್ತತುರಗಂ ವೃಷಭೇಶ್ವರನಾಗಿಕಾಂತೆಯುಚ್ಚಳಿಸಿಗೆಗೌರಿಯಾಗಲೊಲನಿಂಜಡೆಗಂಗೆಫಣೀಂದ್ರಕುಂಡಲಂ। ಗರಳವಿಭಾಜಿನಂಡವರುಗಂ ತರವಾರಿವಿಭೂತಿಪತ್ತುತೋಳ್ ಸುರುಚಿರಪಂಚವಕ್ತ್ರಮೆಸೆಯಲ್ಕನಿತಚ್ಛಿವಮೂರ್ತಿತೋರಿದಂ॥
ವ॥ ಅಂತೆಸೆವಪಾರ್ವತೀರಮಣನ ದಿವ್ಯಮೂರ್ತಿಯಂಕಂಡಿಹಪ್ಪಗಯೊಂಡನತಿಹರುಷಪುಳಕಿತನಾಗಿ ಚರಣಕಮಲದೊಳ್ಪೊಸಲಿಟ್ಟುಪರವಶತೆಯೊಳಿರಲಾ ಶಂಕರಂಕಂಡುಪರಮಕರುಣದಿಂ ಪಿಡಿದೆತ್ತಿಪೇರಂಭಂಗೆಯ್ದುದಾನದೇಳ್ಗೆಗೆಮೆಚ್ಚಿಕೊಂಡಾಡುತ್ತಂತನ್ನದೆ ಸೆಯಿಂಬಿದಿರ್ದಪುರಜನಪರಿಜನ ಮನೆತ್ತಿ ತನ್ನಪ್ರೇರೆಯೊಳ್ನಿಂದಿರ್ದವೀರಭದ್ರಾದಿಗಣಂಗಳ್ಗೆಂತೆಂದಂ॥
ಕಂ॥ ಯುಪತಿಯನಿತ್ತಪರಾಪುರ್ಗ।ನ್ನವನಿಯೊಳಪಪೊಕ್ಕನಂತರಂತೀದಪರ। ಶಿವನಂದದಿನೆನಗನುತಂ। ಶಿವನೊಲವಿಂದಾಶಿವೈಕ್ಯನಂ ಒಣ್ಣಿಸಿದಂ॥ ॥೫೪॥
ವ॥ ಅಂತುಶಿವನಿಹಪ್ಪಗೆಯೊಂಡನ ಭಕ್ತಿಯಫಲಮಂಪ್ರಮಥರ್ಗೆಪೇಳ್ದುಕೊಂಡಾಡುತಿ ರ್ಪಾಗಳ್
ಕಂ॥ ಸುರಕುಜದಲರ್ವಳೆಯೊಳ್ನಿ। ರ್ಜರಪಟಹಧ್ವನಿಗಳೆಯುನುರೆಬೆಳಗುತ್ತಂ। ಸ್ಫುರಿತಮಣಿಮಯವಿವಾನಂಭರದಿಂ ಭವನಾಜ್ಞೆಯಿಂದೆ ಬಂದುತ್ತಾಗಳ್। ॥೫೫॥
ವ॥ ಅಂತುಬಂದುದಾರ ಪಾರಾವಾರ ನಪ್ಪಿಹಪ್ಪಗೆಯೊಂಡಂ ಬೆಸಸುರಿಜಾರಮಣ ನೋಡೆದ್ದೀಲಗಂಗೊಟ್ಟುಕುಳ್ಳಿರ್ದಾಗಳ್।

ಕಂ॥ ಅರಸಿಯನೊರ್ದ್ದಿತ್ತುದಕಾ। ಪರದಿಂತನ್ನಂತೆ ಕಂಡಿಹಪ್ಪ
ಯಾಂಡಂ। ಗುರುಸಾಯುಜ್ಯಪದಮನಂ। ದಿರದೊಲವಿಂದಿತ್ತು
ದನಾಸ್ಥಾಯಿಕೆಯೊಳ್॥

ಗದ್ಯ— ಇದುಸಕಲಸುರ ನಿಕರಮಣಿ ಮಕುಟಮಾಣಿಕ್ಯ ಮಾಲಾ
ರೀಚಿಪುಂಜರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪ
ಸೋಮನಾಥಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿವಿರಚಿತ
ಪ್ಪತ್ರಿಷಷ್ಟಿಪುರಾತನರಚಾರಿತ್ರದೊಳಿಹಪ್ಪಗೆಯಾಂಡರ ಕಥಾವೃತ್ತಾ
ತಂ

ಏಕಾದಶಾಶ್ವಾಸಂ

ಶ್ರೀ

## ದ್ವಾದಶಾಶ್ವಾಸಂ

### ಪಗಲ್ತೊಣೆಯಾಂಡರ ಕಥನಂ

ಕಂ॥ ಛಲದಪಗಲ್ತೊಣೆಯಾಂಡಂ । ಗೆಲವಿಂದಂದೇವವಿನುತಗಣ
ಪದಮಂಕೊ। ಟ್ಟಳೆಯೊಳ್ಮೆರೆದಮಹಾನಿ । ರ್ಮಳಮುಖಸೋಮೇ
ಶನೊಲ್ದು ಪಾಲಿಕೆನಮ್ಮಂ॥

ಹರಭಕ್ತಿಯನೆಲೆವನೆಯೆನಿ। ಪುರುಚೋಳಧರಿತ್ರಿಯೊಳ್ತಟಾಕಾವಳಿ
ಯಿಂ। ಪರನಂದನದಿಂಬೆಳೆಯಿಂ। ನಿರುತಂತಿರುವಂಜಲೂರ್ಕರಂಸೊ
ಗಯಿಸುಗುಂ॥

ಪರಮಶಿವೈಕ್ಯರಭವನೊ। ತ್ಕರದಿಂದುನ್ನತಿಯೊಳೆಸೆವಶಿವಮಂದಿ
ರದಿಂ। ತಿರುವಂಜಲೂರ್ಸರ್ವಿಡೆ। ದುರುತರಲಕ್ಷ್ಮೀವಿಳಾಸವೆಸೆಸು
ತ್ತಿರ್ಕುಂ ೨॥

ಉ॥ ಈಪರಿಯಿಂದಮತ್ಯಧಿಕಸಂಪದದಿಂ ತಿರುವಂಜಲೂರೆನಿಪ್ಪಾ
ಪುರದೊಳ್ಧನಾಢ್ಯತನದಿಂಪಯೊಮಿಂ ಮಿಗೆಕೀರ್ತಿವೆತ್ತುಗೌ। ರೀ
ಪತಿಪದಭಕ್ತರೆನಿಸಿಪ ಪಗಲ್ತೊಣೆಯಾಂಡನೊಪ್ಪಮಂ ಪಾಪವಿದೂ
ರನುದ್ಯಗುಣಸಾರನಪಾರಕಳಾವಿಶಾರದಂ॥

ವ॥ ಅಂತೊಪ್ಪುತ್ತಮತುಳಭಕ್ತಿಯಿಂಪಗಲ್ತೊಣೆಯಾಂಡಂ ತಿರುವಂಜ
ಲ ಪುರಾಧಿಪತಿಯಪ್ಪಶಿವಲಿಂಗಕ್ಕೆ ನಿಚ್ಚನಿಚ್ಚಂ ಪೊಸತಪ್ಪೊರತೆಯುಂ
ತೋಡಿನಿರ್ಮಳೋದಕಮಂ ತಂದುಮಜ್ಜನಕ್ಕೆರೆದರ್ಚನೆಯಂಮಾ
ಳ್ಪನಿಯಮಮಂಪಿಡಿದಿರುತಿರ್ದನಂತುಮಲ್ಲದೆಯುಂ॥

ಕಂ॥ ಒಲವಿಂತದ್ಭಕ್ತಂನವ। ಜಲಮಂದಿನದಿನದೊಳೀಶ್ವರಂಗೆರ್ಚಿಸು
ತಿ। ಛಲದನಿಯಮಮನೆಧರಿಯಿಸಿ। ಪಲವುಂಕಾಲವನೆಸಲಿಸುತಿರ್ಪನ್ನೆ
ವರಂ॥ ।೩॥

ಮ॥ ಸ್ರ॥ ಮೃಗತೃಷ್ಣಾಭ್ರಾಂತಿ ಮಾಳ್ಪಜ್ಜಳಮುರುತರವನಭ್ರೇರಿರಸಂ
ಹೇಷಿತಂ ಮಾಳ್ಪ ಜಗಮಂಮರ್ಬಿಪ್ಪ ಕೆಂಧೂಳದೆಖುರದರಜಂ ಬಲ್ಪಿನಿಂ
ಬಪ್ಪ ಚಕ್ರಾಶುಗಮತ್ಯಂತಾನಡಗಲ್ಕ ಡರ್ಪಿನ್ನೃಪನಪ್ರೋಲ್ಕ್ಷಾಯಿಪ್ಪಿನಿಂ
ಮಾಘಮೆಂಬಾ ಪಗೆಯಂಬೆಂಪತ್ತಿಗೆಲ್ದುರ್ಜಿತದಿನಸೆದುದುಷ್ಣಾತಪಾ
ಘಂನಿದಾಘಂ॥ ।೪॥

ಮಿತ್ತಂ| ಕರದೊಳ್ಪಿಳಿಕಳಸಮನನ |ವರತಂಪಿಡಿದಿರ್ಪನಿಳುಪದಿನ್ನುಂ
ಬ್ರಹ್ಮಂ| ||೧೫||

ಕ್ರಮದಿಂದೆಸೆಯಿಂದೆಹರಿಯುಂ | ಕಮಳಧರಂಕಮಳಲೋಚನಂಕ
ಮಲೇಶಂ| ಕಮಳದಿತಳ್ಪನೆನಿಸಿದಿ| ಕ್ರಮದಿಂಪರ್ವಿತ್ತುಲೋಕಭೀ
ಷ್ಮಂಗ್ರೀಷ್ಮಂ|| |೧೬||

ಚಂ| ಮದಗಜಚರ್ಮಮಂಬಿಸುಟ ನಾಡೆದಿಗಂಬರನಾಗಿದೇಹವ||ರ್ಧ
ದೊಳನುರಾಗದಿಂ ಹಿಮಗಿರೀಂದ್ರತನೂಜೆಯನಾಂತು ಭಾಳದೊಳ್
ಸಡಮಳಚಂದ್ರನಂತಳೆದುಮಸ್ತಕದೊಳ್ಸುಧಿಯುಂಕಡಂಗಿತಾ| ಳ್ದದ
ಸುರಿಗಳ್ಕಿರುದ್ರನೆನೆ ಬೇಸಗೆಬೇಗರಿಸಿತ್ತು ಧಾತ್ರಿಯುಂ|

ಕಂ| ತನುಜೆಮಣಿಡೆತಲೆಕಿಚ್ಚಿಡ| ಮನವನುಗಿಡೆಂಸನೆಸೀಗೇಬಾಯ್ವ
ತೆಕಣ್ಣು ಣ್ಪನನೆಲನಂತೆವಶಂಗೆಡೆ ಘನತರದನಿದಾಘದಲ್ಲಿನಡೆದರ್ಪಥಿಕರ್
ಕಿಡಿಸುರಿವಬಿಸಿಲಪೊಯ್ಲಿಂ|| ನಡುನೆತ್ತಿಗಳೊಡೆದುಕಾದಪುಡಿಯಿಂ
ಕಾಲ್ಬೆಂ| ದಡಿಗಡಿಗೆಮಿಡುಕಿಕಡೆಪ| ನಡವರೆನಲ್ಪರ್ವಿದತ್ತು ತೀವ್ರ
ನಿದಾಘಂ| |೧೭||

ಉರುವೈಶಾಖನೃಪಾಳಂ | ಸುರಲೋಕಕ್ಕಿರದೆಧಾಳಿಯಿಡಲಂತಾ
ಬಿ| ತ್ತರಿಸಿದನಶವೆನೆಸುಟ್ಟುರಿಯಿಂದಂಬರಕ್ಕನೆಗೆವಕೆಂಧೂಳಿಸೆಗುಂ||

ಚಂ|| ಕೆರೆನಿಮಿಗೆಪತ್ತಿಬೀಡೆವರಿದಬ್ಜವಣಂ ಗೆಝುಷಂಪೋದಳ್ದಬಿ|
ದ್ದುರೆಬಯಲಾಗಿ ಹಂಸಚಯ ನೋಡೆನದೀನದತೀರದೊಳ್ಸಿಗಳ್ದ ರ
ತೆಗಳೆಯೆದ್ದುತೋಡೆದವ್ರುಗಸಂತತಿಬಾಯಿವ್ವಡೆಪಕ್ಷಿಸಂಕುಳಂ| ನೆರೆಪುರಿಧಂ
ತಿರಲಾಗೆಕಡು ಬೇಸಗಿ ಬೇಸರಿಸಿತ್ತು ಧಾತ್ರಿಯುಂ| || ೧೮||

ವ|| ಪಿರಿದುಂ ಚಂದನ ಚರ್ಚೆಯುಂ ಬಜನದಿಂನೀವಾಸಿನಿಂ ಕಾಪಿ
ನೀ ಗುರುವೃತ್ತಸ್ತನವಪ್ಪಿನಿಂ ಹಿಮದ ತಾಂಬೂಲಂಗಳಿಂ ತೆಪ್ಪಿನಿಂ
ಪೊರೆದತ್ಸ್ವಜಿತ ಶೀತಳೋದಕದಿ ಪುಷ್ಪಪ್ರಾತದಿಂ ಭೋಗಿಗಳ್ ನಿ
ರುತಂಗ್ರೀಷ್ಮದ ತಾಪವ ಂಕೆಪುರಿಷ-ಮ್ಬೋದಿನೀಭಾಗವೇ| ಳ್ದುಂ
ವ|| ಅಂತಪ್ಪತೀವ್ರಘವರ್ಮಗಮದೊಳ್

ಕಂ|| ವಿನುತಪಗಲ್ಮೊಣೆಯೊಂಡನ ಮಾನವಂನೋಡಲ್ಕೆಶಭುಜಳ
ಮಾತ್ರಮಸಿ| ಲ್ಲೆನಿಸಿದನಾವೈಶಾಖದೊಳನು ಪಮತಿರುವಂಜಲ್ಗರೆಗಳ
ದನೇವೊಗ್ವ || ||೧೯||

ಉರಿವರಿವಬ್ಬೆಸಗೆಪೊಳಾ| ಸುರದಿಂನೆರೆಬತ್ತಿಪೋದಕೆರೆಭಾವಿ
ಳೊಳ್|| ಪಿರಿದೊರತೆದೋಡಿಜಲಮಂ| ಪರಿಭಾವಿಸುತಿರ್ದ ನಾಪನಲ್ಕೆ
ಣೆಯಾಂಡಂ|| ||೩೪||

ಎನಿತೆನಿತೊರತೆಗಳಂತೋ | ಡಿನಿರೀಕ್ಷಿಸಲುದಕಮೊತ್ತಮಿಲ್ಲಮಿ
ಲ್ಲಮಜ್ಜನನಿಂದೆನ್ನಶಿವಂಗಿ| ಲ್ಲೆನುತಿರ್ದಂಭಕ್ತಿಯಿಂಪನಲ್ಕೆಣೆಯಾಂಡಂ
ವ|| ಎಂದೀಪರಿಗೊಳ್ಳಲುಂಬುತ್ತಂ ತನ್ನಧನಮೆನಿತುಂಟನಿತಕ್ಕಂ
ತಾಳಪರಿಯಂತರಂ ತೋಡಿಜಲಮಂಕಾಣದೆ ಮರುಗಿಮುನ್ನಿಯಪ
ದೊರತೆಯುಗ್ಘಣೆಶಿವಂಗಿಲ್ಲಮೆನುತ್ತಂಪಲವುಉಪವಾ ಸಂಪತ್ತಿಚಿತ್ತದೊ
ಳ್ಪರಿಚ್ಛೇದಬುದ್ಧಿಯಂನ್ನೆನೆದು|

ಕಂ|| ಅನಘನಮಜ್ಜನಕಂಜೀ 'ವನಮಿಲ್ಲದಿರಲ್ಕೆತನ್ನಜೀವನಮಂನೆ
ಟ್ಟನೆತಾನರ್ಪಿಸಲೆಂದನು | ತನುನಯುದಿಂ'ಂಡನಾಪನಲ್ಕೆಣೆಯಾಂ
ಡಂ| ||೩೬||

ವ| ಅಂತುಪನಲ್ಕೆಣೆಯಾಂಡಂತಿರುವಂಜಲೂರ ಪುರಾಧಿಪತಿಯಪ್ಪ
ಶಿವಲಿಂಗದೆಡೆಗೆಯ್ತಂದು

ಚಂ|| ಸುರುಚಿರಮಪ್ಪನುತ್ನಜಲಮಂ ನೆರೆಕಾಣದೆನಾಡೆದುಃಖದಿ
ಸಿರಬಿಗಿವುತ್ತೆಬಾಷ್ಪಸಲಿಲಂ ಬಿಡದುಣ್ಮುತೆಬಾಯ್ವಿಡುತ್ತೆವಿಲೋ
ಕಭವದೀಯ ಮಜ್ಜನವದಿಲ್ಲದೆಪೋಯ್ತುಕಟೆಂದೆನುತ್ತಮಂ ಬರಮೊ
ವಂ ತಿರಾಕುತಿಯಲಿಲ್ಲೊಪ್ಪಿನಾಶಿವ ಭಕ್ತಪುಂಗವಂ|

ವ| ಅಂತುಬಿಡದೆಕಡುನೇಹದಿಂ ಮೃಡನನಾಪನಲ್ಕೆಣೆಯಾಂಡ
ಪ್ಪಿಪಲೆದೇವಾಎನ್ನಯ ನಿಯಮವುದಪೊಸತಪ್ಪಗ್ಘಣಿದೊರಕದುದಕ್ಕೆ
ಜ್ಜೀವನಮೆಸಮರ್ಪಣಮೆನುತ್ತಂ ಪರಿಚ್ಛೇದಿಸುತಿರ್ಪಾಗಳ್

ಕಂ|| ಒದವುತ್ತಂತನ್ನಯುಳಲ | ಮದುಪೋದುದೆನುತ್ತೆಲಿಂಗಮಂ
ಕ್ತಿರಿಪಾ| ಯ್ದೆಫಟಗೆಮುಟ್ಟಿ ಶಿವಂಪಿಡಿ| ದುದಿತೊತ್ಸವದಿಂದೆ ರೂಪ
ದೋರಿವನಾಗಳ್|

ಧುನಿಜಡೆಸಖಶಿಖಿಫಣಿಕರಿ | ಘನಘಸಿತಂದಮರುಗಂಗ್ರಿಶೂಲ
ಪಂಚಾ| ನನವೀರ್ಯದುಘುಜಂಮಿ| ವನಗಾತ್ರಜಿಯರಸನೆಪ್ಪಿದಂ
ಜರೂಪಿಂ|

ವ|| ಅಂತಾಶಿವನ ... ಹರುಷಪುಳಕಿತನಾಗಿ

ಶ್ರೀಯಿಂ ಪದಕಮಳದೊಳ್ಪೊರಳ್ದು ಪರವಶತೆಯಿಂದಿರ್ಪ ಜಗಲೆ ಶ್ರೀಣೆ ಯಾಂಡನಂ ಸತ್ಕರುಣದಿಂ ಪಿಡಿದೆತ್ತಿ ಕುಳ್ಳಿರಿಸಿ ಬೊಳ್ಳೈಸುತ್ತಂ ನಂದಿನಾಥ ಗಿಂತೆಂದ।

ಕಂ॥ ಇಳೆಯುರಿಯುಳ್ನಿ ಜಸಿಯುಮುದ। ಜಳವೆರೆಯುಳ್ಕೆನ್ನ ಮೇಲೆಬಿದ್ದೊ ದರುತ್ತಂ। ಛಲದಿನಗುಪಿತ್ತನೆನಲಿವ । ನೊಲದಾರ್ಗದ್ಭಕ್ತರೆಂದುಗಿರಿ ಶಂಪೊಗಳ್ದಂ

ವ॥ ಎಂದುಪೊಗಳ್ದು ಕೊಂಡಾಡುತ್ತಂ ಪ್ರೀತಿಯಿಂದಂತಾಂ ಬರಿಸಿದ ದಿವ್ಯವಿಮಾನದೊಳ್ಪಿಗಲೆ ಶ್ರೀಣೆಯಾಂಡನಂ ಕುಳ್ಳಿರಿಸಿ ಶಂಕರಂನಿಯುಮಿ ಸಿದಾಗಳ್

ಕಂ॥ ಧೀರಪಗಲೆ ಶ್ರೀಣೆಯಾಂಡಂ। ಗಾರಾಜಿಸುತಿರ್ಪ ಪುಷ್ಪಕಂನಾಕ ಜಭೇ। ರೀರವದುತ್ಸವದಿಂದಂ, ತಾರಾದ್ರಿಗೆಬಂದುದಭವನಾಜ್ಞೆಯೊಳಾ ಗಳ್।

ವ॥ ಅಂತುಬಂದುಪಗಲ್ತೊಣೆಯಾಂಡಂ ಚಿರಸುಸಕಲಮುನಿಜನಂಗ ಳ್ಪೊಗಳಲೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ॥ ಶತಮುಖಮುಖ್ಯಾವ-ರಸಂ। ತತಿಪೊಗಳಲ್ಕೊರ್ಮೆಯಿಂಪಗ ಗಲ್ತೊಣೆಯಾಂಡಂ। ಗತುಳಿತಗಣಪದವಿತ್ತ । ಪ್ರತಿಮಶಿವಂಮೆರೆವುತಿ ರ್ದನಾಸ್ಥಾಯಿಕೆಯೊಳ್।

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾ ಮರೀಚ್ಛಿ ಪುಂಜರಂಜಿತಪಾದ ಪಂಕಜಶ್ರೀಮತ್ಪಲಿಗೆರೆಯ-ಪುರಾಧಿ ಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರಚಾರಿತ್ರದೊಳ್ ಪಗಲ್ತೊಣೆಯಾಂಡಮಾಹೇಶ್ವರ ಕಥಾವೃತ್ತಾಂತಂ

ದ್ವಾದಶಾಶ್ವಾಸಂ



ಓಂ

# ತ್ರಯೋದಶಾಶ್ವಾಸಂ

## ಮುರುಗರ ಕಥನಂ

ಕಂ|| ರಜನೀದಿನವೆನ್ನದನಿಶಂ | ಭಜಿಯಿಸುವನ ಮುಕ್ತಿವಾಯುಮು ಗರ್ಗಮರ| ವ್ರಜನುತಗಣಪದಭಿತ್ತಂ| ಗಜರಿಪುಸೋಮೇಶನೆ ಲ್ಲಪಾಲಿಕೆನಮ್ಮಂ||

ಮಲ್ಲಿಕಾಮಾಲಾ|| ಚೋಳಮಂಡಲಮಧ್ಯದೊಳ್ಮಿಗೆ ಪೆಂಪಿನಿಂ ರ್ಪಸ| ಟ್ಟಲಿಯಿಂಫಲೇಕ್ಷು ವಾಟಗಳಿಂ ಪನಾಪಳಿಯಿಂತಟಾ| ಳಿಯಿಂಶಿವಭಕ್ತವೃಂದದ ಮಂದಿರಂಗಳಿನುದ್ಘಲಿಂ| ಗಾಲಯಪ್ರ ಗಳಿಂಪೆಪಗಲ್ ಪುರಂಕರವೊಪ್ಪುಗುಂ|

ಕಂ| ಎಸೆವಪಗಲ್ಪುರದೊಳ್ಸಂ| ತಸದಿಂದತ್ಯಧಿಕವಿಪ್ರವಂಶಜನ ತ್ತಸಮಾಕ್ಷನಭಕ್ತಿಗಳಿಂ|ಪೆಸರ್ವೆತ್ತುನಮುಕ್ತಿವಾಯುಮುರುಗಂವೆ

ಚಂ| ಅರಿದುನಮುಕ್ತಿವಾಯು ಪಥದೊಳ್ನಡೆವಲ್ಲಿನ ಮುಕ್ತಿವಾಯ ವ.ಲೆದುನಮುಕ್ತಿವಾಯು ಕಡಸಂತಸದಲ್ಲಿ ನಮುಕ್ತಿವಾಯುವೆ| ಚ್ಚ ನಮುಕ್ತಿವಾಯು ವಿನುತಿಪುದರಿಂ : ಪೆಸರ್ವೆತ್ತುಭಕ್ತನ| ಕ್ಕರೋ ಕ್ತಿವಾಯು ಮುರುಗಾಖ್ಯಮನಾಂತು ಕರಂವಿರಾಜಿಪಂ

ಕಂ| ಉಂಬೆಡೆಯೊಳುಡುವೆಡೆಯೊಳ|ಡಂಬರದಿಂಕುಳ್ಳಿಪೆಡೆಯೊ ರಗಿಸ್ಪೆಡೆಯೊಳ್ | ನಂಬುಗೆಮಿಗೆಮುರುಗಂಕೂ | ರ್ಪಂಬಿಡದೆ ಕ್ತಿವಾಯುಯೆಂಪೆನುತಿರ್ಪಂ||

ಇರುಳುಂಪಗಲುಂಬಿಡದ | ಚ್ಚರಿಯಿಂದೆನಮುಕ್ತಿವಾಯುವೆಂಬ ಚಾ| ಕ್ಷರಿಯಲ್ಲದೆಮತ್ತನ್ಯಾ| ಕ್ಷರಮಂನಾಲಿಗೆಯೊಳುಸುರದಿರ್ಪ ರುಗಂ|

ಜಾಗ್ರತ್ಸ್ವಪ್ನಸುಷುಪ್ತಿಯೊ | ಳಾಗ್ರಹದೆನಮುಕ್ತಿವಾಯುವ ತಂನೀ | ಲಗ್ರೀವಭಕ್ತಿಹಿಡಿದುಸ| ಮಗ್ರಮುದೋದಯದಿನಿ ತಾಮುರುಗಂ|

ಪರಿಪರಿಯುಚ್ಚರಣೆಯಿಂದಂ|ಪುರ:ಳಾಡಲ್ಕೆಂದುನೆರಪಿರಂದದವೊಲ್ಸು
ಳ್ಳಿರೆಬಂದಿರೆಯಿಂದಿರೆಯೆನುತಿರೆಕೇಳ್ದು ನಮಃಶ್ಶಿವಾಯ ಎಂದೆನುತಿರ್ಪಂ||

ಮಲ್ಲಿಕಾಮಾಲಾ|| ನೋಡುವಲ್ಲಿನಮಃಶ್ಶಿವಾಯನಮಃಶ್ಶಿವಾಯಎನು
ತ್ತೈಸೊ||ಲ್ದಾಡುವಲ್ಲಿನಮಃಶ್ಶಿಯನಮಃಶ್ಶಿವಾಯಎನುತ್ತೆ | ಸತ್ಕ್ರೀಡೆಯ
ಲ್ಲಿ ನಮಃಶ್ಶಿವಾಯ ನಮಃಶ್ಶಿವಾಯಎನುತ್ತೆಮಾ| ತಾಡುವಲ್ಲಿರುತಿರ್ಪನೀ
ಪರಿಯಿಂದೆಶಂಕರಕಿಂಕರಂ| ||೯|

ವ| ಇಂತೀಪರಿಯಲ್ಲಿಪಂಚಾಕ್ಷರಿಯಲ್ಲದನ್ಯಾಕ್ಷರಮನುಚ್ಚರಿಸದೆಪಲ
ವುವತ್ಸರಂ ಪೋಗುತ್ತಿರಲೊಂದುದಿವಸಂಪಗಲ್ಪರೇಶನಪ್ಪಶಿವಂಗೆಪೂಜೆ
ಯಂ ಮಾಳ್ಪೆನೆಂದುಮಹಾ ಭಕ್ತಿಯಿಂಬಂನಮಃಶ್ಶಿವಾಯ ತಚ್ಛಿವಭವ
ನಮಂ ಪೊಕ್ಕಾಗಳ್||

ಕಂ| ಅನುಪಮಲಿಂಗದಪರಿಯೊ| ಳ್ಮನವೊಲ್ದು ನಮಃಶ್ಶಿವಾಯಮು
ದುಗಂಪಡಾ|| ಸನಮಂಬೇಡ್ದಿಗಳನುಪಿಡಿ| ದನುನಯದಿಂ ಭೂತಶು
ದ್ಧಿಯಂತಾಳ್ದಾಗಳ್||

ನಿರುಪಮರುದ್ರಂನೊಸಲೊ| ಳ್ವರುಣಂಹೃದಯದೊಳಮಗ್ನಿನಾಭಿ
ಯೊಳನಿಲಂ|ಕರಗಳದೊಳ ಮರಪತಿಘನ, ತರಭುಜಮೂಲದೊಳಗೊ
ಪ್ಪಿಭಸಿತಮನಾಂತಂ|

ವರಭುಜಮಧ್ಯದೊಳನಿಲಂ| ತರಮಣಿಬಂಧದೊಳೆ ಚಂದ್ರಮಂ
ಬೆನ್ನೆಡೆಯೊಳ್| ಹರಿದಮವೋಲೆಶಿವನೊ| ಪ್ಪಿರೆಭಸಿತಮನಾಂತನಿಂತು
ಪನ್ನೆರಡೆಡೆಯೊಳ್||

ಪರಶಿಖಿಯೊಳೊಂದುಮೂಪ | ತ್ತೆರಡಾಶಿರದಲ್ಲಿಕಂಠದೊಳ್ಪದಿನಾ
ರುಂ| ಕರಪೆಡೆಯೊಳಗೊಂಬತ್ತುಂ|| ಮೆರದಿರೆರುದ್ರಾಕ್ಷಮಾಂತನಾಶಿ
ವಭಕ್ತಂ! |೧೩||

ಶ್ರುತಿಗಳೊಳೈದೈದುಮನು | ನ್ನತಭುಜದೊಳ್ಷೋಡಶಂಗಳೈವ
ತ್ತೈಲ್ಕು| ಜಿತವಕ್ಷದೊಳೊಪ್ಪಿರೆಪಿಳ|| ಸಿತರುದ್ರಾಕ್ಷಗಳನಾಂತನಾ
ಶಿವಭಕ್ತಂ| ೧೪|

ಉಪವೀತಂನೂರೆಂಟುಂ| ಜಪಮಾಲೆಯುಮಿಪ್ಪತ್ತೇಳುಮಾಮುರು
ಗಂಗಂ| ವಿಪುಳಪರುದ್ರಾಕ್ಷಗಳಿಂ || ತುಪರಿಭ್ರಾಜಿಸಿದ ನಾಗವೋಕ್ತಿ
ಗಳಿಂದಂ|| ೧೫||

ವ॥ ಇಂತೀಪರಿಯೊಳಾಗಮೋಕ್ತಿಯಿಂನಮುಶ್ಶಿವಾಯಮುರುಗಂವಿ
ಭೂತಿರುದ್ರಾಕ್ಷಿಗಳಂ ತಾಳ್ದು ಶೋಷಣದಹನ ಪ್ಲಾವನಂಗಳಿಂತನುಶು
ದ್ಧಿಯುಂಮಾಡಿ ಅಂಗನ್ಯಾಸಕರನ್ಯಾಸ ಮಂತ್ರೀರ್ಜ ಆವಾಹನಾಸನ
ಪಾದ್ಯಾರ್ಘ್ಯಾಚಮನೀಯ ಸ್ನಾನವಸ್ತ್ರ ಯಜ್ಞೋಪವೀತಾಭರಣ
ಗಂಧಪುಷ್ಪಾಕ್ಷತ ಧೂಪದೀಪನೈವೇದ್ಯತಾಂಬೂಲ ವೆಂದಿಂತುಪಚಾರ
ಷೋಡಶಂಗಳಿಸೆಮೆಲ್ ಶಿವಲಿಂಗಾರ್ಚನೆಯುಂ ಮಾಡಿಯುಮನಿಯಮಾ
ಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿಗಳೆಂಬ
ಷ್ಟಾಂಗಯೋಗದೊಳ್ಪರಮಾನಂದ ಮನೆಯ್ದಿ ಮತ್ತಮಾಗಳ್॥
ಕಂ॥ ಪರವಶದಭಕ್ತಿಯಿಂದಂ। ಪರಮಾನಂದಾಶ್ರು ವಾರಿ ನಯನದಿ
ನುಣ್ಮಲ್। ತ್ರಿರೆಜಲಮಂ ದೋರ್ತುನಮ। ಸ್ಕರಿಸುತ್ತೆನಮುಶ್ಶಿವಾಯಮು
ರುಗಂಮೆರೆದಂ। |೧೬॥
ನೆರೆಭಕ್ತ್ಯಾವೇಶದಿನೆ। ಯ್ಮರೆಮರ್ಚನಮುಶ್ಶಿವಾಯ ಮುರು
ಗಂಪೊಗಳ್। ಲ್ಕರಿಯುದೆಮುರುಳಂತಿರಕ್ಕೈ। ಪರೆಗುಟ್ಟನಮುಶ್ಶಿವಾಯಮನು
ತಂ ಕುಣಿದಂ। ೧೭॥
ಚಂ॥ ಹರವರಮೂರ್ತಿಯುಂ ನಲಿದುನೋಡುತೆ ಹಿಗ್ಗುತೆಕೂರ್ಮೆ
ಮಾಡುತಂ। ಪರಮಸುಖಾಬ್ಧಿಯೊಳ್ಮುಳುಗುವಂ ಶಿವಲಿಂಗವನಪ್ಪಿನೇ
ಹದಿಂ ಕರಗಿಕರಂ ಮನಂಬಿಡದೆ ಜೀರ್ವರಿದುಂತೆರಪಿಲ್ಲ ದೀಶನೊಳ್
ಜರಸಿನಮುಶ್ಶಿವಾಯ ಮುರುಗಂ ಪಿರಿದೊಪ್ಪಿದನಚ್ಚಭಕ್ತಿಯೊಳ್।
ಕಂ॥ ನೆನೆವಮನಂಸಲೆನೆಲೆಗೊಂ। ಡನುನಯದಿಂಧಾವಮಾಳ್ದುಲಿಂ
ಗದೊಳಗೆನೆ। ಟ್ಟನೆಕೂಡಿಪರವಶಂಮಿಗೆ। ಘನಮಹಿಮನಮುಶ್ಶಿವಾಯ
ಮುರುಗಂಮೆರೆದಂ।
ಚಂ। ಧರದೊಳಿಮೇಲೆಬಿರ್ದುಪೊರಳುತ್ತೊಲವಿಂದೆನಮುಶ್ಶಿವಾಯ
ಎಂ। ದಿರದೆನಮುಶ್ಶಿವಾಯ ಮುರುಗಂಬಿಡಲಾರದೆ ಕೂರ್ತುನೋಡು
ತಂ। ಪರವಶದಿಂದಿರಲ್ಕರುಣಮುಂಸಲೆಪಾಡಿಪೊರಳ್ದು ಮಚ್ಚಬಂ॥ ಧುರ
ನಿಜಮೂರ್ತಿಯುಂ ನಲಿದುತೋರಿಸಿದಂಕೃಪೆಯಿಂದೆಶಂಕರಂ॥
ಕಂ॥ ಮಿಸುಪಜಡೆ ಗಂಗೆಹಿಮಕರ। ನಸಮಾಕ್ಷಿಭುಜಂಗಕುಂಡಲಂ
ಪಂಚಮುಖಂ। ಭಸಿತಾಂತವಾಪ್ಪದಶಭುಜ। ಮೆಸೆವಶಿವಂದಿವ್ಯಮೂ
ರ್ತಿಯುಂತೋರಿಸಿದಂ। ॥೨೧

ಅರ॥ ಪಂಕಜಂಪೊಲವಿಂ। ದೋರಂತೆನಮುಶ್ಶಿವಾಯುವನುತದಿಗೆರಗಲ್
ಮಾರರಿಪುವಪ್ಪಿನಿಷ್ಠೆಗೆ। ಹಾರೈಕುತ್ತೆೊಲ್ದುಮುರುಗನೊಳ್ಪಂಪೇಳ್ದಂ॥
ವರಪಂಚಾಕ್ಷರಿಯಲ್ಲದೆ। ಪರಿಕಿಪೊಡನ್ಯಾಕ್ಷರಂಗಳಂನುಡಿಯದಸ
ಚ್ಚರಿತಂ ಮುರುಗನೆನುತ್ತೀ। ಶ್ವರನುಂತಾಂನಂಟಗೆಂದ ನಂದ್ಯೋಲ
ವಿಂದಂ।

ವ॥ ಅಂತಾನಮುಶ್ಶಿವಾಯು ಮುರುಗರ ಸದ್ಭಕ್ತಿಯ ನಿಷ್ಠೆಯುಂಶಂಕ |೨೩|
ರಂಕೊಂಡಾಡುತ್ತಿರ್ದಾಗಳ್।

ಕಂ॥ ಗೀರ್ವಾಣಭೇರಿಪೊಳಗಲ್। ಪರ್ವಿದರ್ಲತಾಂತ ವೃಷ್ಟಿಸುರಿ
ಯುಲ್ಪೊಳೆವು। ತ್ತುರ್ವಿಗೆದಿವ್ಯವಿಮಾನಂ! ಸರ್ವೇಶನನಿಯಮದಿಂದೆ
ಬಂದುತ್ತಾಗಳ್।

ವ॥ ಅಂತುಬಂದದಿವ್ಯಪುಷ್ಪಕ ದೊಳಾನಮುಶ್ಶಿವಾಯುಮುರುಗರಂ |೨೪॥
ಕಾರುಣ್ಯದಿಂ ಕುಳ್ಳಿರಿಸಿಗಂಗಾಧರಂ ನಿಯಾಮಿಸಿದಾಗಳ್।

ಉತ್ಸಾಹವೃತ್ತಂ। ಸುರರನೆರವಿಕೂತುಃಪೊಗಳೆ ದಿವಿಜ ಕಾಮಿನೀ
ಜನಂ। ಭರತಮಾರ್ಗದೋದುನೆಸೆವು ಮೆರೆಯೆನಲಿದು ನರ್ತಿಸಲ್ ವ
ರನಮುಶ್ಶಿವಾಯುಮುರುಗ ದೇವದಿವ್ಯಪುಷ್ಪಕಂ। ಭರದೆತಾರಶೈಲಕಂ
ದು ಬಂದುದುತ್ಸವಂಗಳಿಂ।

ವ॥ ಅಂತುಬಂದನಮುಶ್ಶಿವಾಯುಮುರುಗಾನ್ವಿತಂ ಕಾತ್ಯಾಯನೀವಲ್ಲ ॥೨೫॥
ಭಂತಾಚಲಾಸ್ಥಾನಮಂಟಪದೊಳ್ ವೀರಭದ್ರಪ್ರಮುಖಪ್ರಮಥ
ಪರಿವೃತವೊಳಸೆಯಲೆನ್ನೊಡ್ಡೋಲಗಂ ಗೊಟ್ಟುಕುಳ್ಳಿರ್ದಾಗಳ್।

ಕಂ॥ ವನಮಾಲಿಪೊಗಳತಿಂಲಂ। ದನುನಮುವೆ ನಮುಶ್ಶಿವಾಯಮು
ರುಗಗರ್ಗಂಭು। ವಿನುತಗಣಪದಮನಿತ್ತಗ। ತನಯಾಮರನೋಪ್ಪುತಿರ್ದ
ನಾಸ್ಥಾಯಿಕೆಯೊಳ್।

ಗದ್ಯ ಇದು ಸಕಲಸುರನಿಕರ ಮಕುಟಮಾಣಿಕ್ಯ ಮಾಲಾಮರೀಚಿ ॥೨೬॥
ಪುಂಜರಂಜಿತ ಪಾದಪಂಕಜ ಶ್ರೀಮತ್ಪಲಿಗೆರೆಯ ಪುರಾಧಿಪಂ ಶ್ರೀ
ಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿ ಚಕ್ರವರ್ತಿ ವಿರಚಿತ
ಮಪ್ಪತ್ರಿಷಷ್ಠಿಪುರಾತನರ ಚಾರಿತ್ರದೊಳ್ ನಮುಶ್ಶಿವಾಯ ಮುರುಗ
ಮಾಹೇಶ್ವರ ಕಥಾವೃತ್ತಾಂತಂ

# ಚತುರ್ದಶಾಶ್ವಾಸಂ

## ಅರಿವಾಳ್ತಾಂಡರ ಕಥನಂ

ಕಂ॥ ಧರೆಜಯಜಯಜೀಯೆನುತಿರ| ಲರಿವಾಳ್ತಾಂಡರ್ಗೆಮೆಚ್ಚಿ ಗಣ
ಪದಮಂಕೊ | ಟ್ಟರನಿಂದಜನುತನೆನಿಸುವನಿರುಪಮಸೋಮೇಶನೊ
ಲ್ದು ಪಾಲಿಕೆನಮ್ಮಂ| ೧॥

ತರಳವೃತ್ತ॥ ಹರನೆಸೆಜ್ಜೆಯೆನಿಪ್ಪ ಚೋಳಧ ರಿತ್ರಿಯೊಳ್ವರನಂದ
ನೋ॥ ತ್ಕರದಿಸುದ್ಘತಟಾಕಪಙ್ತ್ತಿಗಳಿಂ ಪಶಾಲಿಯ ಕೆಯ್ಗಳೊತ್ತರದಿ
ನೀಶ್ವರಭಕ್ತಸಂಕುಳದಾಳಯಂಗಳಿ ನೊಪ್ಪುತಂ ನಿರುತಮಿರ್ಪುದು
ಕಣ್ಣಮಂಗಲ ಮೆಂಬನಾಮದಸತ್ಪುರಂ॥ |೨

ಕಂ| ಪಿರಿದುಂಪೆಂಪಿನೊಳಿಪ್ಪಾ | ಪುರದೊಳ್ಶಿವಭಕ್ತಕಿಂಕರಂತಾ
ನೆನಿಸು| ತ್ತರಿವಾಳ್ತಾಂಡಾಹ್ವಯಮಂ ॥ ಧರಿಯಿಸಿಸದ್ಭಕ್ತಿಯಿಂದೆಸಾ
ರೆವೃತ್ತಿರ್ಪಂ| ॥೩॥

ಶಿವನಲ್ಲದನ್ಯದೈವವ| ನವನರಿಯಂಸಜ್ಜೈಪ್ಯೈಕ್ಯ ಸಂಗದೊಳಿರ್ಪಂ|
ಶಿವಸಂಬಂಧಿಗಳಲ್ಲದ| ಭವಿಗಳನೊಲ್ಲದಗುಣಾಬ್ಧಿಯರಿವಾಳ್ತಾಂಡಂ॥

ಪರಿಕಿಪೊಡೆಶೂದ್ರಕುಲಜಂ | ನಿಶುತಂಕೂಲಿಯನುಮೊಳ್ಪಿನಿಂದಮ
ಕೃಷಿತನಗಂ| ಪಿರಿದುಂ ಗಳಿಸಿದಧಾನ್ಯಂ | ಹರಂಗೆನುತ್ತೆಸೆವೃತ್ತಿಪನ
ರಿವಾಳ್ತಾಂಡಂ| ೫॥

ಪಿರಿದಿಂಚೆಯೋಗಿಕಿಡುತಿ|ರ್ಪುರುಗದೇಯನೊಲ್ದು ಪೊಕ್ಕೊಪದು
ಫಲಮುಕ್ಕುಂ. ನಿರುತಂಪುಳಿಸಪ್ಪದೆನು| ತ್ತರಿವಾಳ್ತಾಂಡರ್ಗೆಭಕ್ತಜನ
ಮೊಲಿದಿರ್ಪರ್| |೬|

ಪುರಹರಭಕ್ತಿಗಳಲ್ಲದ ವರಗದೆ-ಗಳೆಂಬವಕ್ಕೆಪೊರ್ದಂಶಿವಭ॥ಕ್ತ
ರಗರ್ಪೆಗಳಂಪೊಕ್ಕಾ| ದರದಿಂಕೂಲಿಯನೆಮಾಡಿ ಬಾಳ್ವಂಭಕ್ತಂ|
ವ| ಅಂತೀಪರಿಯೊಳರಿವಾಳ್ತಾಂಡಂ ದಿನದಿನದೊಳ್ಕೂಲಿಯಂಮಾಡಿ
ತರ್ಪನೆಲ್ಲಕ್ಕಿಗಳೊಂದು ದಿನಂಲೇಸಪ್ಪಗಂಧಶಾಲಿಯತಂಡುಲಮುಂದೊ
ರಳ್ಕಿವುಮನ್ನ ಶಿವಂಗೆತಕ್ಕುವೆನುತ್ತಂ ತಾಂಮಿಸಲಾಗಿಬಾಸಣಿಸಿ
ಕೊಂಡುಪೊರಮಟ್ಟು ತನ್ನೂರ್ಗೆಕ್ರೋಶದ್ವಯ ಪ್ರಾಂತದೊಳಿಪ್ಪ
ತಿರುನಲ್ಲ ರನಾಥ ನಿಪ-ಶಿವನಿಳಯಕ್ಕೆ ನಡೆತಂ ದೊಳಪೊಕ್ಕುಮೆಯಿಸಿ

ಕ್ಕಿಪ್ಪೊಡಮಟ್ಟು ತಚ್ಛಿವಲಿಂಗಕ್ಕೆ ಪೂಜೆಯಂ ಮಾಳ್ಪಶಿವಬ್ರಾಹ್ಮಣರ ಕಯ್ಯೊಳ್ ತಾಂ ತಂದ ಕಮ್ಮಗಳವೆಯಕ್ಕಿಗಳ ನೆಲೆಯ ಕೀರೆಯ ಸೊಪ್ಪಂ ಮಾಡಿಗಳಂ ಕೊಟ್ಟೊಪ್ಪುಳ್ಳಿತ್ತಾಗಿ ಬೋನಮುಮಂ ಸಮೆದು ಶಿವಲಿಂಗಕ್ಕರ್ಪಿಸುವುದೆಂದು ಪೇಳ್ವುದುತ್ತ ಮಾ ಶಿವಲಿಂಗಕ್ಕಭಿಮುಖನಾಗಿ ಪೊಗಳ್ದು ಕೈಗಳಂ ಮುಗಿದಿಂತೆಂದಂ

ಕಂ ॥ ಎಲೆಗಿರಿಜಾವರನಿಜಪದ ನ್ನೞಿನ್ನ್ಯವುಮಲ್ಲದನ್ಯಮರಿಯದಽಟ್ಟಂ ಸಲೆನಿನಗಾನೀಕ್ಷಿಪುದೆನ । ಗೊಲವಿನ ತಾಯ್ತಂದೆ ಬಂಧು ಪೆರರಿನ್ನೊಳರೇ
ಅದರಿಂದೆ ನಿನ್ನಂ ನಾಂ । ವಿದಿತಂ ಪಾಲಿಪುದೆನುತ್ತ ಮರಿವಾಳ್ತಾಂಡಂ ಮದನಾರಾತಿಯ ಪದಮಂ । ಮುದದಿಂದಂ ನಚ್ಚಿಬಿಡದೆ ಮತ್ತಿಂತೆಂದಂ
ವರಗಂಧಶಾಲಿಮೊರಕಲ್ । ಪರನಿನ್ನಯ ಬೋನಕರ್ಥಿಯಿಂತಂದೀಪೆಂ । ನಿರುತಮಿದು ನಿಯಮಮೆನಗಾ । ದರದಿಂ ಪಾಲಿಸುವುದೆನ್ನ ಭಕ್ತಿಜಫಲಮಂ । ॥೧೦॥

ವ॥ ಎಂದು ತಿರುನಲ್ಲೂರನಾಥನಂ ಬೀಳ್ಕೊಂಡು ತನ್ನೂರ್ಗೆ ಬಂದು ಶಿವಭಕ್ತರ್ವೆರಸು ನಿಜನಿಳಯದೊಳ್ ಶಿವಲಿಂಗಪ್ರಸಾದಮಂ ಕೊಂಡು ಸುಖೋನ್ನತಿಯೊಳಿರುತ್ತ ಮರಿವಾಳ್ತಾಂಡಂ ನಿಚ್ಚ ಕ್ಕಿನಂದದಿಂ ಕೂಲಿಯಾಳ್ಗಳ್ಕೆರೆದಿರ್ದ ತಾವಿಂಗೆ ಬಂದು ಕೆಲದೊಳ್ನಿಂದಿರ್ದು ದಂ ಕಂಡು ತತ್ಪುರದೊಳಾ ರಂಬಿಗಳಪ್ಪ ಶಿವಭಕ್ತರ್ ಕೂಲಿಕಾರರಂ ಕರೆಯಲ್ವೇಳ್ಕೆಂಬೇಳ್ತಾಂಡಾಗಳಿಂತೆಂದರ್॥

ಕಂ॥ ನಿರುತಂ ಗದ್ದೆಗಳಂ ಪುಗೆ । ವರಫಲಮುಂ ಫಲಿಸೆ ನಿಪ್ಪದಪ್ಪುದೆನುತ್ತಂ॥ ಪಿರಿದೆಮಗೆ ತಮಗೆನುತ್ತಂ । ಕರೆದ ಕೂಲಿಗೆ ಶಿವೈಕ್ಯ ಪುರಾತನನಾಗಳ್ । ॥೧೧॥

ವ॥ ಅಂತು ಕರೆದುಕೊಂಡು ಪೋಗಿ ಶಿವಭಕ್ತರ್ತಮ್ಮ ಬೆಳೆದ ಗದ್ದೆಗಳಂ ಕುಯ್ಸಿ ಮೆದೆಗಳನೊಟ್ಟಿಸಿ ಪರಮಪ್ರೀತಿಯಿಂದರಿವಾಳ್ತಾಂಡಂಗೆ ಕೂಲಿಯನೆಲ್ಲಕ್ಕಿಯನಿಕ್ಕಿ ಕಳುಪಲ್ಕಾತನಂ ತಂದದೊಳಗೆ ಲೇಸಪ್ಪ ಕಮ್ಮಗಳವೆಯಕ್ಕಿ ಒರಲ್ಕೊಯ್ದು ತಿರುನಲ್ಲೂರನಾಥನಪ್ಪ ಶಿವಲಿಂಗಕ್ಕರ್ಪಿತಸಂ ಮಾಡಿಸುಗುಳ್ದು ಬಂದು ತನ್ನಾಲಯದೊಳ್ ಮಹಾಭಕ್ತರ್ವೆರಸ ತನ್ನಿ ಗಪ್ರಸಾದವಂ ಕೊಂಡು ಪರಮಾನುರಾಗದಿಂ ತಾಂ ಪ್ರತಿದಿನಸಿಯುಮಂ ಸಲಿಸುತ್ತಿರ್ಪುದುಂ ಸ್ವಾಮಿ ಪರೀಕ್ಷಿಸಲ್ಕೆಂದು ಗುತ್ತಿರಲ್ಕಂ

ತುವಲ್ಲದೆಯುಂ॥

ಕಂ॥ ಈತನಫಲಮಂ ಕಂಡಾ । ಭೂತೇಶಂಮೆಚ್ಚಿ ಮನವನೊಲ್ದಿ
ಕ್ಷಿಸಲೆಂ ॥ ದೋತುವರಗಂಧಶಾಲಿ। ವ್ರಾತಂನೆರೆಬರಲಿಕೂಲಿಗನಲಂ
ತಾಗಳ್। ॥೧೨॥

ಹರನಿಯಮವನೊಂದುದಿನಂ । ಪಿರಿದೊಳ್ಪಿನಗಂಧಶಾಲಿಕೂಲಿಶಬ
ಳಿತಂ। ಕರನಾರೋಗಣೆಗಿತ್ತಾ॥ ದರದಿಂದುಪವಾಸವಿರ್ದ ನಾಶಿವ
ಭಕ್ತಂ॥ ॥೧೩॥

ಅರಿವಾಳ್ತೊಂಡನ ಮತಿನಿ। ರ್ಭರದಿಂ ಮರುದಿವಸವೆರ್ದು ಕೂಲಿ
ಗಪೋಗಲ್। ವರಶಾಲಿದೊರಕಲಿಂತು। ಗಿರದಿತ್ತುಪವಾಸವಿರ್ದನಸು
ನಯದಿಂದಂ। ॥೧೪॥

ವ॥ ಮತ್ತಮನನ್ಯಭಕ್ತಿವಿಂಗೆ ಕೂಲಿಗೆಪೊಡೆದೆಡೆಯಲ್ಲಿ ನಿಚ್ಚಲ॥ ತ್ಯ
ತ್ತಮಗಂಧಶಾಲಿಬರಲಂ ತವನರ್ಥಿಯಿ ನದ್ರಿಜಾವರಂ । ಗಿತ್ತರಿವಾಳ
ತೊಂಡನತಿಹರ್ಷದಿನೀಪರಿಯಲ್ಲಿ ನೋಡಲಿ। ಪ್ಪತ್ತುಪವಾಸ ಮಾಗಿಫಲ
ಮುಂಬಿಡದಿರ್ದನುದಾತ್ತವೃತ್ತಿಯಿಂ ॥ ೧

ಕಂ॥ ದಿನದಿನದೊಳಾಸದಾಶಿವ। ಘನತರದಿಂಗಂಧಶಾಲಿ ಯಿಂಬರು
ತಿರಲಾಂ। ನಿನಗೀವೆನೆಂಬಬಯಕೆಯೊ। ಳನುರಾಗಂಬೆತ್ತುನೆಡೆಯಿ
ರ್ದಂ ಭಕ್ತಂ। ॥೧೬॥

ಹರನನಿರೂಪದಕೂಲಿಗೆ। ನಿರುತಂಬಂದನಿತುನೆಲ್ಲನಲ್ಲದೆಕೊಳ್ಳಿಂ
ಹರನಿಗೆ ರುಣಮಾಗನದರಿಂ। ಪಿರಿದುಪವಾಸಕ್ಕೆ ಸಿಕ್ಕಿದಂತದ್ಭಕ್ತಂ।
ಪಿರಿದುಪವಾಸಕ್ಕಳ್ಳದೆ । ಹರನಾರೋಗಿಸಿದೊಡೆನಗೆತೃಪ್ತಿಯೆನು
ತ್ತಂ॥ವರಿವಾಳ್ತೊಂಡಂ ಶಿವಭಕ್ತಿ। ರಸವಿದಿನದಿನದೆ ಸೊಂಪುವಡೆವುತಿ
ರ್ದಂ॥ ೧೮

ವ॥ ಅಂತೀಪರಿಯೊಳಪತ್ತು ಉಪವಾಸವಾಗಿಪಿಡಿದನಿ ಯಮ ಮಂಬಿಸ
ದಿರ್ದರಿವಾಳ್ತೊಂಡರ ಭಕ್ತಿಯ ಫಲಕ್ಕೆತತ್ಕೈಲಾಸದೊಳ್ಸದಾಶಿವಂಮೆ
ಚ್ಚಿಭವಾನಿಗಿಂತೆಂದಂ॥

ಕಂ॥ ಧರೆಯೊಳ್ಮತ್ತಂವಾಹೇ। ಶ್ವರನೆನಿಪರಿವಾಳತೊಂಡನಿರ್ದಂನಿ
ನಗಾ! ದರದಿಂದವನಂತೋರ್ಪೆಂ ಗಿರಿಸುತೆಪೆಳೆಂದುರಜತಗಿರಿಯಿಂ
ತಿಳಿದ ॥ ॥೧೯॥

ವ|| ಅಂತು ರಜತಾಚಳದಿಂ ಪೊರಮಟ್ಟು ಗಿರಿಜಾದೇವಿವೆರಸು ಜಕ್ಕೋಳಮಂಡಲದವೆಂಪಂ ನಿರೀಕ್ಷಿಸುತ್ತಂ ತಿರ್ರನಲ್ಲೂರ್ಗೆ ಬಂದು ಗಗನತಳದೊಳ್ ಪ್ರಮಥಗಣಸಹಿತಂ ನಲ್ಮೆಯಿಂ ಶಿವನೋಲಗಂಗೊಟ್ಟು ನೋಡುತ್ತಿರ್ಪನ್ನೆಗಮಿತ್ತಲ್||

ಕಂ|| ಪಿರಿದಿಪ್ಪತ್ತುಪವಾಸದಿ ಶರೀರವಳವಳಿಯುದೀಶ್ವರನ ಬೋನಕ್ಕಂ
ವಿರದೆಯ್ದಿ ಕಾಳಿಯಿಂದಂ| ದೊರಕಿದ ಪರಶಾಲಿಯಕ್ಕಿಯಂ ಕೊಂಡಾ
ಗಳ್|| |೨೦||

ಚಂ|| ಪುರವಿಜಯಂಗೆ ತಕ್ಕುದೆನುತಂ ಪರಶಾಲಿಯ ತಂಡುಲಂಗಳಂ
ತ್ವರಿತದಿ ಕಟ್ಟ ಕಂಪಿಡುವ ಪೂವಿಡಿ ಕೀರೆಯ ಸೊಪ್ಪನಿಪ್ಪುವಂ ಧರಿಯಿಸಿ
ಗರ್ವದೊಳ್ ಜತನದಿಂ ಬರುತಿರ್ಪರಿಪಾಶ್ವತಾಂಡರ| ಗಿರಿಪರಜಾತೆ ನೋ
ಡೆನುತ ತೋರಿಸಿದಂ ಕೃಪೆಯಿಂ ಪೆಶಂಕರಂ|| ೨೧|

ವ|| ಅಂತು ಶಂಕರಂ ತೋರಲ್ಕ ಗಜಾತೆ ನೋಡಿ ನಗುತ್ತಿಂತೆಂದಳ್||

ಕಂ|| ಪಸಿವೊಕ್ಕಲಿಗಂ ಭಕ್ತಿಗ| ಳೆಸೆವಂ ಬಲ್ಲನೆ ಭವತ್ಕರುಣವಿದು ಚಿ
ತ್ರಂ| ವಿಷಮಾಕ್ಷನೆಂಬ ಗಿರಿಸುತೆ| ಗುಸಿರ್ದಂ ತದ್ಭಕ್ತನೊಳ್ಪನಾಗಿರಿ
ಜೇಶಂ|| ||೨೨||

ಮಿಕಿಪೊಡಾನಲ್ಲದತಃ|| ಪರ ನರಿಯದ ಭಕ್ತನಿವನ ನೆರೆವಣಿಗೆಯ ನಾಂ ಪಿ
ರಿದೀಗಳ್ ತೋರುವೆನೆಲೆ| ಗಿರಿಸುತೆ ನೋಡೆಂದು ಗಿರಿಶನೆನುತಿರಲಾಗಳ್
ತರುಗಿಡುಗಳ್ ಕಿತ್ತಂ| ಬರಕ್ಕೆ ಪಾರಲ್ಕೆ ನೆಗೆದಪಿರು ಗಾಳಿಯೊಳಾ| ಹ
ರಭಕ್ತಂ| ತರಗೆಲೆಯಂ| ತಿರೆಘರಗೆನ ಮಳ್ಪಿ ವಾಯು ಏನುತಂ ಕೆಡೆದಂ||

ವ|| ಅಂತು ಕೆಡೆವಾಗಳ್

ಮ|| ಧರೆಯೊಳ್ ಚೆಲ್ಲಿದ ಕೀರೆ ತಂಡುಲ ಮದಂ ಕಂಡಕ್ಕಟಾ ಲಿಂಗದೋ|
ಗರಮಿಂತಾದುದೆ ಎಂದೆನುತ್ತೆ ಪಿರಿದುಂ ದುಃಖಂ ಮಿಗಲ್ಕೆಂದು ಮದ್ಗಿರಿ
ಜಾವಲ್ಲಭನಲ್ಲಿ ಗಾವ ವೋಗಮಂ ಮುಂದಿಟ್ಟು ಕೋಪಂ ಮಹಾಸುರಮಾ
ಯ್ತೆಂದರಿವಾಳ ತಾಂಡನ ತಿವೀರೊಡೆ ಶೋಕಮಂ ತಾಳ್ದಿದಂ!

ವ|| ಅಂತು ಶಿವಂಗೆ ದೂರವಾದೆನೆಂಬ ಕೋಪದಿಂ ತಿಗದೊಳಿಕ್ಕಿರ್ದ ನಂಜನೆಂಜಲಿಪ ಕುಡುಗೋಲಂ ತೆಗೆದುಕೊಂಡು||

ಮ|| ಕಡುಪಿಂ ತೀಕ್ಷ್ಣಮಪ್ಪ ತನ್ನ ಕುಡುಗೋಲಂ ಕೊಂಡು ಕಂಠಾ
ಗ್ರಮಂ ಪೊಡೆಯಲ್ ... ಶಂಭುಂಕೃಪೆಯಿಂತು ಕಾ

ರುಣ್ಯದಿಂ ಪಿಡಿವಾಗಳ್ ಸಸಿನಿಟ್ಟು ಪೊಯ್ದ ಪವಿಕೋಪದಿಂದ ಪ್ಪಿಪೋ
ಳ್ಪೈಸಾತಂ ವೃಷನಂದದದಿವ್ಯರೂಪನಪುರ ಜೀವಜೀವನಲ್ತೋ
ರಿದಂ||

ಕಂ|| ಸುರಸರಣಿತರುಣಶಸಿಶಿಖಿ| ಯುರಗನಗರಳಂವಿಭೂತಿಗಜಕ್ಕೃ
ತ್ತಿಕುರಾ ಸುರನುತಪದಮೆಸೆವಭವಂ| ಪರವಶಭುಜಪಂಚಮುಖಿ
ನೋಡಿದನಾಗಳ್|| ||೨೭||

ವ|| ಅಂತರಿವಾಳತಾಂಡಂ ಶಿವಲಿಂಗದದಿವ್ಯಮೂರ್ತಿಯಂ ಕಂಪುಚ
ರಣಕಮಳದೊಳ್ಪೊರಳ್ದು ಭಯಭಕ್ತಿಯಿಂಪಾ ಸಂಪಾಶ್ರುಜಳಂಕ್ಷಣ್ಣ
ಳಿಂ ಕೋಡಿವರಿವುತ್ತಂ ಜಯಜಯ ನಮಃಶಿವಾಯ ಎನುತಿರಲ್ ಕೃ
ಪೆಯಿಂ ಪಿಡಿದೆತ್ತಿ ಕುಳ್ಳಿರಿಸಿ ಮೇನಕಾತ್ಮಜೆಗಿಂತೆಂದಂ|| ೨೮||

ಕಂ| ಭರದಿಂದೆನ್ನಯಮೇನವ ಪರತಂಡುಲವವ ನಿಗ್ರೊಕ್ಕಪೆನು
ತಂಮರುಗು| ತ್ತರಿವಾಳ್ತಾಂಡಂನಿಜಶಿರ| ವಂದನೆನಲ್ಪಾಟ ಯಾವನೆ
ಡಂಗಿರಿಶಂ|| ||೨೯||

ವ| ಎಂದುನಂದಿನಾಥಪ್ರಮುಖ ಪ್ರಮಥರ್ಗರಿವಾಳ್ತಾಂಡರಭಕ್ತಿ
ಯುಳಲಮನಭವಂ ಕೊಂಡಾಡುತಿರ್ಪಾಗಳ್||

ಕಂ|| ಗಗನದಿಪೂವಳೆಗರೆಯಲ್| ಸೊಗಯಿಪಗೀರ್ವಾಣಭೇರಿಗಳ್ಮೊ
ಳಗಲ್ಕಂ| ಡಗಣಿತಮಣಿಗಣನಿಕರದಿ| ಮಿಗೆಮೆರೆವ ವಿಮಾನಮಿರದೆಬಂ
ದುತ್ತಾಗಳ್|

ವ|| ಅಂತುಬಂದವಿಮಾನದೊಳರಿವಾಳತಾಂಡರಂ ಪರಮಕಾರುಣ್ಯ
ದಿಂಕುಳ್ಳಿರಿಸಿ ಶಂಕರಂಬೆಸಸಿಪಾಗಳ್|

ಚಂ| ದೆಸೆಗಳನೆಯ್ದೆ ಚಾರುತರರತ್ನಸಮೂಹದರಶ್ಮಿಸಂಕುಳಂ|ಮಿ
ಸುಗೆವೃಷಧ್ವಜಂ ನಭವನಳ್ಳಿರಿ ವುತ್ತಿರೆಶ ಕ್ರಮುಖ್ಯ ದೇವ ಸಮಿತಿ
ಕೂರ್ತುಘೋ ಎನುತಿರಲ್ಕೆ ನೆಗಳ್ವ ರಿವಾಳತಾಂಡರಿಂ| ದೆಸೆವವಿಮಾನ
ಮುತ್ಸವದಿಬಂದುದುತಾರಗಿರೀಂದ್ರ ಕಳ್ಕರಿಂ|| |೩೦||

ವ| ಅಂತುಬಂದ ರಿವಾಳತ್ತಾಂಡಂ ಚಿರಸುಖಂಡೇಂದು ಶೇಖರಂ ನಿಜ
ಪ್ರಮಥಗಣ ಸಮೇತಮಾನಂದ ದಿಂದೊಡ್ಡೋಲಗಂ ಗೊಟ್ಟುಕುಳ್ಳಿ
ರ್ದಾಗಳ್

ಕಂ| ಭೃಂಗೀಶಮುಖ್ಯಗಣತತಿ| ಪಿಂಗದೆಪೂಗಳೆತ್ತಿರಲ್ಕೆ ಕೂರ್ತು

ವಾಳ್ತಾಂಡ ॥ಂಗೆಗಣಪದವನಿತ್ತೊಲ॥ ವಿಂಗಿರಿಜಾ ರಮಣನಿ ರ್ದನಾಸ್ಥಾಯಿಕೆಯೊಳ್। ।೩೦।

ಗದ್ಯ— ಇದು ಸಕಲಸುರ ನಿಕರಮಣಿ ಮಕುಟಮಾಣಿಕ್ಯ ಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪಶ್ರೀ ಸೋಮನಾಥಪಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿವಿರಚಿತಮಪ್ಪ ತ್ರಿಷಷ್ಟಿಪುರಾತನರಚಾರಿತ್ರದೊಳರಿವಾಳ್ತಾಂಡರ ಕಥಾವೃತ್ತಾಂತಂ।

ಚತುರ್ದಶಾಶ್ವಾಸಂ



॥ ಪಂಚದಶಾಶ್ವಾಸಂ॥

## ಅನ್ಯೆನಾರ ಕಥನಂ

ಕಂ॥ ಪ್ರಣತನಿಕುರುಂಬರಕ್ಷಾ। ಮಣಿಯೆನಿಪಾನಾಯಿನಾರಮಪ್ಪಾಹೇಶಂಗಂ। ಗಣಪದಮನಿತ್ತುಮೆರೆಪತಿ।ಗುಣನಿಧಿಸೋಮೇಶನೊಲ್ದುಪಾಲಿಕೆನಮ್ಮಂ। ॥೧॥

ಉ॥ ಮಾರವಿರೋಧಿಯಿರ್ಪಘನ ಚೋಳಧರಿತ್ರಿಯೊಳೊಪ್ಪುತಿರ್ಪ ಕಾ। ವೇರಿಯತೀರದೊಳ್ಲಲಿತ ಪಾದಪನಾವಳಿಯಿಂದಮುದ್ಘಕೇ।ದಾರಸಮೂಹದಿಂ ಕುಸುಮವಾಟಿಗಳಿಂ ಶಿವಲಿಂಗಮಂತರಾ,ಗಾರಚಯಂಗಳಿಂದೆಸೆವುತಿರ್ಪುದು ಸತ್ಪ್ರಜಮೊಂದು ಪೆರ್ಮೆಯಿಂ। ।೨।

ಚಂ। ಅತಿಬಳರಾಮನಂತೆಪರಧರ್ಮಯುತಂ ಭಟಹಸ್ತದಂತೆಸಂ।ತತಮುಸಿಭಾಸಿಥೇನು ಲಲಿತಂನೃಪರಾಜನಿವಾಸದಂತೆ ಸಂ। ತತಮಹಿಷೀಮಯಂ ಹರಿಯನಾಳಿಸಕೋರುಪದಂತೆಗೋಪಮಂ ಡಿತಮೆನಿಸುತ್ತೆ ವಾರಿನಿಧಿಯಂತೆ ಮಹೋರ್ಜಿತ ಘೋಷಮೊಪ್ಪುಗುಂ॥

ಮತ್ತಮುಲ್ಲಿ

ಯುರ್ಸುಗಂಧತೈಲಮಂ| ಪೂಸಿಮಂಗಳವೆಸೆಯಲ್ಪೊನ್ನ ಘಟ್ಟವಣೆಯೊ
ಳ್ಕುಳ್ಳಿರಿಸಿ
ಚಂ|| ಕುರುಳ್ಗಳಸಿಕ್ಕೊಡಂತೆಗೆನಬಾಗ್ರದಿನಾರ್ಜಿಕುಚಂಮ್ಮುಸುಂ
ಕುವಂ| ತಿರೆವಸನಾಂಚಲಂತೆಗೆದುಮಂಗಳ ಸೂತ್ರಿಕೆಯೊಳ್ತೊಡರ್ಚಿ
ಬಂ| ಧುರಕಟಿಸೂತ್ರಕಾಂತಿಪರ ತೊಂದೆಡೆಯಾಗಿರೆ ಕರ್ಣಪತ್ರಮಂ|
ಕರಯುಗದಂದವೊತ್ತಿಸಲಿಮಜ್ಜನಪೀಠದೊಳಾಗಳೊಪ್ಪಿದಳ್
ಕಂ|| ವರವನದೇವತೆಯುಸರ್ವ| ದರದಿಂನವಜಾ ತಲತೆಗೆನೀರ್ವೊ
ಯ್ವವೊ|ಲಾತರುಣಿಗೆ ಗಂಧೋದಕಮಂ | ಸುರಿದರ್ಶಶಿಕಾಂತಕಳಶ
ತತಿಯಿಂಸಖಿಯರ್| ೧೭೦
ವ| ಅಂತುಮಜ್ಜನಮಾದತದನಂತರದೊಳು||
ಚಂ| ಕೆಳದಿಯರೊಲ್ದುನೀಡಿದಸುವಸ್ತ್ರಮನುಟ್ಟುವಿಭೂಷಣಂಗಳಂ|
ತಳೆದುಕುಚಂಗಳಿರ್ದೆ ಸೆಗೆವೋಲುದುತಾಂವೊನೆದೋರೆಘರ್ಘರಾ|
ವಳಿಪಿರಿದೊಪ್ಪೆ ತಿರ್ಪಪೊಸಪಾದುಕೆಗಳ್ಘಲಕೆಂದೆನಲ್ಕೆ ಕೋ|ಮಳೆಕಣ
ವಿರ್ಪಭದ್ರನಿಳಯಕ್ಕಿರೆ ದೆಯ್ದಿದಳೊಂದುಲೀಲೆಯಿಂ|| ||೧೭೧
ವ|| ಪತ್ತುನಿತ್ತಲ್ ವಿಕ್ರಮಚೋಳರಾಜೇಂದ್ರಂ ಸರ್ವಸಂಪ್ರ
ಮದಿಂ ನಿರ್ವರ್ತಿತನವಗ್ರಹಹೋಮನಿಯಮನಾಗಿಸುವರ್ಣಕೋ
ಗಳಂವಿಪ್ರಜನರ್ಗಿತ್ತು ತಣಿಪಿಜೋತಿಷವೃಂದಂ ಬೆರಸುಸುಮುಹೂ
ರ್ತದೋಳ್ವರಪುತ್ರನಸವಿಾಪಕ್ಕೆಬಂದನಂತರಂ||
ಕ್ಷಂ| ಗಿರಿಜಾವರನೊಲ್ದಿತ್ತಾ। ವರದಿಂದುದ್ಭವಿಸಿಧಾತ್ಮತನಯಂ
ರ್ವಿ|ಶ್ವರನತಿರಭಸಂವಿ:ಗಲಾ|ದರವಿಪಗಲ್ಕೋಳನೆಂಬನಾಮವನಿಟ್ಟ
ಧಾರಿಣಿಪೊಗಳುತ್ತಿರೆಗಂ| ಭೀರಪನಗಲ್ಕೋಳನಿವಗೆ ಗೃಹಕದಮ
ಕೋ| ಟ್ಪೋರಂತೆಮೆರಧಸದ್ಗುಣವಾರಿಧಿಸೋಮೇಶನೊಲ್ದು ಪಾ
ಕೆನಮ್ಮಂ||
ವ|| ಅಸಮಯದೊಳು||
ಉ|| ಭೂಪರನಾತ್ಮವಲ್ಲಭೆಕುಮಾರಕನಂ ಪೊಸಪೊನ್ನತೊಟ್ಟಿ
ಳ್|ತೀವಿದುಕೂಲವಾಂ ಪೊದಿಸಿಸಂತಸದಿಂ ಪರಸುತ್ತಿರಲ್ಕೆತ| ಪ್ಪ
ದಿ ಕಂಕಣಂಗಳುಲಿಯು ಲ್ಮೃದುಹಸ್ತದಿತೂಗಿ ಮಂಗಳಾ ರಾವದಿಪಾ
ದನಲಿದು ಜೋ ... ಪಿಸೇಜನಂ| ೧೭೩

ವ॥ ಅಂತಾಗಳ್ಕುಮಾರನಂ ತದ್ದಂಪತಿಗಳ್ ದಿನದಿನದೊಳ್ಪೆರ್ಚಿನ ಲಿವೃತ್ತಮಿರೆಯಿರೆ॥

ಮ। ಸ್ರ॥ ಬೆಳೆವಂಮುಂದಾರಭೂಜಾತದ ಕಿರಸ್ನಿಗ್ಧಮಂಬಿಂಬದಿಂ ಕೀರ್ತಿಯಿಂದಂ। ಬೆಳೆದಂಲೋಕಕ್ಕೆಸಂಪೇಳ್ಗೆಯಹಿಮಕರನೆಂಬಂದದಿಂ ಕಾಂತಿಯಿಂದಂ ಬೆಳೆದಂಬಾಲಾರ್ಕನೆಂಬಂದದಿ ನತಿವಿಕಳತ್ತೇಜದಿಂ ತತ್ಕುಮಾರಂ। ಬೆಳೆದಂಸಂಸಾರಸಾರಂಪರ ಬುಧಜನಕಾಸಾರಕೇಳೀ ಮರಾಳಂ। ॥೧೭೫॥

ಕಂ॥ ಜನನಿಮೊಲೆಯೂಡಿನಲಿವಳ್। ಜನಕಂಪೇರುರದೊಳಪ್ಪಿಬ್ಬಿಷದೊಲ್ದಬಳಾ। ಜನವೆತ್ತಿಕೊಂಡುನತ್ತಿಸಪು। ದೆನಲಾಚೋಳಂಶಿಶುತ್ವದೊಳ್ಸೊಗಯಿಸಿದಂ॥ ।೧೭೬।

ಅರಳೆಲೆಮಾಗಾಯ್ತಾನೆಯುಲ್। ವರಘಂಟಿಕೆಪೊನ್ನಗೆಜ್ಜೆಯಂದ್ರಾಗೆ ಗಳ್ಬಿತ್ತರದಿರ್ಘುಣುರ್ಘುಣಿಸೆಕುವರಂ। ಪಿರಿದಂಚೆಯಮರಿಗಳೊಡನೆನಲಿವುತ್ತಿರ್ದಂ॥ ।೧೭೭॥

ಮಿಗೆಸುರೆಗರೆವತೊದಳ್ನುಡಿ। ಸೊಗಯಿಪದಟ್ಟಡಿಯುಹಾರಣಾಸ್ಮಿತವದನಂ॥ ಒಗೆಗೊಂಡೊಪ್ಪಿರೆ ಶಿಶುಲೀಲೆಗೆ ನಲಿವರ್ತರ್ಪಂಬೆ ತಾಯ್ಗಳುತ್ಸಾಹದಿಂದಂ॥ ॥೧೭೮॥

ಪದೆದೊಳ್ನಡೆಗಳ್ಪಲಿದೊ। ಪ್ಪಿದುವುತೊಪಳ್ಪಿಂಗಿನುಡಿಗಳತಿಚಪಳತೆವೆ। ತೆತ್ತಿದಪಿದವೃದ್ಧೇಹರುಚಿಪೆ, ರ್ಚಿದುದಾಕುವರಂಗೆಸ್ವೈರಭಾತ್ರಿಕ ಮರ್ದೊಳ್॥ ೧೭೯॥

ಬಳಿವನಿಜಸೂನುಪಂಕಂ। ಡಿಳೆಯರಸಂಕರಮುಹರುಷವಿಂದಾಗಳ್ತಂ ಗಳಮೆನಲುಪನಯನಮನ ಗ್ಗಳಕವಿಗಲ್ಮಾಡಿಬುಧರ್ಗೆಬೇಡಿತ್ತನಿತ್ತಂ
ತದನಂತರಂ

ಚಂ॥ ನಿರುಪಮುಶೈವತತ್ವವಿದನಪ್ಪ ಮಹಾಗುರುಚೋಳಧಾರಿಣೀಪ ರನತನೂಭವಂಗೆ ನಿಜಭಾವನವಾದವಿಭೂತಿ ಗೊಂಡು ಸಾದರ ದೊಳಿತಾಳ್ದರಾಜ್ಯದವಿಭೂತಿಗೆನೆಟ್ಟನೆರಕ್ಕೆಗಟ್ಟುವಂತಿರೆಫಣೆಯಲ್ಲಿಸೂಸಿ ವಪೂಪಕನಂಕ್ರಪೆಯಿಂದೆಮಾಡಿದಂ। ॥೧೮೧॥

ವ॥ ಅಲ್ಲಿಂಬಳಿಯಿಂವಿದ್ಯಾಭ್ಯಾಸಮಂಮಾಡಿಸಲ್ಕೆಂದುನಾನಾಶಾಸ್ತ್ರವಿಶಾರದನಪ್ಪಾಚಾರ್ಯನಲ್ಲಿ ಶುಭದಿನದೊಳ್ ಮಂಗಳ ಪ್ರಸಾಧನಮಪ್ಪ

ಶೃಂಗಾರಂಗಳಂ ಮಾಡಿಸಿಸಕಳಪರಿಜನಂ ಬೆರಸುತೂರ್ಯತ್ರಯದ ಸಂಭ್ರಮದಿಂವಿಕ್ರಮಚೋಳರಾಜೇಂದ್ರಂನಿಜನಂದನನವಿದ್ಯಾಭ್ಯಾಸಕ್ಕೆಸುವರ್ಣಕೋಟಿಯಂ ಕೊಟ್ಟುನೆರವಿಸಲ್ಕಲ್ಲಲ್ಲಿ ಚಪಳತೆವೆತ್ತುಚತುರ ವಿದ್ಯಾಭ್ಯಾಸಮಂ ಮಾಡುತ್ತಿರೆ

ಕಂ॥ ಸುರರಾಜನಪರಸುತನಂ। ತಿರೆಭೆನತರಶಸ್ತ್ರಶಾಸ್ತ್ರವಿದ್ಯೆಗಳಂ
ಭೂ। ವರನತನೂಭವನಾಂತಾ। ದರದಿಮಹಾಪ್ರಾಜ್ಞ ನೆನಿಸುತೆಸೆ
ವ್ರುತ್ತಿರ್ದಂ॥ ೧೮೩

ವ॥ ಅಂತಾಕುಮಾರನಭ್ಯಸಿಸಿದ ವಿದ್ಯೆಗಳಂನೋಡಲ್ಕೆಂದುವಿಕ್ರಮಚೋಳರಾಜೇಂದ್ರ ನವನಂಬರಿಸಿಪರಮೋತ್ಸಾಹದಿನುತ್ಸಂಗದೊಳ್ಕುಳ್ಳಿರಿಸಿಕೊಂಡಾಗಳ್।

ಕಂ। ವಿದ್ಯಾವಳಿತತ್ಸುನುಗೆ। ಹೃದ್ಯಂಕಡುವೇಗದಿಂದಮಾಡುವೆನು
ತ್ರಂ। ಚೋದ್ಯಮನೆಯ್ದಿಮಹೀಪಾ। ಲಾದ್ಯಂಬಿಗಿಯಪ್ಪಿಮುದಮ
ನೊಲವಿಂತಾಳ್ದಂ॥ ೧೮೪

ವ। ಅಂತುಸುಮುಖಮನಪ್ಪಕೆಯ್ದುದಿನದಿನದೊಳ್ಕುತ್ಕುಮಾರನಂ ಹಾರೈಸುತ್ತಮಿರೆಮಿರೆ।

ಚಂ। ಕಿವಿಮೃದುವಾಕ್ಯಮಂರಸನೆ ಸದ್ರಸಮುಂವದನಾಸಿಕಂಸುಗಂಧಮಂ ಮುಮಲರ್ಗಳಗನೆಯರೊಪ್ಪುವರೂಪುಗಳಂಶರೀರವ। ಪ್ಪುವ
ಘನಲೀಲೆಯುಂಬಯಸಲಿಂದ ಖಿಳೇಂದ್ರಿಯ ಮೊಲ್ದುತನ್ನೊಳು ಧ್ವನಿ
ಸುತಿರಲ್ಕುಮಾರಕ ನೊಳಾದುದುನೂತನಯುವ್ವನೋದಯಂ॥
ಅದಲ್ಲದೆಯುಂ॥

ಮ॥ ತೊಳಪೆಳರ್ಪಿನಚೋಲ್ಲೆಯಂಪಿರೆನೊಸಲ್ ಶ್ರೀಕರ್ಣಮಬ್ಜಾಂಬಕಂ। ವಿಳಸಚ್ಚಂಪಕನಾಸಿಕಂ ಪವಿರದಂಬಿಂಬಾಧರಂ ನುಣ್ಗೊರಲ್
ನಳಿತೋಳ್ಪೀವರ ಮಲ್ಪಮಧ್ಯಮುರುಸೈತಂಬಸ್ಥಳಂಬಾರಕೋಮಳಪಾದಂಮೆರೆಯಲ್ಕುಮಾರನೆಸೆದಂಸೌಂದರ್ಯ ಸ್ವಾಧಾರ್ಯದಿಂ।

ಮ। ಸ್ರ। ಘನರೂಪಿಂಸೌಮ್ಯನಾಸೌಮ್ಯನಿನಧಿಕ ತರಂರಾಜನಾಸೌಮ್ಯನಿಂರಾ। ಜನಿನಾದಂ ಕಾಮನುದ್ಯದ್ವಿಳಸಿ ತವೆನಿಪಾಸೌಮ್ಯನಿಂರಾಜನಿಂಕಾ। ಮನಿನಂಭೋಜಾಕ್ಷ ನತ್ಯೂರ್ಜಿತ ನೆನಿಸುವನಾಸೌಮ್ಯನಿಂರಾಜನಿಂಕಾ ... ಕ್ಷನಿಂ ... ಗಿಲೆಸಲೆಸದಂ

ನಾಡೆಯುಂ ರಾಜಪುತ್ರಂ॥ |೧೪೬॥

ಅರಿನೃಪತನಯುಗಿ=ಕ್ಕಿದ| ಬಿರುದಿನಹಾಹೆಗಳಪೊಡರುಝುಣಝುಣಿಸಲ್ತಿಂ|ವರವಸ್ತ್ರಭೂಷತತಿಯಿಂಪಿ|ರಿದೆಸೆದಂ ರಾಜಪುತ್ರನತಿಮುದದಿಂದಂ| |೧೪೭|

ವ॥ ಅಂತಾರೋಹಿಯೆ ಪನಪೊಳ್ತುತ್ಕುಮಾರಂಸುಖದನಿರುತ್ತಿರಲೊಂದು ದಿವಸಂಪ್ರಭಾತಸಮಯದೊಳು॥

ಕಂ॥ ತೊಳಗುವಪಳಕಿನಕುಟ್ಟಿಮ| ತಳದಿಂಶಶಿಕಾಂತಸಾಲಭಂಜಿಕಗಳನು| ಜ್ವಳಿಸಿಥಳಥಳಿಸಿಮಣಿಮಯ| ಕಳಸಂಗಳಿನೆಸೆವವರಸಭಾಮಂಟಪದೊಳ್| ೧೪೮|

ವ॥ ಸ್ರ| ಹರಿಪೀಠಾರೋಹನುದ್ಯಚ್ಛಿಕ ಚಮರರುಹಭ್ರಾಜಿತಂಪುಂತ್ರವಯೋರ್ | ತ್ಕರಯುಕ್ತಂಮಂಡಲೀಕ ಪ್ರಕರಪರಿವೃತಂಕಾಮಿನೀವೃಂದಸೇವ್ಯಂ|ವರಸಂಗೀತಾದಿವಿದ್ಯಾ ನಿಕರವಿಲಸಿತಂ ತತ್ಕವಿಭ್ರಾತರಮ್ಯಂ| ಭರದಿಂದೊಡ್ಡೋಲಗಂಗೊಟ್ಟಿಸೆದನತುಳ ಸೌಖ್ಯಾವಹಂ ಸಾರ್ವಭೌಮಂ॥ |೧೪೯॥

ಅಂತೊಡ್ಡೋಲಗಂಗೊಟ್ಟಿರ್ಪಾಗಳ್

ಕಂ॥ತನತನಗೆದುರ್ನೃಪಜರ್| ಯೆನುತಿರೆಭೂಪತಿಯಮಾತ್ಯರೊಳ್ದೀಕ್ಷಿಸಲಾ| ಘನಬಲವಂತಕುಮಾರಂ|ವಿನುತಾಸ್ಥಾಯಿಕೆಯ ನುಂದುನಲವಿಂಪೊಕ್ಕಂ॥

ವ| ಅಂತುಪೊಕ್ಕುಭೂನುತನಪ್ಪ ತಾತನಂಗಂಟರೊಳ್ಕಂಡುಭಯಭಕ್ತಿಯಿಂತತ್ಕುಮಾರನವನಿತಳ ನಿಹಿತೋತ್ತಮಾಂಗನಾಗಿಪೊಡವಡುವುದುಮೊಡನೆ|

ಚಂ| ನೆಗಳ್ದನುರಾಗದಿಂಪಶಸಿ ದೃಗ್ಜಲಬಿಂದುಗಳುಣ್ಮೆಹರ್ಷದೊಳ್ ತೆಗೆದಮರ್ದಪ್ಪಲಾಪಿತನ ತೋಳೆಡೆಯಿಂದವೆದಾಸ್ಯ ಭಾವದಿಂಜಗುಳ್ದುಪದಾಂಬುಜಾತ ಯುಗಳಕ್ಕೊಲವಿಂಪೆವಿನಪ್ರನಾಗಿಕೈ|ಮುಗಿದುಕೆಲಕ್ಕೆಸಾರ್ದನಧಿ ಕೋತ್ಸವಪೂರಕನಾಕುಮಾರಕಂ| |೧೫೦|

ವ| ಅಂತುತತ್ಕುಮಾರಕಂ ಸತ್ಪ್ರೇಮದಿಂತಾತನರ್ಧಾಸನಕ್ಕಾಗ್ರಹಿಸುತ್ತಿರಲೊಲ್ಲದೆವಾದ ಸಮೀಪದನೆಲದೊಳ್ಕುಳ್ಳಿರಲ್ಕಾಗಳ್

ಕಂ| ಎಸೆವಕುಮಾರನ [illegible] | [illegible] ನಿರೀಕ್ಷಿಸಿ

ವಿಗೆಸಂ| ತಸವಂತಾಳ್ವವನೀಪತಿ|ನೆಸುನಗುತಂಮಂತ್ರಿವರನೊಳಿಂ
ದಿಂತೆಂದಂ|| ||೧೯೧||

ಯುವರಾಜಂಗೆವಿವಾಹೋ| ತ್ಸವವಂಬಯಸುವದಿನಂಗಳಾದುವ
ನುತ್ತಂ |ದವನೀಪತಿಮಂಗಳಕಾ| ರ್ಯವನೊಲವಿಂಮಂತ್ರಿ ಯೊಳ್ಸಮಾ
ಲೋಚಿಸಿದಂ| |೧೯೨|

ವ|| ಅಂತುಸಮಾ ಲೋಚನಂಗೆಯ್ದು ರಾಜಲೋಕಮಂವಿಸರ್ಜಿಸಿ
ನಿಜಾಸನನಮಂಟಪದಿಂದೆದ್ದು ಕುಮಾರಂಬೆರಸುಭೂಪತಿಸಚಿವೇಂ
ದ್ರನಂ ಕರಂಬಿಡಿದುಪರಿಮಿತ ಪರಿಜನಂ ಬೆರಸುಮಂಗಳೋತ್ಸಾಹಮಂ
ಮನದೊಳ್ಪೊತ್ತಂ ತಃಪುರಕಾಂತೆಯುಪ್ಪಕಳಾ ವತೀದೇವಿಯಸಮೀಪ
ಕ್ಕೆಬರ್ಪಾಗಲ್ಲಿಢಾಳಿಸುವ ಚಾಮರಗ್ರಾಹಿಣಿಯರ ವೀಟಿಕೆಯಂನೀಡುವ
ತಾಂಬೂಲ ಕರಂಕವಾಹಿನಿಯರ ಭರತಪ್ರಸಂಗಮಂಮಾಳ್ಪ ಪರಿವ್ರಾ
ಜಿಕೆಯರ ಶ್ರೀಗ್ರಾಮಂಗಳಂಮುಟ್ಟಿಪಾಡುವ ನಾಯಿಕೆಯರಸಂಭ್ರಮ
ದಸಂಚಣಿಯೊಳ್ದಿಕೆದ್ದು ಪೋಗಿಕ್ಕೈಗೊಟ್ಟುತಂದುನಿಜ ವಲ್ಲಭನಂ ಪ
ರಿಯಂ ಕತಳ್ಪದೊಳ್ಕುಳ್ಳಿರಿಸಿ ಮತ್ತಮಾಪ್ರಧಾನಂ ಗುಚಿತಾಸನಮಂ
ಕೊಟ್ಟುಸಾಷ್ಟಾಂಗಪ್ರಣತನಾದನಿಜನಂದನನಂನೆಗಪಿಮೊಲೆವಾಲ್ಪೊ
ರೆಯಲ್ ಬಿಗಿಯುಪ್ಪಿಪರಮಾನಂದಸಂದೋಹಂ ಮಿಕ್ಕುತಾಂಕುಮಾ
ರರಗೆಪೆಣಿಮಯಾಸನೆ ಮನಿತ್ತುತಾನುಂಕುಳ್ಳಿರ್ಪುದುಂ|

ಕಂ|| ಅನುರಾಗದಿಕೇಳ್ಪತಿವರ| ತನಯಂಗೆವಿವಾಹಸಮಯಮಾದು
ದುಮಾಡ| ಲ್ಕನುಗೆಯ್ವು ದುಚಿತವೆಂದಾ| ಜನಪತಿನುಡಿಯಲ್ಕೆಮುದ
ಮನಾಂತಿಂತೆಂದಳ್ ||೧೯೩||

ಇದಕೆಮನದಲ್ಲಿಗುಡಿಗ| ಟ್ಟದೆನೆನ್ನಸುತಂಗೆತಕ್ಕಕನ್ನಿಕೆಯಂನೋ
ಳ್ಪುದುಬೇಗದೊಳೆಂದೆಂಬಾ| ಸುದತಿಯಮಾತಿಂಗೆನೃ ಪತಿಮುದಮ
ತಾಳ್ದಂ|| |೧೯೪|

ಚಂ|| ವರತನಯಂಗೆತತ್ಸದೃಶವೆಂಬವನಿ ಪೂರ್ಜಿತರೂಪನುಳ್ಳಬಂ
ಧುರತರವಂಶಮುಳ್ಳ ಘನಲಕ್ಷಣದುನ್ನತಿಯುಳ್ಳ ಕನ್ನೆಯಂ |ಭರದಿ
ವಾಹಮೆಸಪೆದುಮಾಳ್ಪನೆನುತ್ತತುಳಾನುರಾಗಮಂ ಧರಿಯಿಸಿಕಾರ್ಯ
ದುದ್ಯಮದಿನಿರ್ದನವಾರ ಕಳಾವಿಶಾರದಂ| ||೧೯೫||



ಕಂ|| ನಾಗವಿಭೂಷಣಕೃಪೆಯಿಂ |ರಾಗದಿಕುವರಂಗೆ ಮದುವೆಯ

ಮಾಳ್ಪೊಂದು | ದ್ಯೋಗದಿನಿರ್ದಂಸಕಲನೃಪಾಗಮು ಗುರುಶೈವಜನ ಸುಖೋದಯಚರಿತಂ|| |೧೯೬||

ವ|| ಅಂತಾಕುಮಾರನವಿವಾ ಹೋತ್ಸಾಹಕಾರ‍್ಯಮುಂಮುನದೊಳ್ಪೊತ್ತು ನಿಜಪ್ರಧಾನನಾನನಮುಂ ಸನ್ಮಾನದಿಂನೋಡಿ.

ಕಂ|| ಪೊಳೆವಿಂದುಬಿಂಬದಿಂದು| ಜ್ವಳಚಂದ್ರಿಕೆಪಸರಿಪಂತೆಕೋಮಳಮುಖಮುಂ| ಪಳದಿಂದಂತದ್ದ್ಯತಿತೊಳತೊಳಗುತ್ತಿರೆನೃಪತಿಸಚಿವನೊಡನಿಂತೆಂದಂ| ೧೯೭||

ಸನ್ನುತಲಕ್ಷಣದೆಸಕದ | ಕನ್ನಿಕೆದೊರಕುವಳದೆಲ್ಲಿಪರಿಕಿಪುದೆನೆ ಸ|ತ್ಪ್ಯೇನ್ನತೆಗಾಂಗೆಯಾಮಾತ್ಯಂ| ನೆನೆದುಮನಸ್ಸಿ ನಲ್ಲಿತಾನಿಂತೆಂದಂ||

ವರವಚನದಿನುಣ್ಮುವಸು| ತ್ತಿರನಾಮಳನದಿಯಂತೆರೆಯುವೆಯ್ವಳಗಂಬಂತ್ರಿ ರೆನಿಶದದಶನರುಚಿವಿ|ಸ್ತರಿಸಲ್ಸಚಿವಂನೃಪಾಳನೊಡನಿಂತೆಂದಂ|

ಗದ್ಯ|| ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮುತ್ಪುಲಿಗೆರೆಯಪುರಾಧಿಪಶ್ರೀಸೋಮನಾಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮು ಪ್ತತ್ರಿಷಷ್ಟಿಪುರಾತನರ ಚಾರಿತ್ರದೊಳ್ಪಗಲ್ ಚೋಳನುತ್ಪತ್ತಿ ಯೌವನೋದಯುವರ್ಣನಂ ಸಪ್ತದಶಾಶ್ವಾಸಂ||

ಸಪ್ತದಶಾಶ್ವಾಸಂ



## ಮಾನಕಂಜಿಕಕಥೆ

ತಾನೊಸೆದುಮಾನಕಂಜಂ | ಗಾನೆಂದಡೆನೆಚೆಳಪದಮನೆಂದಿತ್ತಮ
ಹಾ| ದಾನಿಕರುಣಾಂಬುನಿಧಿಪೆಹ| ಮಾನಧನೋಮೇಶನೊಲ್ದುಪಾ
ಲಕೆನೆಮ್ಮಂ|

ಮ|| ಸತತಂಚೋಳಧರಿತ್ರಿಯೊಳ್ಪೆಳೆ ದಕಾಲಿಕ್ಷೇತ್ರಸಂತಾನದು|ನ್ನ
ತಿಯಿಂಕಾತೆ ಸೆದಿರ್ಪಚೂತವನದಿಂ ಪುಂಡ್ರೇಕ್ಷುವಾಟಂಗಳಿಂ| ಭೃ
ತಪದ್ಮಾಕರಜಾಳದಿಂತೊನೆವಚಂಚಟ್ಟಿಂ ಚರೀಕಂಗಳಿಂನುತಕಂಜಾ
ರಪುರಂಮಹಾವಿಭವಮಂತಾಳ್ದಿಳ್ಗೆಯಿಂರಂಜಿಕುಂ|| ||೧||

ಚಂ| ಪಿರಿದೆಸೆವಾಪುರಕ್ಕಧಿಪನಾಗಿಮಹಾಧನದಿಂಕುಬೇರನೊಳ್
ಪಡಿಯನಿಸುತ್ತಮತ್ತಧಿಕಕೀರ್ತಿಯಗರ್ಭದಿಚೇರಪಾಂಡ್ಯರಂ ಪರಿಕೆ
ಸನೀಕ ಭಕ್ತಿಗನಲೊಲ್ದಿರಗುತ್ತಿರುತಿರ್ಪ ನಾವಗಂ|ನಿರುಪಮಮಾನ
ಕಂಜನೆನಿಪಗ್ಗದಭಕ್ತನಿಳಾತಳಾಗ್ರದೊಳ್| ||೨||

ಕಂ|| ಪೆಸರಕಕರಪಳರಭತ್ರಂಪೆಸರಾಕತಿಪೆಸರಶಿವಪುರಂಪೆಸರಕೋಳಂ
ಪೆಸರರವಟ್ಟಗಗಳ್ಮನೆ | ಗೆಸೆವುತ್ತಿರಮಾನಕಂಜ ನಿಪ್ಪಂಜಸದೊಳ್||

ನುತಮಾನಕಂಜನೆಸೆವಿನ| ವಿತರಣಮಂಕೇಳ್ದುಕಲ್ಲುಮರನಾದುವು
ಮು| ನ್ನತಮುಪ್ಪವರುಸದಿವಿಜ| ಕ್ಷಿತಿಜಂಗಳೆನಲ್ಕೆ ಪೆಂಪನಾವಂಪೊಗ
ಳ್ವಂ| ||೪||

ಜಂಗಮವೆರೆದುದನೀವಂ|ಜಂಗಮವೆ ಲಿಂಗವೆಂದುನೆರೆಭಾವಿಸುವಂ
ಜಂಗಮುದಾಳೆನಿಸುವನು| ತ್ತುಂಗಗುಣಂಮಾನಕಂಜನೆಂಬಶಿವೈಕ್ಯಂ

ಆಮಾನಕಂಜನೆಂಬಮ |ಹಾ ಮಹಿಮಂಗರಸಿಯಾಗಿಗುಣವತಿಯೆಂ
ಬಾ| ನಾಮದಸತಿಯಿರುತಿರ್ಪಳ್ |ಸೋಮನತಾಯಂತೆವಿಶದಯಶ
ದಿಂರಸೆಯೊಳ್|| |೬||

ಅಂತೆಸೆವಕಾಂತೆಯೊಂದುದಿ |ನಂತನಗರ್ಭಕರ ಲೀಲೆಯಿಲ್ಲೆಂದು
ಮಹಾ| ಚಿಂತೆಯೊಳಿರಲಿತ್ತಲುಮಾ| ಕಾಂತಾರ್ಚನೆಗೆಯ್ದುಮಾನಕಂ
ಜಂಬಂದಂ|| |೭|

ವ| ಅಂತುಬಂದುಮಾನಕಂಜಂತನ್ನ ... ಪದೊಳ್ಳಳ್ಳಿ

ರ್ದುಡುವರ್ಮ್ಮಾನತೆ ಯನೆಯ್ದಿರ್ದ ಮೋಗವಂನೋಡಿಕಾರಣವಿಲ್ಲ
ದೆಛಂತೆಯನಾಂತಿರ್ಪೆಯೆಂದು ಬೆಸಗೊಳಲ್ಕಂತಾಗಳಿಂತೆಂದಳ್‌॥

ಚಂ॥ ಒಡವಿದಕೀರ್ತಿಯುಂಟು ಮನಮುಂಟುಮಹಾಧನಮುಂಟು
ತ್ರಿವರ್ಗ್ಗೋಳೀ ಪದವಿನಿತಾದುದಕ್ಕೆಸುತರುಳ್ಳೊಡೆ ಸತ್ಫಳವಿಲ್ಲದಿರ್ದೊ
ಡಿಂ ತಿದ್ದುಬಯಲಿಂಧುಚೆಂತಿಸಿಡೆನಾನದುಕಾರಣವಿಶನ್ನೆಲ್ಲಿಬೇ। ಳ್ಪುದು
ಪರಪುತ್ರನೊಬ್ಬನನೆನಲ್ಪತಿಗಾವಿಭುವೆಂದನಳ್ತರಿಂ। ॥೯॥

ಹರನಿದಿರೊಳ್ಸರಂಕೆಲದು ಬೇಡುವವಂನೆರೆಬೂತ್ತುಶಂಭುವಂ ಭ
ಕ್ತಿಯಿಪೊಗಳ್ದುಬೇಳ್ಪವನೆ ಭಟ್ಟುಸುಮಾವರಪೂಜೆಗೆಯ್ದುಕೊರ್ತರವನೆ
ಕೂಲಿಕಾರ ನನಪೇಕ್ಷೆಯೊಳಾವನುಮೋಕ್ಷಪಾದಕಂ ಶುಹಮುವರ್ಚ್ಚ
ಸಂಪರವುಭಕ್ತನೆನಿಪ್ಪನಿಳಾತಳಾಗ್ರದೊಳ್‌। ॥೧೦॥

ಕಂ॥ ಅದುಕಾರಣಮುಭವನೊಳಾ। ನಿದರ್ಶರ್ಥಿಪುದಿಲ್ಲಿನಲ್ಕಿಸತಿಸು
ತನಂಬೇ। ಳ್ಪುದಕಡಿಕೆರಗುತ್ತಿರಸಿ। ಕ್ಕಿದನಾಗಲ್ಮಾಯೆಯುಲ್ಲಿತಚ್ಚಿವ
ಭಕ್ತಂ। ॥೧೧॥

ಸ॥ ಅಂತುತತ್ಕಾಂತೆಯೆಂದವಮಾತಂ ಕೈಕೊಂಡುಬೋಲ್ಕೈಸಿಸಂತ
ವಿಟ್ಟುಶೋರಮುಟ್ಟುಬೇಳ್ಪುಡಾದುದೆಂದು'ಮನದೊಳ್ನಾಣ್ಚುತ್ತಂಕಂಜಾ
ರಪುರಾಧಿಪತಿಯುಪ್ಪಶಿವ ಲಿಂಗದೆಡೆ ಗೇಶ್ತಂದುಕುಳ್ಳಿದಾಗವೋಕ್ತಿ
ಯಂಪಿಡಿದು ಭಯಭಕ್ತಿಯಿಂದಾಗಳ್‌॥

ಚಂ। ನಲವಿನ್ನೊಳುಬ್ಬ್ರತಷ್ಟವಿಧ ದರ್ಶನೆಗೆಯ್ದುಪಚಾರಷೋಡ
ಶಂ। ನೆಲೆಗೋಳಿಮಾಡಿಪಾಡಿನಲಿದಾಡಿ ತನೂಜರನೀವುದೆಂಬುದಂ। ಸಲಿ
ಷ್ಟದಾತ್ಮವಲ್ಲಭೆಗೆ ಪುತ್ರಿಯನೋರ್ವಳನೀವುದೆಂದು ಬೇ।ಡಲುಮು
ಗಜೇಶನಿತ್ರಿಪರ ದಿಂದೊಗೆದಳ್ವರಪುತ್ರಿಲೀಲೆಯಿಂ॥ ॥೧೨॥

ಕಂ। ಶಿವಭಕ್ತಿಯೆಶಿವಕೀರ್ತಿಯೊ। ಶಿವಶೀರ್ಷದಚಂದ್ರಕಳೆಯೊ
ತಾನೆನಲ್ಲೊಗೆದಾ। ಕುವರಿಗೆಸೋಮಪ್ರಭೆಯೆಂ।ದುವಿಳಾಸದಿಪೆಸರನಿ
ಟ್ಟನಾಶಿವಭಕ್ತಂ। ॥೧೩॥

ಆಮಾನಕಂಜನಧಿಪ। ಪ್ರೇಮದಿನಡಿಸಲ್ಕೆಯೌವನೋದಯದೊ
ಳ್‌॥ ತತ್ಸೋಮಪ್ರಭೆನಲವಿಂದಭಿ। ರಾಮತೆಯಂತಾಳುತಿರ್ಪಳದನೇ
ಪೊಗಳ್ವೆಂ॥ ॥೧೪॥

ವರಕಾಲವಣಿದಿ... ।ಧುರಗಸ್ವಪಮಕತ್ತಿಪಜನಿತಭಕ್ತಿ ಕೆಭ

ಕೃತ್ತೇ| ತ್ಕರಜಳನಿಧಿಚಂದ್ರಿಕೆಯೆನೆ| ಪಿರಿದೊಪ್ಪುವಳಲ್ಲಿಚಾರುಕನ್ನಿ
ಕೆಜಸದೊಳ್|| ||೧೫||

ನಡೆತೊಡೆನಡುಮೊಲೆಮೊಗವೆಂ| ಬೆಡೆಗಜಮುಂಕದಳಿಯುಂಮೃಗಾ
ಧೀಶ್ವರನಂ| ಗೆಳೆವಕ್ಕಿಗಳುಂಶಶಿಯುಂಕಡುಪಳಿಯಲ್ಕನ್ನೆಚೆನ್ನೆಯೆನಿಸು
ತ್ತಿರ್ಪಳ್| |೧೬||

ಮಾರನೃಪಂದಿಗ್ವಿಜಯ| ಕ್ಕೇರಿಂತಿರೆನೆಡೆಯಲೆತ್ತಿಸಿದನೀಲದಗು
ಡಾರಂತಾನೆಂಬಂತೆಕು| ಮಾರಿಯಸೋರ್ಮುಡಿಕರಂ ವಿರಾಜಿಸುತಿ
ರ್ಕುಂ|| ||೧೭||

ಅರೆಬರಬಲೆಯುಗರ್ಬಳನಿಂ| ದಿರೆಶಿರೋಜ್ವಪದಕೆಜೋಲ್ವಮಾಳೆಯ
ಕೇಶಂ| ಪರಿಕಿಪೊಡೆಪತ್ತುಮೋಳಮೆನೆ| ಸರಿಜಗದೊಳ್ಕಾಮಪಾಶಮೆನೆಕ
ಣ್ಗೆಸೆಗುಂ|| ||೧೮||

ಇರುಳುಂಪಗಲುಂಮುಡಿಯಂ|| ಪಿರಿದೋವುತ್ತಿರ್ಪನೊಲ್ದುತಪ್ಪಿತ
ನೆನಲಾ| ವರಸತಿಯುಬೆಳ್ಪಿನೊಳ್ಪಂ| ಶರಸಿರುಹಭವಂಗೆಬಣ್ಣಿಸಲ್ಕರಿದಿಳೆ
ಯೊಳ್| ೧೯||

ಗಿಳಿಮುಟ್ಟಿದಚೂತಫಳಂ| ಅಳಿಸೋಂಕದಬಿರುಮುಗುಳ್ವಿಕಂತು
ಡುಕದಮುಂ| ದಳಿರೆನೆವಿಳಸದ್ಯೌವನದೊಳಮತಿರಂಜಿಸುವುವರುಳಕ
ನ್ಯಾರತ್ನಂ| ||೨೦|

ಮಲ್ಲಿಕಾಮಾಲೆ|| ಆಕುಮಾರಿಗೆನೊಳ್ಪಡೀಯುವರಾಜನೇನಿಜಪಲ್ಲಭಂ
ಲೋಕದೊಳ್ಪೆರತಿಲ್ಲ ಮತ್ತೆವಿಚಾರಿಸಲ್ನೃಪಕೇಳ್ಗುಣಾ| ನೀಕಮಂ
ಡಿತಮಾನಕಂಜನೊರಲ್ದು ಕೊಟ್ಟಪನಾವಮಾ| ತೇಕಶೀಘ್ರದಿನೀಂವಿ
ವಾಹಮನೊಪ್ಪಿ ಮಾಳ್ಪುದುನಲ್ಮೆಯಿಂ|| ||೨೧|

ವ|| ಎಂದುತನ್ಮಂತ್ರಿ| ಶ್ವರಂಸವಿಸ್ತರಂಪೇಳಲ್ಕೇಳ್ದುದಂ ನೃಪಂ
ಪಟ್ಟಮಹಿಷೀಸಮೇತಂ ಹರ್ಷೋತ್ಸುಕಹೃದಯನಾಗಿ ಮಂಗಳಮ
ಪ್ಪಕಾರ್ಯಮಂನೋಳ್ಪತ್ತಂ ನೆನೆದುಮತ್ತಂಮಾರನವಿವಾಹಕಾರ್ಯ
ಕ್ಕೆನೀನೇಪೋಗಿಪರಮಪ್ರೀತಿಯಿಂಮಾನಕಂಠರನೊಡಂಬಡಿಸಿಬರ್ಪು
ದೆಂದು ಬೆಸಸಲ್ಕಾಮಾತಿಂಗೆಮತ್ತಮಿಂತೆಂದಂ|| |೨೨||

ಚಂ| ಮನನೊಸೆದಲ್ಲಿಗೆಯ್ದಿ ಶುಭಕಾರ್ಯಮನಿಲ್ಲಿಗೆ ಮಾಳ್ಪೆನಾದ
ಡಂ, ಘನತರವಿತ್ತದಿಂದ ಭವಭಕ್ತಿಯುತೇಜದಿನೊಪ್ಪುತಿರ್ಪನಾ ತನ

ಪೊಳಲಿಂಗೆನೀನೆನಡೆದಾ ತ್ಮಸುತಂಗೆವಿವಾಹಪೇಳ್ಗೆಯಂಪಿನಯುದಿನೊ
ಪ್ಪಿಮಾಳ್ಪೊಡೆಕುಮಾರಿಯು ನಿತ್ತಪನರ್ಥಿಯಿಂನೃಪಾ॥ ॥೬೩॥
ಕಂ॥ ಎನಲರಿನೃಪರ್ಗೆಗರ್ವಿತ, ನೆನಿಸುವೆನಲ್ಲದೆಶಿವೈಕ್ಯರೊಳಾ ಸಂತಾ।
ನೆನಿಪಿನದರಿಂದಮಾಭ ಕ್ತನಪುರಕೊಡನೆಯ್ದಿ ಮಾಳ್ಪ ನೀವುತ್ಸವಮಂ
ವ॥ ಎಂದುರಾಜೇಂದ್ರಂನುಡಿಯಲ್ಕೆಪರಮಾನಂದಮನೆಯ್ದಿ ತದ್ಗಾಂ
ಗೇಯೂಮಾತ್ಯ ನೌತ್ಸುಕ್ಯದಿಂಲೇಖ ವಾಹಕಪುರಸ್ಸರಂಕಂಜಾರಪುರ
ಕ್ಕೆಸದ್ಭಕ್ತರ್ವೆರಸುಪೋಗಿಮಾನಕಂಜ ಮಾಹೇಶ್ವರಂಗೆಭೆಟ್ಟಿಯಾಗಿ॥
ಚಂ॥ ವಿದಿತನೆಯೋಕ್ತಿ ಯಿಂಸಮುಗುಣ ಪ್ರಣಯಂಗಳನಾಡಿಭದ್ರ
ಕಾರ್ಯಮನೊಲವಿಂದೊಡಂ ಬಡಿಸಿಶೈವಶಿಖಾಮಣಿಮಾ ನಕಂಜರಿಂ
ಕುವರಿಯ ನೀವುದಂಪಡೆದುಮುದ್ವಹನಕ್ಕನು ಗಯ್ವುದೆಂದುಮುತ್ತ
ಪದಿಮುಗುಳ್ದು ಚೋಳನೃಪನಲ್ಲಿಗೆಬಂಧನವಾತ್ಯಪುಂಗವಂ॥ ೬೪।
ಅಂತುಬಂದು
ಕಂ॥ ಶಿವಭಕ್ತಾಗ್ರಣಿನಮ್ಮಯ । ಯುವರಾಜಂಗಿತ್ತನಾತ್ಮಪುತ್ರಿ
ಯನೊಲ್ದಿಂ। ದವನೀಶ್ವರಸಂಭ್ರಮದಿಂ । ವಿವಾಹಮಂಮಾಳ್ಪುದೆಂದ
ನಾಸಚಿವೇಂದ್ರಂ॥ ।೬೫।
ವ॥ ಅಂತುಸಚಿವೇಂದ್ರಂನುಡಿಯಲ್ಕಂ ತಃಪುರಕಾಂತಾಸಮೇತಂಸಂ
ತಸದಿನೊಡಂಬಟ್ಟು ಸರ್ವಸೌರಂಭದಿಂಯುವರಾಜಂ ಬೆರಸುಪರಿಜ
ನಪುರಜನದ ಸಂದಣಿಗಳಿಂಮಂಗಳಾನಕಧ್ವಾನಮೆಸೆಯಲ್ಕೆ ಪುಣ್ಯಪಾ
ಠಕಜನಂಗಳ ಕೈವಾರಂಗಳೊಳ್ಪರಿಣಯನೋತ್ಸಾಹಕ್ಕೆ ನಿಜರಾಜಧಾ
ನಿಯಂ ಪೊರಮಟ್ಟುಕಂಜಾರ ಪುರಾಭಿಮುಖವಾಗಿ॥
ಚಂ॥ ಮಿಥಿಳೆಗೆಪೆರ್ಮೆಯಿಂದಶರಥಕ್ಷಿತಿ ಪಂಕಡುಸಂಭ್ರಮಂಮಿಗ
ಲ್। ಪೃಥುಳಗುಣಾಬ್ಧಿ ರಾಮನವಿವಾಹದಪೆರ್ಚಗೆಪೋಪಮಾಳ್ಕೆಯಿಂ
ರಥಮದನಾಗಘೋಟಕ ಸುಖಾಸನಪಂಕ್ತಿಗಳೊಪ್ಪೆಭೂವರಂ ಪೃಥು
ವಿಮುದಂಬಡಲ್ಕನಡೆದನಾತ್ಮಜನುತ್ಸವ ಕಂಡುಲೀಲೆಯಿಂ॥ ।೬೬।
ಸರಭಸದಿಂದಮುತ್ಸವದಪೆರ್ಚುಗೆಯಂ ಮನದಲ್ಲಿತಾಳ್ದು ಪೇ। ಗಿರ್
ರಿಗಳತಳ್ಪದಲ್ಲಿ ಸರಸಿ ವ್ರಜದೊತ್ತು ಗಳಲ್ಲಿ ನಂದನೋ ತ್ಕರವನೆಲ್ಲ
ಗಳಲ್ಲಿ ಬಿಡುತೀಪರಿಯೊಳ್ಶಿವಭಕ್ತ ಮಾನಕಂಜರಪುರಕಿಂದ್ರವೈಭವದಿ
ಚೋಳಮಹೀಪತಿ ಬಂದನರ್ಥಿ ಯಿಂ॥ ।೬೭॥

ವ|| ಅಂತುಬಂದವಿಕ್ರಮ ಚೋಳರಾಜನಂತನ್ನಾ ನ್ನಕ್ಕಂಜಪ್ಪಾಹೇಶ್ವ
ರನತಿಪ್ರೀತಿಯಿಂಡಿಂಡಿಮಪಟಹ ಪಟುರವಂಗಳೆಸೆಯಲ್ಕ್ರಹ್ಹಾ ಸಂಭ್ರಮ
ಧಿಂದಿದಿಗ್ಗೊರ್ಣಂಡ್ಡಕಂಜಾರಪುರ ಪ್ರವೇಶಮಂಮ್ಮಾಡಿಸಿದುತ್ತವಾಗಳ್

ಕಂ|| ನವಮಣಿಮಯವೆನಿಸುವನೃಪ| ಭವನಮನಾಚೋಳಭೂಮಿ
ಪಾಲಂಗಿತ್ತು| ತ್ಸವದಿಂನಿಜ ನಿಳಯಕ್ಕಂ| ಭುವನಸ್ತುತಮಾನಕ್ಕಂಜ
ಭೂಬೀಳ್ಕೊಂಡಂ| ||೪೭||

ವ|| ಅಂತುಬೀಳ್ಕೊಂಡುತನ್ನರ ಮನೆಗೆಬಂದುಮಾನ ಕ್ಕಂಜಪ್ಪಾಹೇ
ಶ್ವರಂ ಪರ ಮಾನಂದಕಂದಳಿತ ಹೃದಯನಾಗಿನಿಜತನೂಜೆಯಪ್ಪಸೋ
ಮಪ್ರಭಾದೇವಿಯಪರಿಣಯಕ್ಕೆಂದು ಗೃಹಮುಹೂರ್ತಂಬರಿಸಿವಿವಾಹ
ಮಂಟಪಮಂಸವಿಸ್ತರ ದಿಂವಿರಚಿಸಿಮೆಂದು ಬೆಸಸಲ್ಕಾಗಳ್||

ಚಂ|| ಸಮಮಳನೀಲಕುಟ್ಟಿಮ ತಳಂಶಶಿ ಕಾಂತದಭಿತ್ತಿ ಪಂಚೆಯಿಂ
ದೊದವಿದ ಕಂಭಮು| ಜ್ವಳಿಪವಜ್ರದಪೊಂದ್ವಾಲೆಪೊನ್ನಜಂತೆರ| ಪ್ಪ
ದಪೊಸ ಲೋವೆವಿದ್ರುಮ ದಪುತ್ರಿಕೆಮುತ್ತಿನ ಮಾಲೆಪುಷ್ಯರಾಗದನ್ನ
ತೋರಣಂ ಮೆರೆಯೆಕಣ್ಗೊಳಿಸಿತ್ತು ವಿವಾಹಮಂಟಪಂ|| ||೪೮||

ಕಂ|| ಆಮಂಟಪದಗ್ರದೊಳಭಿ| ರಾಮತೆವೆತ್ತಿರ್ಪರತ್ನಕಲಶಮಹೀ
ಚೆ| ಸ್ತೋಮಮಿರುಳ್ ಬೆಳಗುವುದರಿ |ನಾಮಿತ್ರನ ಕಿರಣತತಿಗಳಂನ್ನಗು
ತಿರ್ಕುಂ! ||೪೯||

ಮತ್ತೆಮಲ್ಲಿ

ಛಂ| ಪಿರಿದೆಸೆದಿರ್ಪಸೂಸುಕದ ಮುತ್ತುಗಳಂನವಮಲ್ಲಿ ಕಾಳಿಗೆತ್ರ
ರಣಮರೀಚಿಯಂ ದೆಸೆಗೆಬೀರುವರತ್ನ ಮನಭ್ರಭೂಜದಂಕುರತ್ತ
ಗೆತ್ತು ಪಚ್ಚೆವರಲಂಮಿಡಿಗೆತ್ತುಮುದಾಳಿಕೋಕಿಳಂ ವರಶುಕಪ್ಪೋಲ್ತ
ಭ್ರಮೆಯ ನಾಂತೆರಗಿರ್ಪವುಚಂಚುಲೋನೆಯೊಳ್|| ||೫೦||

ಕಂ| ವಿನಯಮದಿಗಗನಶ್ರೀಕಾ| ಮಿನಿನಿರಿವಿಡಿದುಟ್ಟುರಂಜಿಸುವಮು
ಚಿರಗೆಂ| ದೆನೆಚೀನದಗುಡಿಪರಿಸಯ| ಸನಿಶಾಂತದ್ವಾರದಲ್ಲಿಕಣ್ಗೆಸೆದಿ
ರ್ಕುಂ! ||೫೧||

ತೊಳಗುವನೀಳದಕುಟ್ಟಿಮ | ತಳಮಂಜಳಮೆಂದುಗೆತ್ತುಭಾಪಿಸಿ
ತುದಿಗಾಲೊಳಮಂ| ಟಿತಿಳಿದುಮುಗ್ಧಾ ವಳಿಬಿಡದಡಿಯಿಟ್ಟು ನಾಣ್ಚಿ
ಲನಂನೊಳ್ಪರ್|| ||೫೨||

ಪರಿಣಯನವಮನೀಕ್ಷಿಸಲಜ| ಹರಿಹರರುಂಖಚರಗರುಡಗಂಧರ್ವಸು ರ. ವ್ರರಸೇಲ್ತಂದಿರ್ದಪರಿನೆ| ವರಭಿತ್ತಿಗಳಲ್ಲಿಚಿತ್ರಮತಿರಂಜಿಸುಗುಂ|

ಪರಿಮಳವನಂಗುಳ್ವಪೊಸಗ| ತ್ತುರಿಗಗಡಿನಚಳೆಯದಲ್ಲಮುಗಿಪರಪ ದಕ| ಪುರವಳುಕಿನಪೂವಲಿಸುರು| ಚಿರಮುಕ್ತಿಕತತಿಯಕಡವಿರಾ ಜಿಸುತಿರ್ಕುಂ| ೭೫||

ತನ್ಮಧ್ಯದೊಳ್

ಪೊಸಪಳುಕಿನಗಂಧಾಶ್ಮದಿ| ನೆಸೆವಸುವರ್ಣಾದ್ರಿಯಂತೆಪಾಸಿದಸ ತಸ| ದ್ವಸನದಿನೊಪ್ಪುವವಜ್ರದ| ಪಸೆವಣೆಮಿಂಪೊನ್ನಜಗುಲಿಕಣ್ಗೆ ಸೆದಿರ್ಕುಂ|| |೭೬|

ತೊಳಗುವವಮುತ್ತಿನಚೌಕದ| ತೆಳಗರ್ಗಳಸದರತ್ನಮಯವಿತಾನ ದ ಚಂದೋ| ಪಳಕೃತಭೃಂಗಾರದಪಸು| ವ್ವೆಳಗಿನಜಾಗರನೆಗಲ್ತಕ ರಮೆಸೆದಿರ್ಕುಂ|| |೭೭|

ಪಿರಿದರ್ಚಿಸಿದ್ದೈರಳಿಸು| ತ್ತಿರಿಸಿದಪೊಸಸಂಕುನೂಲಲೆವೋರರ ಭಾ| ಸುರಕಾತಕುಂಭಕುಂಭಂ| ಪರಿಪೂರ್ಣತೆವೆತ್ತು ಮೆರೆದುದಾವೇ ದಿಕೆಯೊಳ್| |೭೮|

ಮ| ನವಕುಂಭಂಮಣಿದರ್ಪಣಂದಧಿಲತಾಂತಾದಾರ್ಕ್ಷತಂಕುಂಕು ಮಂ| ಯವೆಗೊರೋಚನವುದ್ಧದೀಪ ನಿವಹಂದೂರ್ವಾಂಕುರಂಸ ತ್ಫಳಂ|| ಯುವತೀಜಾಳಮನೇಕ ವಸ್ತ್ರಮುರುಭಕ್ಷ್ಯಂ ಬಾಸಿಗಂಲಾಜೆ ಯೊ ಪ್ಪುವದಿವ್ಯೌಷಧಿ ವೇದಘೋಷ ಮೆಸೆದತ್ತುದ್ವಾಹಗೇಹಾಂತ ದೊಳ್ |೭೯|

ಕಂ| ಘನಘುಸೃಣಾಕ್ಷತೆಗಳಪಳು| ಕಿನಬಟ್ಟಲ್‌ಶಿಷ್ಟಚರ್ಚಿಬಿಸಸೂ ತ್ರಂನೂ| ತನಪಂಚರತ್ನರುಚಿಚಂದನವರ ಸೂಕ್ತಂಗಳಲ್ಲಿರಾಜಿಸು ತಿರ್ಕುಂ| |೮೦|

ವ| ಮತ್ತಮಾವೇದಿಕೆಯೊಳ್ ರತ್ನರಂಜಿತಕಾಂಚನ ಕಳಶಕಳಧೌ ತಪಾತ್ರಂಗಳೊಳ್ತೀವಿರ್ದಶಲಾಟು ಪರಿಪಕ್ವರಸಾಳ ಬೀಜಪೂರಜರ ಬೀರನಾರಂಗನಾಳಿ ಕೇರಕ್ರಮುಕದ್ರಾಕ್ಷಿಮೊದಲಾದ ನಾನಾಫಳ ಪ್ರಕರಂ ಗಳಿಂವಿರಾಜಿಸುವುದಂತುಮಲ್ಲದೆಯುಂ

ಚಂ| ತೊಳಗುವಮುತ್ತಿನೋಲೆ ಗಳದೀಧಿತಿ ನೂತನರತ್ನಹಾರದು

ಜ್ವಾಳತೆಗರುತ್ಮನುದ್ಗರದ ಪಚ್ಚೆಯ ಸತ್ವದ ಕಾಂಶುಕಕೊಡೆಮೂವೆಳಗಿ
ನೋಳಿಂದ್ರಚಾಪಲತೆ ಕಾಂತೆಯು ರಾದರೆನಲ್ಕೆ ದೀಪಿಕಾ ಕುಳವಿಡಿದಿ
ರ್ಪಪೊಂಬರಿಯಣಂಗಳನಾಂತೆಸೆದರ್ಲತಾಂಗಿಯರ್| |೪೧|

ವುತ್ತಂ|

ಸುತಕನಕಾದ್ರಿಯಂತೆವಿಬುಧಾಶ್ರಯ ಮಂಬರದಂತೆಮಂಗಳಾ
ನ್ವಿತ ಮಮೃತಾಂಶುವಿಂದ್ರಸಭೆಯಂತೆಗುರು ಪ್ರಕಟೀಕೃತಂಬಲಿಕ್ಷಿ
ತಿಪತಿವಾಸದಂತೆ ಕವಿಸಂಯುತಮಬ್ಜಜನಂತೆಹಂಸಶೋಭಿತವಿಭದಂ
ತೆಪುಷ್ಕರವಿರಾಜಿತ ಮಾಯ್ತುವಿವಾಹಮಂಟಪಂ|| |೪೨|

ವ|| ಮತ್ತಮನೇಕಮಂಗಳದ್ರವ್ಯವಿರಾಜ ಮಾನೋತ್ಸಾಹೋದ್ರೇ
ಕಚಿತ್ರಮಪ್ಪ ಪರಿಜನರಭದ್ರ ಘೋಷದಿಂವಿವಾಹಮಂಟಪಂ ಪಕ
ಮಸುಖದಧರೆಯೆನಿಸುತಿರ್ಪ ನ್ನೆಗಮಿತ್ತಲನಂ ತೌಷಧಿಸ ನಾಥನೀ
ಘೋರ್ ದಕಂಗಳಿಂಮಹೋತ್ಸಾಹದುಂಡು ಭಿಮುರಜಡಿಂಡಿಮಪಟ
ಹಶಂಖದ ಪಟುರವಂಗಳ್ನೆಗಳಲ್ ಮಜ್ಜನಂಬೊಕ್ಕನೈಪಥ್ಯ ನಿಕೇತ
ನಕ್ಕೆಬಂದು ಕೈಗೈಯಲೊಡಂ||

ಕಂ|| ಸುರುಚಿರಮಪ್ಪುದಯಕ್ಷಿತಿ| ಧರದಗ್ರದೊಳೆಸೆವತರುಣರವಿಬಿ
ಬದಪ್ಪೋಲ್| ಧರಣೀನಾಥಕುಮಾರನ| ಶಿರದೊಳ್ಮಾಣಿಕದಶೇಖರ
ಸೊಗಯಿಸುಗುಂ|| ||೪೪||

ವರಮುಖಕಮಳಕ್ಕೆರಗಿದ| ಸುರುಚಿರಮಧುಕರಕಿಶೋರಯುಗ್ಮ
ಮದೆಂಬಂ| ತಿರೆಕರ್ಣಂಗಳೊಳೆಸೆ ದುವ್ರಹರಿನೀಲ ಮಣಿಪ್ರಯುಕ್ತ
ಕುಂಡಲಯುಗಳಂ|| |೪೫|

ಲಲಿತಾನನಹಿಮಕರಮಂ| ಡಲಮಂಬಿಡದಿರ್ಪತಾರಕೆಗಳೆಂಬಂತು
ಜ್ವಳಿಸೆಕುಮಾರನಗಳದೊಳ್ |ತೊಳತೊಳಗುತ್ತೆಸೆದುದಮಳಮುಕ್ತಾ
ಕಹಾರಂ|| ||೪೬||

ವಜ್ರಿಯಹಸ್ತದೊಳೊಂದೇ|ವಜ್ರಂ ಪರಿಕಿಪೊಡನೇಕವಿವೆತಮ್ಮೊಳನು
ತ್ತುಜ್ಜೃಂಭಿಸಿನಗುತೆಸೆದುವುವಜ್ರದಕಟಕಂಗಳಾಕುಮಾರನಗಳದೊಳ್

ಪರೆದಿರ್ಪನವಗ್ರಹಮಂ| ತರಪೊಳ್ತಲೆದಿಳೆಗೆ ತಂದಬಲ್ಪಂತೋರ್ಪ
ತಿರಲಾತನಂಗುಲಿಗಳೊಳ್| ಪ್ಪಿಪ...ಯುವರತ್ನಮುದ್ರಿಕಾಂಗುರಂಸೊಗಯಿಸು
ಗುಂ| ||೪೮||

ಕರೆವೆರಸಿಮೆರೆವಚೇನಾಂ| ಬರದುಡೆಯುಂಜ್ಯೋತ್ಸ್ನೆಬಳಸಿವಿಭ್ರಾಜಿಪನಿರ್ಜರಭೂಜಂತಾನೆಂದೆನೆ | ವರಧರಣೀಶ್ವರಕುಮಾರನೊಪ್ಪಿದನಾಗಳ್|

ಚಂ|| ಮುಳಿಯುರುಹಂಮದಾಳಿಮಧುಮಲ್ಲಿಗೆಮಾವುಮದೋದ್ಧಕೋಕಿಳಂ ಮಲಯಸಮೀರಣಂ ಮಹಿತಪುಷ್ಪಶರಂ ಮಿಳಿರ್ವಿಕ್ಷುಕಾರ್ಮುಕಂ ಗಳುಮಿನಿತೇಕಮೂರುಜಗಮುಂ ಮಿಗೆಮೋಹಿಸೆನಲ್ಕೆಯಿಂಮನಂ ಗೊಳಪುದಿದೊಂದೆ ಸಾಲದೆಮಹೀಪಕೃತಪ್ರಸಾಧನಂ|| ||೪೯||

ವ|| ಅಂತಾಪ್ರಸ್ತಾವದೊಳ್ತತ್ಪುರಕಾಂತಾಸಂತತಿ ಸಂತೋಷದಿಂ ಸೋಮಪ್ರಭಾದೇವಿಯುರ ಪಸದನಕರಣೋದ್ಯತೆಯುಮಾಗಿಕಂದರ್ಪರಾಜನಗುಡಿಯುಂ ತೋರ್ಪಂತೆ ನವ್ಯಚೀನಾಂಬರ ಮಂನಿರಿವಿಡಿದುಡಿಸಿಯುಂ ಪ್ರಣಯಕಲಹದೊಳ್ಚರಣಘಾತದಿಂ ವಲ್ಲಭನಹೃದಯವನುರಾಗಂಬಡೆಯಲ್ವೇಳ್ಕುಂದುಜತುರಸಮಂಪದತಳದೊಳ್ಪೂಸಿಯುಂ ಕೋಮಲತನುಲತೆ ಗಾಲವಾಲಮಂಸಮೆದಂತೆನೂಪುರಂಗಳಂಚರಣದೊಳಳವಡಿಸಿಯುಂ ಅತಿಶಿಥಿಲಮಧ್ಯಮೆಂದು ರೋಮರಾಜಿಯನಡರ್ಪಂ ಕೊಟ್ಟುಬಲ್ಗಟ್ಟನಿಕ್ಕಿ ದರೆಂಬಂತೆಮಣಿಮೇಖಳೆಯುಂಕಟಿತಳದೊಳ್ಸಾರ್ಚಿಯುಂ ಮಿಂಚಿನಗೊಂಚಲುಜ್ವಳತೆಯುಂ ಜರೆವಚಂಚಲಕಟಾಕ್ಷಂಗಳಚಂಚನ್ಮರೀಚಿಮಾಲೆ ಗಳ್ನೀಳ್ದು ಭುಜಮೂಲದೊಳ್ನೆಲೆಗೊಂಡಿರ್ಪಂತೆಮಿಸುಪ ವಜ್ರಮಯಕೇಯೂರಮಂ ಬಾಹುಯುಗಳದೊಳ್ನಿರವಿಸಿಯುಂಜಲಕ್ರೀಡೆಯನಾಡಿಪೊರಮಟ್ಟು ಬಂದಮಕರಧ್ವಜನಶುಂಡಾಲ ದಪುಷ್ಕರಮಂಸುತ್ತಿನಿಂದಮೃಣಾಳದಂತಿ ರ್ಪವೈಡೂರ್ಯಮಣಿ ಕಂಕಣಂಗಳಂ ಕರಂಗಳೊಳ್ಮೇಳೈಸಿಯುಂ ಪೂವಿಲ್ಲನಸರಳಶೃಂಗಾರ ದಣಸುಗಳೆಂಬಂತೆಸೆವ ಕೇವಣದುಂಗುರಂಗಳನಂಗುಳಿಯೊಳ್ಸಂಗೊಳಿಸಿಯುಂ ದರ್ಪಕನಮಣಿವರೂಥದ ಚಕ್ರಯುಗದಂತೆರಂಜಿಸುವಮಾಣಿಕ್ಯಮಯಕರ್ಣ ಪತ್ರಂಗಳಂಪಾಲೆ ಯೊಳ್ತೀವಿಯುಂ ಪರಿಪೂರ್ಣ ಚಂದ್ರಮಂಡಲ ದೊಳ್ಶುಕ್ರನಂಸೇರಿಸಿದಂತೆ ಲಲಿತಾನನಬಿಂಬದೊಳ್ ಪೊಸಮುತ್ತಿನಮೂಕುತಿಯನಿಕ್ಕಿಯುಂ ರತಿಕಾಮರಕರವಾಳ್ಗಳಂ ನೀಲದಸಾಣೆಯೊಳ್ನುಣ್ಪುಗೆಯ್ದು ಧಾರೆಯುಂತೆಗೆದರೆಂಬಂತೆಪೊಳೆವ [illegible] ಮಿಸುಪಿ

ಕ್ಷ್ಮಾಂಚಾಪಮಂಗೊಳಿಗೆತ್ತೆನೋಳ್ಪಂತೆ ಕುಡಿವುರ್ಬಂ ಸಮರಿನಿಡಿವುರ್ಬಂ ಮಾಡಿಯುಂ ಲಾವಣ್ಯಶ್ರೀಫಣೆಗಣ್ಣಂತಳೆದ ಳೆಂಬಂತೆ ಕಸ್ತೂರಿಯ ಬೊಟ್ಟಂ ನಿಟಲತಟದೊಳಲಂಕರಿಸಿಯುಂ ಮುಖಕಮಲಸೌರಭಕ್ಕೆರಗಿ ಸುತ್ತಿರ್ಪ ಮರಿದುಂಬಿಗಳ ಮಾಲೆಯೆಂಬಂತೆ ಮೆರೆವ ನಿರಿಗುರುಳ್ಗಳಂ ಸೇರ್ಪಡಿಸಿಸಿಕ್ಕಿ ಚೊಲ್ಲೆಯುಮನಿಕ್ಕಿಯುಂ ಕಾಮದೇವನ ನೀಲದ ಗೂಡಾರಕ್ಕೆ ಪೂಜೆಗೆಯ್ವಂತೆ ಸೋರ್ಮುಡಿಯೊಳ್ ಕಂಪಿನ ಪೂಮಾಲೆಯಂ ತೊಡರ್ಚೆಯುಮನಂತರಂ||

ಚಂ|| ಚರಣದಿ ನೂಪುರಂ ಘನನಿತಂಬದಿ ಮೇಖಳೆ ಚಾರುಹಸ್ತದಿಂ ಸು
ರುಚಿರಕಂಕಣಂಗಳೆ ವಿಸಪ್ಪದಕಂಶ್ರುತಿಯಿಂದ ವೋಲೆಗಳ್ ಕರಮೆಸೆ
ವುತ್ತಮಿರ್ಪುದಿದು ಚಿತ್ರತರಂ ತೊಡವಿಂಗೆ ತತ್ತನೂ| ದರಿ ತೊಡವಾಗಿ
ತೋರ್ಪಳಿನಲೇ ಪೊಗಳ್ವೆಂ ಕಮನೀಯವೃತ್ತಿಯಂ| ೫೧|

ಮನಸಿಜಮೋಹನಾಸ್ತ್ರಮದು ಕೋಮಳೆಯಾಕೃತಿವೆತ್ತು ದೋಪಸಂ
ತನಜಯಲಕ್ಷ್ಮಿಯೋ ಕುಮುದಮಿತ್ರನ ಸತ್ಕಳೆ ಕಾಂತೆಯಾದುದೋ ಮ
ನಲತಿರಮ್ಯವೃತ್ತಿ ಘನವೈಭವಮೊಪ್ಪುವಜಾಣ್ಮೆಯೆಂಬಿವುಂ ತನಗೆಸೆ
ಯಲ್ಕೆ ಕನ್ನೆಗಖಿಯ ಪೋಗಳಲ್ಪಿರಿದೊಪ್ಪಿ ತೋರಿದಳ್| ||೫೨||

ಮುಡಿನವಿಲಂ ಕುರುಳಳಿಯಂ ನುಡಿಗಿಳಿಯಂ ತುಂಗನಾಸಿಕಮುಪ
ತಿಲಮಂ|| ನಡೆಪೆಣ್ಣಂಚೆಯುನೇಳಿಸೆ ಕಡುಚೆಲ್ವಿಂ ಕನ್ನೆ ಜಸವನಾಂತೆಸೆ
ದಿರ್ಪಳ್| |೫೩|

ವ|| ಅಂತೆಸೆವ ತತ್ಕನ್ನೆಯಂ ಕೈಗೆಯ್ದಿರಿಸಿ ತಂದು ದ್ವಾಹಗೇಹದೊಳ್
ವೃದೂಚಿತಾಚಾರದಿಂದಿರಿಸಲಾ ಸಮಯದೊಳ್ ||

ಮ|| ಶ್ರುತಿರಾಮಂ ಶುಭಗೀತನಾದ ಮಬಲಾಸಂದೋಹನಿರ್ಘೋ
ಷಮುನ್ನತಿಯಿಂ ಶಂಕುಶಲಾಕೆಯಿಂ ಘಳಿಗೆವಟ್ಟಲ್ಪಾತಕವಾತ್ರ ತದಾಬ
ತವೇಯೆಂಬನೆಗಳ್ತೆ ಯೊಪ್ಪುತಿರೆ ಲಗ್ನಂ ಸಾರೆ ಕನ್ಯಾವರ ರ್ಸತ್ರಿಮಿಕ್ಕೆ
ಲ್ತರ ವೇಳ್ಕೆನುತ್ತಮುಸಿರ್ದರ್ ಜ್ಯೋತಿಷ್ಕರುತ್ಸಾಹದಿಂ| ||೫೪||

ಕಂ| ಅತಿವೇಗದಿ ವರನಿರ್ಪೆಡೆ|ಗತುಳೋತ್ಸವದಿಂದೆ ವಿಪ್ರಜನಸಹಿತಂ
ಸ| ನ್ಮತಿಮಿಗೆ ತದ್ಧಾತ್ರೀಶನ। ಹಿತನೇಳ್ತಂದಂ ಪುರೋಹಿತಂ ಸಂಭ್ರಮ
ದೊಳ್| ೫೫

ವ|| ಅಂತೆಯ್ತಂದು ಪುರೋಹಿತಂ ... ಸ್ವಸ್ತಿ ... ತನಾಗಿ ಮಾತು

ಳಿಂಗಫಳವನಿತ್ತು ವಿವಾಹಲಗ್ನಂಸಾರ್ತಂದುದೆಂದು ಬಿನ್ನೈಸಂಗೆಯ್ಯ ಲ್ ಪಗಲ್ಕ್ಕೇಳನತಿಸಂಭ್ರಮದಿಂ ಪರಿಣಯನಮಂದಿರಾಭಿಮುಖನಾಗಿಘೋರವಟ್ಟ್ಯಬರ್ಪರ್ಕಿಣಿತಮಣಿ ನೂಪುರತ್ರಿಜಗ ದಂತದಿಗಂತವಮುಂ ಜನಿತಕ್ರಮಜಲಧೌತಲಲಿತಾಂಗಾಭರಾವಚಿತ್ರ ಚೀನಾಂಬರವಮುಂ ಘಣಘಣಿತಸ್ವನೋಲ್ಲೇತಹಿಮಘಂಟಿಕಾಂಕಿತಮಣಿಕಾಂಚೀದಾಮೋದಂಚಿತಕಟಿತಟವುಂ ಝಣಝಣತ್ಕಾರರವೋಲ್ಲಸಿತಮಣಿಕಂಕಣಾಂಕಿತಕೋಮಳಕರಪಲ್ಲವಮುಂಸುರುಚಿರಮೌಕ್ತಿಕಹಾರಾಂದೋಳಮಕರಪತ್ರಾಂಕಿತ ಪೀನಪಯೋಧರಮುಂ ಪ್ರಚಲಿತ ಮಣಿಮಯ ಮಯೂಖಾಂಕಿತಕುಂಡಲ ಮಂಡಿತಗಂಡ ಮಂಡಲಮುಂಝೇಂಕಾರಮಧುಕರ ಪ್ರಕರಶೋಭಿತ ಪುಷ್ಪ ಮಾಲಾವಿಲಾಸಿತ ಚಿಕುರನಿಕರಮುಂ ವಿಲೇಪಿತಕುಂಕುಮ ಪಂಕಪುಂಜ ಪಿಂಜರಿತಸರ್ವಾಂಗಮುಂ ಸಕಲಜನನಿ ಲೋಚನಕ್ಕಾನಂದ ಮುಕುಡಲ್ವೇಣು ವೀಣಾಮುರಜಝಕ್ಕಾರವದೊಳ್ ತಾಳಾನುಗತಮಪ್ಪ ಸಂಗೀತವ ನೊಡರಿಪಂತೆಪುರವಿಲಾಸಿನೀ ಜನಮುಂ ಹಾಸ್ಯರಸಾದಿತವಾಮನಕುಬ್ಜಖಂಜಗಡುಳಮೂಕಬಧಿರಕಿರಾತ ಸಮುದಯುಮುಂ ಚಂಚತ್ಕಾಂಚನದಂಡಾಂಕಿತಹಸ್ತಶೋಭಿತ ಜರತ್ಕಂಚುಕಿಸಂಚಯಮಾಕ್ಷಮಟುರಾವಮುಂ ಭೇರೀಮೃದಂಗನಿಸ್ಸಾಳ ಶಂಖಕಹಳಾಡಿಂಡಿಮ ಪಟಹಪಟುರವಂ ಗುಡುವರಾಜಪರಿಜನಮುಂಮಾಂಗಲ್ಯಸೌರಂಭ ಮಂತಾಳ್ದು ಭೋರ್ಗರೆದು ಪೆರ್ಚುತ್ತೊಡನೆಬರೆ

ಮ॥ ಸ್ರ॥ ಭರದಿಂದೆಯ್ತರ್ಪನಾನಾಪುರಜನರ ಧಿಕೋತ್ಸಾಹನಿಘೋಷಮಾಶಾಂತರಮಂತೀವಲ್ಕೆ ದಿವ್ಯಾಂಬರ ನವಮಣಿಭೂಷಾಳಿಯಿಂ ದೊಪ್ಪುತಂಬಂ।ಧುರಮಪ್ಪುದ್ವಾಹಗೇಹಕ್ಕತುಳ ರಭಸ ದಿಂಬಂದನಾನಂದಕಾರಂ। ಪರಕಾಂತಾಚಿತ್ತಚೋರಂ ಸಕಲವಿನುತಶೃಂಗಾರಸಾರಂಕುಮಾರಂ॥ ॥೩೫॥

ಕಂ॥ ಬಂದಕುಮಾರಂಗುತ್ಸವ।ದಿಂದಂಮಧುಪರ್ಕಮಂನಿಪರ್ತಿಸಿಮಾವಂ।ಹೆಂದವಮೆಟ್ಟಕ್ಕಿಗಳೊಳ್ ಸಿಂದಿರಿಸಿದುಕೂಲ ಕಾಂಡಪಟಮಂಪಿಡಿದಂ॥ ॥೩೬॥

ಎಸೆವಾಧರ್ಮಜನದಕ್ಷಿಗಳೆಸು ಗಳ್ಕೃತ್ರಿಮಶಬ್ದಬರಿಜ್ಜಬರಿಲಸಿರೆಸಂಭಾ

ಎಸಿಕೊಡೆಬೆಳಗುತಿರ್ಪೊರ್ಗಂ| ಬೆಸಕಂಜವನಿಕೆಯಿನಲ್ತೆ ಪುಟ್ಟತ್ತಾಗಳ್
ಜ್ಞಂ| ಮಿಳಿತಬುಧಾಳಿಭದ್ರಸುಮುಹೂರ್ತ ಮದಾಯ್ತೆನಲೋಜ್ಜಿ
ಕಾಂಡಮುಂ|ನಲಿದಿದಿರಾಂತುನಿಂದುರತಿಮನ್ಮಥರೊಬ್ಬರನೊಬ್ಬರಕ್ಷಿ
ಯಿಂದಲರಸರಳ್ಗಳಿಂದ ಮಿಸೆಪಾಡು ವರೆಂಬವೊಲಾವಧೂವರ ರ್ಗ|ಲಿ
ನೊಳೀಕ್ಷಿಪಕ್ಷಿಗಳ ದೀಧಿತಿಪರ್ಬಿತುತದ್ಗೃಹಾಂತದೊಳ್ ||೫೧||

ವ|| ಅಲ್ಲಿಂಬಳಿಯಂ||

ಕಂ|| ಸೋಮಪ್ರಭೆಯುಂ ಮಹಿಪೋ| ದ್ದಾಮರ್ಪಗಲ್ಕೊಟ್ಟ ಳವೆಸರಕ್ಕು
ವರಂಗಿತ್ತ| ತಾ ಮಾನಕಂಜನಧಿಕ | ಪ್ರೇಮದಿಪೊಂಗಳಸವೆತ್ತಿಕ್ಕ
ನೀರೆರೆದಂ|| ||೫೨||

ಆಸಮಯದೊಳ್||

ಮೊಳಗುವಮಂಗಳದುಂದುಭಿ| ಗಳಬಹುಳನಿನಾದವೇಳ್ಗೆ ಪೂರಿಪ
ಶಂಖಂ| ಗಳಘೋಷಧೋಷದಪೆರ್ಚುಗೆ | ಬಳೆದುರೆತೀವಿತ್ತು ರೋದಸೀ
ಮಂಡಳಮಂ ||೫೩||

ಅನಂತರಂ||

ವರವೇದಧ್ವನಿಶುಭಗೀ| ತರವಂನೆಗಳ್ವರಂಗೆತತ್ಕನ್ನಿಕೆನಿ| ಜಕ
ತರುಶುರಲತೆಯುಂ 'ಪಿಡಿದಿರವಂಪೋಲ್ತೆಸೆವುದಾಯ್ತುಪಾಣಿಗ್ರಹಣಂ|

ಆಸಮಯದೊಳ್|

ಒದವಿದಕರದಂಬುದಮಾ| ರ್ಗದೊಳಿಸಂಚರಿಪಖಚರದಂಪತಿಗ
ಳವೋಲ್| ಮುದದಿಂನಡೆತಂದರ್ಪಾ| ಸಿದವಣಿಬದವೇಲೆಜಗಲಿಗಾ
ದಂಪತಿಗಳ್| ||೫೫||

ಸುಲಲಿತಗತಿಯಿಂಬಂದಾ| ಗಳೆವರವೇದಿಕೆಯನಡರ್ದುತದ್ದಂಪತಿ
ಗಳ್| ತೊಳಪದಣಿಂಬಕಪಾಸಿದ| ಪಳುಕಿನಪಸೆವಣೆಯೊಳಿರ್ಬರು
ಕುಳ್ಳಿರ್ದರ್|| ೫೬

ಅಂತಾಗಳ್|

ಶ್ರುತಿಮಂತ್ರೋಕ್ತದಿನಾದಂ| ಪತಿಗಳ್ನಲವಿಂಪುರೋಹಿತಂಪೇಳಲ್ಕಾ
ದತಿಶಯದಿಂಬಲವಂಬಾ | ಹುತವಹನಂಮಿರುಪಲಾಜೆಯಿಂದರ್ಚಿಸಿದ
ರ್| ||೫೭||

ಅನಂತರಂ

ಜಲಜಜಮುಖ್ಯಕಾಂತಾ! ವಳಿಗೆರಗುಪರೆಂದುತೋರ್ಪನ್ನವೋಲ್
ಸುನಗುತೋ। ಪಳಮಿಸುಪುಂಗು ಟವುಂಪತಿ। ತಳೆದೊಲವಿಂಕಪ್ತಪ
ದಿಗಳಂಮೆಟ್ಟಿಸಿದಂ। ||೬೫||

ವ|| ಅನಂತರವಿರ್ಬರುಂ ಪೊಂದು ಪಸೆಯೊಳ್ಕುಳ್ಳಿರ್ದುದುಂ।

ಕಂ। ಹೋಮಾನಳನಿಂಜನಿಯಿಪ।ಧೂಮಕ್ಕಿರೆಮುಗಿದಳಕ್ಷಿಗಳನೆಂ
ಬನುವಿಂ। ಸೋಮಪ್ರಭೆತಚ್ಚೋಳನ। ಕೋಮಳಮೂರ್ತಿಯನೆ
ನೋಡಿಪರುಪಿತೆಯಾದಳ್ |೬೬|

ಅಂತುಪರಸ್ಪರಾವಲೋಕನ! ಸುಖಮನನುಭವಿಸಿಬಳಯಂ।

ಕಂ। ಪದೆದಸುಚೇತನದಿಂಸಂ। ಪದದಿಂಮುತ್ತೈದೆತನದಿನಿರ್ಪುದೆ
ಸುತ್ತಂ। ಮುದವರ್ಕೆಳನೊಲವಿಂದಂ। ಸುದತಿಯರುರೆಪರಸಿಸೇಸೆಯಿ
ಕ್ಕಿದರಾಗಳ್|| ೬೭

ಮ। ರತಿಕಾಮರ್ವರಭಾರತೀ ಕಮಳಜರ್ಲಕ್ಷ್ಮೀಸರೋಜಾಂಬಕ
ರ್ನುತಗೌರೀಪರಮೇಶ ರಿರ್ಪತೆರದಿಂಸೋಮಪ್ರಭಾಕಾಮಿನೀ।ಯು
ತತಚ್ಚೋಳನಿರಲ್ಕೆ ನೋಡಿಪರಮಾನಂದಂಗಳಂತಾಳ್ದಸಂ।ನುತರೂ
ಪಂಮಿಗೆಬಣ್ಣಿಸಿತ್ತು ಜನವುಂದುದ್ವಾಹಗೇಹಾಂತದೊಳ್। |೬೮|

ಆಸಮಯದೊಳ್।

ಚಂ। ಜನನುತಮಂಡಳೀಕವರ ಮಿತ್ರಪುರೋಹಿತವರ್ಗದಂಗನಾ।
ಜನಕೆತದೀಯಪುತ್ರಿಯ ವಿವಾಹದಮಂಗಳದುತ್ಸವಕ್ಕೆ ಕಾಂಚನವು
ಯದಂಜನಾವಳಿ ಬೊಳೊಪ್ಪುವರನ್ನದಬಾಯಿ ನಂಗಳಂ ಮನವೊಸೆದಿ
ತ್ತುತದ್ವಿಭುವಿನಂಗೆ ನೆಯಿರ್ದಳುದಾತ್ತವೃತ್ತಿಯೊಳ್। ||೬೯||

ಅಲ್ಲಿಂಬಳಿಯುಂ

ಚಂ। ಸುರತರುಕಾಮಧೇನುಪರುಸಂನಿಜಮಂದಿರದೊಳ್ನೆಗಳ್ತೆವೆತ್ತಿ
ರೆಕತಮನ್ಯಲೋಭಿಕಡೆಯಿಲ್ಲದವಸ್ತುಗಳೀಕನಪ್ಪಕಿಂ ನರಪತಿದೀನನೆಂ
ದಿಳಿಪುದುದ್ಯಗುಣಾಬ್ಧಿ ಶಶಾಧಿ ನಾಥನೆಂದೊರೆದರಚಿತ್ತಮುಂ ತಣಿಪಿ
ದಂಬಹುವಿತ್ತಮನಿತ್ತುಧಾತ್ರಿಯೊಳ್। ||೭೦||

ಅದಂಕಂಡು।

ಕಂ। ಹರಭಕ್ತಮಾನಕಂಜ। ಧರ್ರಣಿಪನಂಕಂಡುನಗುತೆಬಹುಳಧ
ಧನಮಂ।ಹರ[illegible]ಲೆದೆದ[illegible]।ತ್ತುಕುತರಭಾವದಿಂದವಿರ್ಪ

ಪಸರಭೆೊಳ್!

ಚಂ॥ ತೊಳಗುವಪಾಲ್ಗಡಲ್ಗುಂ ನಿಜನಾಕೃತಿವೆತ್ತುದೊಶ್ರೋರ್ಣಚಂ
ದ್ರಮಂ। ಪಲಮುದುವರ್ಣಿಯಾದುದೊಪಿ ಪಾಚಳಕಾಂತಿತಪಸ್ವಿಯಾ
ದುದೋ। ತಿಳಿವೊಡೆತಾನೆನಲ್ಧೃತವಿಭೂತಿಯೊಳ್ವ ಜಟಾಳಿಗಳ್ಗ
ಮಂ। ಪುಲುಪಿರಿದೊಪ್ಪೆಕಾಮರಿಪು ತಾಪಸವೇಷದಿಬಂದನರ್ಥಿಯಿಂ॥

ಕಂ॥ ಹಿಡಿದಾಪುವಚಿತ್ರಪಟಂ। ಸುಲಲಿತರವವಿೂವೃತಿಪಸಕಿಂಕಿಣಿಗ
ಳ್ಕೊ। ಮಳಕನಕದಂಡವೊಪ್ಪಲ್ತೊಳತೊಳಗುತ್ತಿರ್ದುದಮಳವೃಷ
ಭಪತಾಕಂ॥ ॥೭೫॥

ಪುಲಿದೊವಲಚೆಲ್ಲಣಂಮಂ। ಗಲಮುಯರುದ್ರಾಕ್ಷಭಸಿತಮೊಪ್ಪುತ್ತಿ
ರಲಾ। ಬಲವಂತಕಿಂಕರಂಕರ। ಕಳಿತವೃಷಧ್ವಜದಿಮುನಿಯಪ್ಪೋ
ಯೊಳ್ಬರೆದಂ॥ ॥೭೬॥

ವ। ಅಂತುವೃಷಭಧ್ವಜದ ಪಂಕದೆಡೆಗೆಯ್ತಂದುಕುಹಕತಾಪಸವೇಷ
ದೀಶನಂಕಂಡುಭಯಭಕ್ತಿಯಿಂದಿದಿರೆದ್ದು।

ಮ. ಸ್ರ. ಪರಮಾನಂದಾಶ್ರುಜಾಳಂ ಪುಳಕೆಸಮುದಯಸ್ತಂಭ
ಭಾವಂ ವಿವರ್ಣಂ ಸ್ವರಭಂಗಂಕಂಪನಂಸಂಜನಿತಘನತರಸ್ವೇದವಾ
ರಿಪ್ರವಾಹಂ ನಿರುತಂಮೆಯ್ದೋರಲಾಶಾಶ್ವತ ಪದದೊಲವಿಂತಾಪಸಾ
ಕಾರವೆತ್ತೀ। ಶ್ವರಪಾದಾಂಭೋಜದೊಳ್ಬೆಗೆಡೆದು ಮರೆದಿರುತಿರ್ದ
ನಾವಾನಕಂಜಂ। ॥೭೭॥

ಅಂತುಪದಕ್ಕೆರಗಿರ್ದಭಕ್ತನಂನೋಡಿ॥

ಕಂ॥ ಘನಕೃಪೆಯಿಂಶಿವನೇಳೇ। ಳೆನುತೆತ್ತಲ್ಕೆದ್ದುಭಕ್ತನಾಗಳ್ಕೈ
ಗೊಟ್ಟನುರಾಗದಿನಾಮುನಿರೂಪಿನಶಿವನಂತಂದುರತ್ನಪೀಠಮನಿತ್ತಂ
ಕೃತಕೃತ್ಯನಾದೆನಾನೆನು। ತತಿಭಕ್ತಿಯೊಳರ್ಘ್ಯಕೊಂರ್ಘ್ಯನಲಿಪಾ
ದಾತ್ತಂ। ಯತಿಪತಿಯಂಘ್ರಿಗಳಂತೊಳೆ ದತುಳೋದಕವನ್ನೆತಾಳ್ದನಾ
ಶಿವಭಕ್ತಂ। ॥೭೮॥

ಚರಣೋದಕಮಂಶಿರದೊ। ಳ್ಧರಿಯಿಸಿಸ್ಸತಿತಂದರನ್ನದಾರತಿಗಳ
ನಾ। ದರವಿಂದೆತ್ತಿಮಹಾಮುನಿ। ವರನಂಮುನ್ನಿಸಿಶಿಷ್ಯೈಕ್ಯನಂದಿಂತೆಂದಂ
ಇಂದೆನ್ನಯಮೇಲಣಕೃಪೆ। ಯಿಂದಿಲ್ಲಿಗೆಬಂದುದಾವುದಿಷ್ಟಮಿದಂ
ಸಾನಂದದಿಬೇಳ್ಪುದುಮುನಿಪತಿ। ಯೆಂದಾಶಿವಭಕ್ತನೋತುನುಡಿಯು
ಲ್ಕಾಗಳ್॥ ॥೭೯॥

ಪರಹೃದಯುಸ್ಥಿತನಿರ್ಮಳ| ಕರುಣಾಮೃತರಸದಕೋಡಿಮುಖದಿಂ ಪರಿವಂತಿರೆಮಿಸುಪದಶನಕಾಂತಿ| ಸ್ಫುರಿಸೆ ಭಕ್ತಂಗೆತನ್ಮುನೀಂಪ್ರಂ ನುಡಿದಂ|| ೮೦

ಎರೆವರ್ಗೆರೆದುದನಿಪಾ| ಬಿಳಿದಿನಚಲಮಿನ್ನಿದೇಕೆಬೇಡೆಂತೆನೆಕೇ|| ಳ್ವರಕಿವಿಗಮೃತಮೀವ|ರ್ಗರಿದದುಕಾರಣದಿಬೇಳ್ವುದನುಚಿತಮೆಂದಂ||

ವ|| ಎಂಡಾಮಾತಿಗೆನಸುನಗುತ್ತಂ ಮಾನಸಂಜನನ್ಮಾನಿಬ್ಬಣದರಾಜ ಲೋಕಂ| ಬೆರಗಾಗಲಾ್ಕಮುನಿರೂಪಿನೀಶ್ವರಂಗಿಂತೆಂದಂ||

ಕಂ|| ಮುನಿನಾಥನೆಕೇಳೆನ್ನಯು| ತನುಧನಮುನವಿನಿತರೊಳಗೆನಿಮಗೇ ನಿಷ್ಟಂ| ಮನವೊಲ್ದುಬೇಡುಕೊಟ್ಟೆಂ| ಮನಸಿಜಹರನಾಣೆಯೆಂಬ ಭಕ್ತಂಗೆಂನಂ| ||೮೨||

ಚಂ|| ಒಲಿವೊದಲಾದರಂದೊಸೆದು ತಮ್ಮಯುಪೇಹಮುನಿತ್ತುಕೀ ರ್ತಿಯುಂ| ತಳೆದರದಂತುಟಲ್ಲ ಪೆರರೊಲ್ಮೆಯುವಸ್ತುವನೀಯಕೇಳ್ವುದ ಗ್ಗಳಿಕೆವಿಚಾರಿಸಾತ್ಮಸತಿಯುಂ ನಿಜಮಿತ್ರನನುರ್ವರೇಶನಂ ಬಳಕನು ರಾಗವೆಯ್ವಿನಗುವರ್ಪಿರಿದಾಂಬಿಡೆ ನಿಂದುನಿಶ್ಚಯಂ ||೮೩||

ಕಂ|| ಮುದವಣಿಗಂನೋಡುತ್ತಿರೆ| ಪದಪಿಂಬಾಸಿಗದಿನೆಸೆವನಿಜತನು ಜಯುಪಿಂ| ಪೊದದಿದಸೋಮರ್ಡಿಯುಂಚೆ| ತ್ತದೊಳಳ್ಕದೆಕೊಡ್ದು ಕೊಟ್ಟೊಡಾಂನೆರೆತುಷ್ಟಂ| ||೮೮||

ತಳುವದೆನೀಂನೋಡಲ್ತೊಳ| ತೊಳಗುವಚೌಳಿಮುನೆಮಾಡಿನಲವಿಂ ನಭದೊ| ಳ್ತಳೆವೆನ್ನಪೊನ್ನನಂದಿಯು| ಪಳವಿಗೆಯೊಳ್ಕಟ್ಟಮೆರೆವೆನೀ ಸೋಮರ್ಡಿಯುಂ ||೮೫||

ಎನೆಮುನಿಪನನುಡಿಯಂನೆ|ಟ್ಟನೆಕೈಕೊಂಡುರ್ಬಿನಲಿಡುಪರವಶದಿಂ ಸಂ| ಜನಿತಪುಳಕಾಳಿಯೊಗೆಯ| ಲ್ಕನುನಯದಿಂನಿಜತನೂಜೆಮುಡಿ ಗೊಯ್ದಿತ್ತಂ| ||೮೬||

ವ|| ಅಂತುಭರದಿಂನಿಟ್ಟಪಃಕೋಳ ಮುಖ್ಯಶಿವಭಕ್ತರ್ಕಂಗಳಂಮು ಚ್ಚಿಪರಮಾಶ್ಚರ್ಯದಿಂದಿಪರ್ಗಗಳ್|

ಚಂ|| ಮಿಸುಪಜಟಾಕಿರೀಟಮುಮುರಾಪಗೆ ಚಂದ್ರನಹೀಂದ್ರನಗ್ನಿ ದೃ ಗ್ಭಸಿತಮುಜಾಸ್ಥಿಮಾಲೆಗಳಂ ಗಜಕೃತ್ತಿಕಪಾಲಮುಗ್ರಮು ಪ್ಪಸಿ ಘನಖೇಟಕಂಡ ಮುರುಗಂನವರತ್ನದಪೊಂದೊಡರ್ಪಿರಾ ಜಿಸುತಿರ

ಲೊಪ್ಪಿದಂ ಭವಭಯಂಕರನದ್ರಿಜೆಯಯಾಣ್ಮ ಶಂಕರಂ

ವ|| ಅಂತುಶಂಕರಂಪ್ರತ್ಯಕ್ಷನಾದಸಮಯದಲ್ಲಿ|

ಕಂ|| ಇಳೆಬೆರಗಾಗುತ್ತಿರ್ಪೂ | ವೆಳೆಗರೆಯಲ್ಬಿಡದೆದಿವಿಜದುಂದುಭಿನಾದೊ| ಳ್ಮೊಳಗೆಗಣತತಿಮಹೇಶನ | ಬಳಸಿನೊಳೊಲ್ದಾಡಿಪಾಡುತಿರ್ದುತ್ತಾಗಳ್ | |೧೮|

ಶಾ|| ಕ್ಷೀರಾಂಭೋನಿಧಿಫೇನಮಂತುಹಿನತುಲ್ಕೆರಾಂಶುವಂ(?) ಚಂದ್ರನಂ| ತಾರಾನೀಕಮನುದ್ಘಪಾದದ ಮಃನಾದಂಗೆಲ್ದುವಿಭ್ರಾಜಿಪಾ| ಗೌರೀವಲ್ಲಭನಂಗಕಾಂತಿಮುಸುಕ ಲ್ತನ್ನಾಮನಕಂಜಾದಿಗ| ಳ್ಸಾರೂಪ್ಯಂ ಬಡೆದಂತೆಕಣ್ಗೆಸೆವುತಂದುದ್ವಾಪಗೇಹಾಂತ ದೊಳ್|

ವ|| ಅಂತುಶುದ್ಧಸ್ಫಟಿಕಸಂಕಾಶ ವಿಮಳನಪ್ಪಶಂಕರನನಿಜಮೂರ್ತಿಯಂನೋಡಿ

ಕಂ|| ತುರುಗಿದಪುಳಕಪ್ರಕರಂ| ಮೆರೆಯಲ್ಕಾವಮಾನಕಂಜವಮಾಹೇಶ್ವರನಾ| ಕರೆಗೊರಲನಪದಕಮಲ| ಕ್ಕೆರಗಿಕರಂಭಕ್ತಿರಸದಿಮೆರೆದೊರಗಿರ್ದಂ| |೯೧|

ವ|| ಅಂತುಭಕ್ತಿಯಿಂಮೆಯ್ಮರೆದೊರಗಿರ್ಪಾಗಳ್|

ಕಂ|| ವರವಂಶಕಂಜವಮಾಹೇ| ಶ್ವರನಂಪಿಡಿದೆತ್ತಿ ಕ್ಷೂತರ್ಗೆ ಕರುಣಾಬ್ಧಿಯಪ| ರ್ದೆರೆಗಳ್ಸುತ್ತಿದುವೆಂಬಂ| ತಿರೆನಿಜದಶಭುಜದಿನೆತ್ತಿದಂಗಿರಿಜೇಶಂ| |೯೦|

ಅಂತಪ್ಪಕೋಂಡುಮೆಯ್ದುಡವಿ

ಎರೆವರ್ಗಿಷ್ಟವಗಿರಿಜೇ| ಶ್ವರನೆನಿಪೆನಗಿಂದುಬೇಡಿತಂ ಕೊಟ್ಟಸೆನೆಲ್ಧರೆಯೊಳಗೀಭಕ್ತಂಗಾದ್ದೊರೆಯೆನುತಂನುಡಿದನಾಗಳಾಭೂತೇಶಂ

ನೆರೆಕೊಟ್ಟಕೂಸುಕುಲದಿಂ, ಪೊರಗೆಂಬೀ ನುಡಿಗೆಪುತ್ರಿಯೆಂದಿಲ್ಲದನೇ| ಮೆರೆವಕುಮಾರಿಯಮುಡಿಯಂಕೊರೆದಿತ್ತಂಭಕ್ತನೆನುತುಮೇಶಂಪೊಗಳ್ದಂ! |೯೩|

ವ|| ಅಂತಾಕಂತುಹರಂ ಪೊಗಳ್ದುಕೊಂಡಾಡುತಿರ್ಪಾಗಳ್

ಕಂ! ಪಿರಿದುಂವೃಷಭಪತಾಕಂ| ಚರಸತುಳ್ಳೋತ್ಸವದಿದೇವದುಂದುಭಿಮೊಳಗ| ಲ್ಸುರಕಾಮಿನಿಯರ್ನರ್ತಿಸು|ತಿರೆರತ್ನವಿಮಾನವಿರದೆಬಂದುತ್ತಾಗಳ್|| |೯೪|

ವ॥ ಆಸವೆಯುದೊಳ್ಶಂಕರಂ ಪರಮಕರುಣದಿಂ ತದ್ದಂಪತಿ ಗಳೆಡೆ ಗೇಳ್ತಂದು॥

ಚಂ। ಪಿರಿದನುರಾಗದಿಂ ಮುಡಿಯನಿತ್ತು ಕುಮಾರಿಗೆಮುನ್ನಿನಂತೆ ಬಂಧುರಕರಮಿರ್ಪಿನಂ ಶಿರದೊಳಾತ್ಮಕರಾಬ್ಜವನಿಟ್ಟು ನಿನ್ನವಂವ ಕನೆನಿಪೀನರೇಂದ್ರ ಸುತನಂಘರೆಬಣ್ಣಿಸೆಮುಂದೆ ತಾರಭೂಧರಕಿರದೊಯ್ದು ಮೋಕ್ಷಪದ ವೀವೆನೆನುತ್ತುಸಿರ್ದಂ ಮಹೇಶ್ವರಂ। ॥೯೫

ವ॥ ಅಂತೆಯ್ದಿ ತನ್ಮಾನಕಂಜ ಮಾಹೇಶ್ವರಂಬೆರಸುಗಿರಿಜಾರಮಣಂ ನಂದಿನಾಥಮುಖ್ಯಪ್ರ ಮಥರ್ಗ ಗಳಲೊಡ್ಡೋ ಲಗಂಗೊಟ್ಟುಪರ ಮೋತ್ಸಾಹದಿಂದಿಂತೆಂದಂ॥

ಕಂ॥ ಭವಮಾಲೆಯಬಳ್ಳಿಯುಮೂ। ಲವನರಿವಂತರಿದುಮುಗಳಮುಡಿ ಗೊಟ್ಟನೆನ। ಲ್ಭುವನದೊಳಿಂತಿವಗಾರ್ಸದೃ। ಶವೆನುತ್ತಂಶಂಭುನಂದಿ ನಾಥಂಗೆಂದಂ ೯೬॥

ವ। ಎಂದಿಂದುಧರಂಮಾನಕಂಜನನಾನಂದದಿಂಕೊಂಡಾಡುತ್ತಾಗಳ್

ಕಂ। ವರಮುನಿತತಿನುತಗೆಯ್ಯೆ। ಲ್ಕರುಣದಿನಾಮಾನಕಂಜಗತು ಳೋತ್ಸವದಿಂ। ನಿರುಪಮಗಣಪದಮಂಶಂ। ಕರನೊಲಪಿಂದಿತ್ತುಮೆರೆ ದನಾಸ್ಥಾಯಿಕೆಯೊಳ್॥ ೯೭॥

ಗದ್ಯ ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜ ರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯುಪುರಾಧಿಪ ಶ್ರೀಸೋಮನಾ ಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಠಿಪು ರಾತನರ ಚಾರಿತ್ರದೊಳ್ಮಾನಕಂಜರ ಕಥನಂ॥

ಅಷ್ಟಾದಶಾಶ್ವಾಸಂ



# ಪತ್ತೊಂಭತ್ತನೆಯ ಆಶ್ವಾಸಂ

## ಪಗಲ್ದೊಳನಪಟ್ಟಾಭಿಷೇಕಂ

ಕಂ॥ ಮತ್ತಿತ್ತಲ್ಶಿವಭಕ್ತರ । ಮೊತ್ತದಿನಿಡಿದಿರ್ಪ ಮಾನಕಂಜರಪ್ಪ ಳೆಲೊಳ್ । ಚಿತ್ತಜಹರನುರೆಚೆರಗಂ ! ಬಿತ್ತರಿಸಿ ದುದರ್ಕಿನೃಪತಿಪ ಯ್ಯಕೆದಿದರ್ಗಂ॥ ॥೧॥

ಪರವಶದಿಂಜೋಳಪಹೀ । ಶರುಮುಖ್ಯಸಮಸ್ತ ಪರಿಜನಂಕರಮು ಟ್ಟಂ। ತಿರೆನೆರೆನೆಟ್ಟಾಲಿಗಳಿಂ। ದಿರುತಿರ್ದುದುಬೆರಗುವಿಡಿದುಶಿವಮ ಗೃಹದೊಳ್॥ ॥೨॥

ಹರನಾಡಿದನಾಟಕಮದು। ಧರಣಿಪಮುಖ್ಯರ್ಗೆ ಕನಸಿನಂತಾಗ ಮತ್ತಿತ್ತಿರದೆಲ್ಲತ್ತಾಭಕ್ತನ । ಚರಣಂಬಿಡಿದೇಕೆ ಬರ್ದುಕೆವೆಂದೆನು ರ್ದರ್! ॥೩॥

ವ। ಅಂತುಭಕ್ತಿರಸೋದ್ರೇಕದಿಂ ನುಡಿವಭೂಪಾಳಮುಖ್ಯಪು ನಪರಿಜನಕ್ಕೆ ಗಾಂಗೇಯಾಮಾತ್ಯನಿಂತೆಂದಂ!

ಕಂ। ಹರಭಕ್ತಮಾನಕಂಜ। ರ್ಗುರುಪಿದಕಿಂನೋಡುನಂಬಿಮಾಹೇ ಶ್ವರರಂ। ಹರನೆಂದರ್ಚಿಸಿಸದ್ಗತಿ। ನಿರುತಮೆನಲ್ಮೆಚ್ಚಿ ಮಂತ್ರಿಗಂಭಿ ತೆಂದಂ॥ ॥೪॥

ಆವಳಮುಡಿಯೀವಂಗಾ ರೀಪರನಾಮಾನಕಂಜ ಮಾಹೇಶ್ವರನು ಭೂವಿನುತಪದವುನಿತ್ತಂ।ಭಾವೀಪೊಡೀಕುವರನರಸಿಗಾಪೊರ್ಗಳ ಯೊಳ್॥ ॥೫॥

ಶಿವಕನ್ನಿಕೆಯನಿಪೀಕೆಗೆ।ಯುವರಾಜನನೀರನೀಂಮಹಾಪ್ರೀತಿಯಿಂ ನು। ತ್ಸವದಿಂಮಾಳ್ಪುದುನಮಗಾ । ಭವನೊಲಿವಂವರವನೀವನೆಂದ ಭೂಪಂ! ॥೬॥

ವ। ಎಂದುಯುವರಾಜನಪ್ಪಪಗಲ್ದೊಳಂ ।ಗೆತತ್ಸೋಮಪ್ರಭಾಪ ವಿಯಂಪ್ರೀತಿಯಿಂ ನಿರವಿಸಿಕೊಟ್ಟು ಮತ್ತೆ ಮಾಂಗಲ್ಯಮಾದನಂತರ

ಕಂ॥ ಒಂದುದಿನದಿರುಳಿಪರಮಾ । ನಂದದಿನಾಕುವರನಾತ್ಮರಮಣಿ ಸಮೇತಂ। ಬಂದುಮಹಾದಸಖ್ಯ। ಮಂಚದೊಳ್ ಮರೆವಸಜ್ಜೆಪ

ಯಾಂಪೊಕ್ಕಂ॥ ॥೭॥

ಅಂತುಪೊಕ್ಕು

ಪೊಸರಂಗದಪರಿಯಂಕಂ । ಮಿಸುಕುವಕೌಡುಡೆಮರಾಳತಲ್ಪಂಸಿ ತಸ। ದ್ವಸನದಿಪಚ್ಚೆಪಡಿಸಿರಾ। ಜಿಸುತಿರೆಕುಳ್ಳಿರ್ದನಬಲೆವೆರಸಾಕು ಪರಂ॥ ।೮॥

ಗಡಣದಕೆಳದಿಯರಾಗ।ಳ್ಕುಡುನೀಂನಲ್ಲಂಗೆಸಿಮುದತಾಂಬೂಲವು ನೆಂ। ದೊಡೆವಧುಮೆಲ್ಲನೆವರನಂ। ಕಡೆಗಣ್ಣಿಂನೋಡಿಹರುಷಪುಳುಕಿತೆ ಯಾದಳ್॥ ॥೯॥

ಉಂಗುರಮನೀಕ್ಷಿಪನುವಿಂ । ದಂಗನೆಯುಂಗುಲಿಯ ನೋಪನೊಳ ವಿಂಪಿಡಿದಾ । ಭೃಂಗಿಗೆಮೆಲ್ಲನೆಸಖಿಯ । ರ್ಪಿಂಗಲ್ಕವರೊಡನೆಲಜ್ಜಿತೆರ ಳಿತ್ತಾಗಳ್॥ ।೧೦॥

ಇನಿಯನತವಕಮಂನರಿದಂ । ಗನೆಮನಜೊಳ್ಬೆರಸಿಘರ್ಮವಾಪ್ಪಕ್ಕಣ ಜಾಳಂ। ಜನಿಯಿಸೆಸೋಂಕಿನಭರದಿಂ ! ತನುಕಂಪಿಸಿನಿವ್ವಳಪುಖದಿ ನಸುನಗುತಿರ್ದಳ್॥ ॥೧೧॥

ಮ॥ ತನುವಂಮೆಲ್ಲನೆಸೊಂಕಿಬಿಟ್ಟ ಮೊಲೆಗಳ್ತದ್ವಕ್ಷದೊಳ್ಪೆರ್ಚವೆಂ ದೆಸೆಬಾಹುದ್ವಯುದಿಂಪಮುಪ್ಪಿತ ವಕಂಕ್ಕೈಗಣ್ಣಿ ಮಂದಸ್ಮಿತಾ। ನನಮಂ ಚುಂಬಿಸಿಘರ್ಮವಾರಿತುಳುಕಲ್ಕ್ರೀಡಾರಸಂ ಪೆಂಗಲಂಗನೆಯೊಳ್ತಾಂ ನವಸಂ ಪ್ರಯೋಗಸುಖಮಂರಾಜಾತ್ಮಜಂ ತಾಳ್ದಿದಂ। ॥೧೨॥

ಕಂ॥ ಜಲಜದಿಮಧುವಿಂಪೆಳ್ದಂ॥ ಗಳೆನಳಿಯೋಗಿಳಿಚಕೋರಿಗಳ್ಮದ ದೊಧವಂ। ತಳೆವಂದದಿರತಿಸುಖದಿಂ। ಕಳೆವಡೆದೊಪ್ಪಿರ್ದರೊಲ್ದುತ ನ್ಮಿಥುನಂಗಳ್॥ ।೧೩॥

ಇದುದಿವಸಂತಿಂಗಳಿದೆಂ। ಬುದನರಿಯದೆಸುರತದಂತವಾಪ್ತಿಂದೆ ನಲೀ।ಯುಡೆಮುಗುಳ್ದೆಚ್ಚರಿಸುವತ। ತ್ಸುದತಿಯುಸಂಭೋಗಸುಖಮುನಾಂ ತಂಕುವರಂ॥ ॥೧೪॥

ಚಂ॥ ಸರಸದಬೈಗುಳೊರ್ಮೆ ಪರಿರಂಭದವೆಚ್ಚದಲೀಲೆಯೊರ್ಮೆ ಪೀವರಕುಚಮರ್ದನ ಪ್ರಿಯವದೊರ್ಮೆನಖಾಂಕಿತವೊರ್ಮೆ ಚುಂಬನೋ । ತ್ಕರದವಿಳಾಸವೊರ್ಮೆ ಕರಂ ಗಳಪಲ್ಲಟವೊರ್ಮೆತಪ್ಪೊ ಳೊ । ಪ್ಪಿರೆ ... ಪರಮಾನುರಾಗದಿಂ॥

ವ॥ ಅಂತುತತ್ಕಾಂತೆಯೊಳ್ಸುರತಕೇಳೀವಿನೋದಂ ಗಳಿಂಸರಸವಚನರಚನೆಗಳಿಂ ಸಂಗೀತಸಾಹಿತ್ಯ ಪ್ರಸಂಗಂಗಳಿಂಪೊತ್ತುಗಳೆವುತ್ತಿರಲಿತ್ತಲೊಂದುದಿವಸಂ ವಿಕ್ರಮಚೋಳರಾಜೇಂದ್ರಂ ನಿಜರಾಜಧಾನಿಗೆ ಪೋಗಲ್ವೇಳ್ಕೆಂದುಯುವರಾಜನಂಬರಿಸಿಪೊರಮಡುವುದೆಂದುಪೇಳಲ್ಕಾಗಳ್॥ ॥೧೮॥

ಕಂ॥ ನಲವಿಂಯುವರಾಜಂತ। ಲ್ಲಲನೆಯಬೆಂಬಳಿಯೊಳೋತುನಡೆವಸಖೀನಂ। ಕುಳವುಪೊರಮಡಿಸುವುದೆಂ। ದೊಲವಿಂಸಾವಾಸಿಗಳ್ಗೆಬೆಸಸಲ್ಕಾಗಳ್॥ ೧೯

ವ॥ ಅಂತುಸಾವಾಸಿಗಳನಿಯಾಮದಿಂ ಪೊರಮಟ್ಟು ಛತ್ರಚಾಮರದಡವಕೆಯಕನ್ನಡಿಯ ಕಳಸವಪಡಿಗದಪಾವುಗೆಯಮಜ್ಜನದ ವಿಜ್ಜಣೆಯಸೆಜ್ಜೆಯಬೋನವ ಕಜ್ಜಾಯದಪರಿಯಾಣದ ಮುಡಿಯಿಕ್ಕುವಮೊಲೆಗಟ್ಟುವತುಡುಗೆ ಗಳಂತೊಡಿಸುವಡಿಯೂ ಡುಪತೊಡೆದಟ್ಟುವಾರತಿಯನೆತ್ತುವನಿರಿಪಿಡಿದು ಡಿಸುವಘಟ್ಟಿಮಗುಳ್ಚುವತುಷಾರೋದಕದನಾನಾವಿನಿಯೋಗದರೂಪಾತಿಶಯಮಪ್ಪ ವಿಳಾಸಿನೀಜನಮುಂ ಮತ್ತಂ॥ ಕವಿಗಮಕಿವಾದಿವಾಗ್ಮಿಗಾಯಕ .ವೈಣಿಕವಂಶಕಾರವಾರ್ದಂಗಿಕಾದಿರಸಿಕಸಮುದಯಮುಂ ಪರಿಹಾಸವು ನೊಡರಿಪಮೂಕಬಧಿಕಥರ ವರ್ಬ್ಬರಕುಜ್ಜವಾಮನ ಕಿರಾತಗಡುಳಜಡಕಂಜಾದಿರಂಜಿತನಿಕಾಯಮುಂ ಕರಿತುರಗವರೂಥಂಜಿರಸಿಶಿಬಿಕಾಂದೋಳನಾದಿವಾಹನಸಮೂಹಮುಂ ಚಿತ್ರಚೀನಾಂಬರರತ್ನಾಭರಣ ಕನಕರೌಪ್ಯಭಾರಕಾಗ್ರರಪ್ಪಕಿಂಕರ ನಿಕರಮತಿಸಂಭ್ರಮದಿಂದೊಡನೇಳ್ತರಲ್ತನ್ನವಹಿಳಾಸಮೇತಂ ಸಂತಸದಿಂವಿರಾಜಿತನಾಗಿ ನಿಜತಾತನೆಡೆಗೆಬರೆವರೆ

ಕಂ। ಬರೆಕಂಡಾಯುವರಾಜಂ। ಬೆರಸುಮಹಾಬಳಸಮೇತವತಿಭರದಿಂಭೀ। ಕರತರದಿಂರವಮುಣ್ಮ। ಲ್ಕರಿಯೂರಪುರಕ್ಕೆಚೋಳಭೂಪತಿತಳರ್ದಂ। ॥೨೦॥

ವ। ಅಂತುತಳರ್ದುನೆಳಲ್ನೀಡಾರ್ಣಂ ಗಳೊಳ್ಬೀಡಂಬಿಡುತ್ತಂಕರಿಯೂರ್ಗೆಬಂದು

ಕಂ। ವರಬುಧರಪರಕೆಯಂತ। ತ್ಪುರನಾರೀಜನದಮಂಗಳಾರತಿಗಳನಾ। ದರಿಸಿಕೊಂಡಾರಯುತಂನಿಜ। ಪುರಮಂಪೊಕ್ಕು ತುಳಸುಖದಿನಿರ್ದಂ

ಚೋಳಂ| ||೧೮||

ವ|| ಅಂತುಕರಿಯೂರ ವಿಕ್ರಮಚೋಳರಾಯಂ ಪರಮಾನಂದಸುಖ ದೊಳಿರ್ಪಲ್ಲಿ

ಉ|| ಒಂದುದಿನಂಮನೋಜಸರೂಪ ನೆನಿಪ್ಪಕುಮಾರನಾಗಳಾ|ನಂ ದದಿನಾತ್ಮ ತಾತನಸಭಾಸದನಕ್ಕೆ ತಿಸಂಭ್ರಮಂಮಿಗ| ಲ್ಕಿಂದುವಿನಂತೆ ಗುಪ್ಪಳಿಪಸತ್ಕಳೆಗಳ್ಪೊರಪೊಣ್ಮೆ ತಿರ್ಪಿನಂ|ಮುಂದೆಸಮಸ್ತವಂದಿನಿ ಕರಂ ಪೊಗಳುತ್ತಿರೆಬಂದನರ್ಥಿಯಿಂ|| ೧೯||

ವ| ಅಂತುಬಂದಾಸ್ಥಾನಮಂಟಪಮಂಪುಗುವಾಗಳ್

ಚಂ| ರಭಸದಿರಾಜಲೋಕವಿದ ರೇಳುತಿರಲ್ಕನಮೊಲ್ದು ಬಂದಿಳಾಪ್ರ ಭುಗತಿಭಕ್ತಿಯಿಂದೆ ರಗಿಪಾದಸಮೀಪದ ಪೀಠದಲ್ಲಿಸ|ದ್ವಿಭವಮನಾಂ ತು ವಾಸವನಪಾರ್ಶ್ವದೊಳಿರ್ಪಜಯಂ ತನೆಂದದಿಂಸಭೆಗೆಸುರತ್ನದೀ ಪವೆನಿಪಿಂತಿರಲೊಪ್ಪಿದನಾಕುಮಾರಕಂ|

ವ| ಅಂತೊಪ್ಪುವಕುಮಾರನ ವದನಾರವಿಂದಮಂನೋಡಿಸಂತೋ ಷಾಬ್ಧಿಯೊಳೋಲಾಡಿ ವಿಕ್ರಮಚೋಳರಾಜಂ ಗಾಂಗೆಯಾಮಾತ್ಯ ನೊಡನಿಂತೆಂದಂ|

ಮ|| ಅಘಟಂದಾಂತರಿಭೂಭುಜ ಪ್ರಕರಮಂಸಂಗ್ರಾಮದೊಳ್ಗೆಲ್ವ ಶೌ ರ್ಯದವೆಸ್ಫೂರ್ಜಿತಮಪ್ಪಭೂಭರ ಮುಮಂಪೋರ್ದಂಡದೊ ಳ್ತಾಳ್ವಸತ್ವದಪೆಂಪಾಯ್ತು ಕುಮಾರಕಂಗೆಘರದಿಂದಂಯೌವರಾಜ್ಯಾ ಭಿಷೇಕ| ದಮಾಂಗಲ್ಯಮನಿಂದುಮಾಳ್ಪೆ ನೊಲವಿಂ ದೆಂದಂಮಹೀವಲ್ಲ ಭಂ| ||೨೦||

ಕಂ| ಧರಣೀಭಾರಮನಿದನಾ| ದರದಿಂಯುವರಾಜನಲ್ಲಿನಿರವಿಸಿಬಳಿ ಕಾಂ| ಗಿರಿಜಾವರನಧ್ಯಾನದೊ| ಳಿರುತಿರ್ಪೆಂಸುಖದೊಳೆಂದುಭೂಪಂ ನುಡಿದಂ| ||೨೧||

ವ| ಅಂತದಂಕೇಳ್ದು ತದ್ರಾಜಂಗೆ ಮಂತ್ರಿವರನಿಂತೆಂದಂ

ಕಂ|| ಒಡೆಯುರ್ಪೇಳ್ದುದುಕಜ್ಜಂ | ಕಡುಚೆಲ್ವಂಕುವರನಧಿಕಧರ ಣಿಯನೊಂದೇ ಕೊಡೆಯಿಂದಾಳ್ವಪ್ರೊಡಪರ್ಪಿದೆ| ಕುಡುವುದುಯುವರಾ ಜಪಟ್ಟದುತ್ಸವದೊದವಂ| |೨೨||

ವ| ಎಂದು [illegible]

ತ್ಕಾರ್ಯಮಂ ಪನದೊಳ್ಕೈಕೊಂಡು ನಿಜಕುಮಾರನಪ್ಪ ಪಗಲ್ಸೋಟಿಗಂ ಗಿಂತೆಂದಂ||

ಕಂ|| ಗುರುವಚನಮಲಂಘ್ಯಮದಾ| ಗಿರೆ ಕೇಳ್ವುದು ಕಂಡಸರ್ವಸ್ಥ ಣಿಮಂಭರವುಂ| ಧರಿಯಿಸಿಸೀಸಿರಲಾಂಶಂ |ಕರಮುಂ ಕೀರ್ತಿದ ಧ್ಯಾನದಲ್ಲಿಸು ಖದಿಂದಿರ್ಪಂ|| |೨೪|

ವ|| ಎಂದು ಜನಕಂ ನುಡಿಯುಲ್ಕೆ ತತ್ಕುಮಾರಂ ಕೈದಾವರೆಯುಂ ಮುಗಿದಿಂ ತೆಂದಂ|

ಕಂ||ಧರೆಯಂ ತಾಳ್ವೊಡಹೀಶ್ವರ| ನೆರಡನೆಯೊಳ್ನೀ ವಡಲ್ಲದೆನ್ನಳವೇ ಭೂ| ವರ ನಿಮ್ಮ ತನುಜನೆಂಬೀ | ವರಸತ್ವದಿ ಕೊಟ್ಟನಿಯಮಮಂತಾ ಳ್ದಿರ್ಪೆಂ| |೨೫|

ಸ್ವಾಗತವೃತ್ತಂ| ದೇವರಾವಚಿಸನೀವುದದಂಮ | ಜ್ಜೀವದಂತೆವರಿ ಭಾವಿಸೆತೋರ್ಪೆಂ| ದೋವುಗೆಂದಿಟುಮೆನುತ್ತೆ ಕುಮಾರಂ ಭಾವದಿಂ ಜನಕನಾಜ್ಞೆಯನಾಂತಂ| |೨೬|

ವ| ಎಂದು ನಂದನಂ ಕೈಕೊಂಡುದರ್ಕಾನಂದ ಸಂದೋಹಂಮಿಕ್ಕು ರಾಜೇಂದ್ರಂ ಸಚಿವೇಂದ್ರರಂ ಬೆರಸು ಮಂಗಳಮಹೋತ್ಸಹಕಾರ್ಯಕ್ಕೆ ರಗಿ ಸಲದು ಜ್ಯೋತಿಷ್ಕರಂ ಬರಿಸಿ ಪಟ್ಟಾಭಿಷೇಕಕ್ಕೆ ಶುಭದಿವಸಮಾವುದೆಂದು ಬೆಸಗೊಳಲ್ಕಿಂದೇ ಶುಭಮುಹೂರ್ತಮೆಂದು ಪೇಳಲ್ಕೈಕೊಂಡಾಕ್ಷಣಂ ಗೃಹಮಪತ್ತರನಂ ಕರೆದು ರಾಜಮಂದಿರಮನಲಂಕರಿಸಿ ತತ್ಸಮಯೋಚಿ ತಮಪ್ಪಮಂಗಳೋಪಕರಣಂಗಳಂ ಸಮಕಟ್ಟಿಮೆಂದು ನಿರೂಪಿಸಲ್ಸಂ ರಂಭದಿಂ ನೆಗಳುತ್ತಿರೆ ಮತ್ತಮಾಗಳ್

ಕಂ| ಎಲೆಸಚಿವಮುಂಪೆಧರಣೀ| ವಳಯುವನಾಳ್ವಲ್ಲಿ ದುರ್ಯಶಂಪೊರ್ದದ ವೋ| ಲ್ಪಲೆತಿಳಿಪುಸೂನುಗಂನಿ | ರ್ಮಳಬುದ್ಧಿಗಳಪ್ಪತೆಱದಿನೆಂದಂಭೂಪಂ|| |೨೭|

ವ|| ಎಂದು ನುಡಿದು ತದ್ಭೂಪಾಳನಾಜ್ಞೆಯಂ ಕೈಕೊಂಡು ಸವಿನಯ ಕ್ಕೇಳ್ತಂದು ಮಂತ್ರೀಶ್ವರಂ ವಿನಯದಿಂದೆಲೆಯುವ ರಾಜನಾನಾನೀತಿಶಾ ಸ್ತ್ರವಿಶಾರದ ನಪ್ಪನಿನಗೆ ಬುದ್ಧಿಪೇಳ್ದು ತಿಳಿಪುವುದಿಲ್ಲವಾದೊಡಂ ಪೇಳ್ವೆ ನದನೋತು ಚಿತ್ತೈಪುದು|

ಮ|| ನಿಜಮಿಂದಂ ಕಮ ಸೊಕ್ಕಿ ಮೆಯ್ಮ ರೆದಮುಂದಂ ಕಾಣದಿರ್ಪ

ರ್ಮಹೀ| ಶ್ವರರೆಂದೆಂಬುದುಸ ತ್ಯಮಲ್ಲದೊಡೆಜೀವಾಯಾವಥಾಕೆಂದು ಮುಪ್ಪರವೆಂದುಗ್ಗಡಿಸುತ್ತೆ ಪಜ್ಜೆಯಿಡುವಾಗಳ್ಸೇವಕಂ ಮುಂದೆನಿರ್ಭರವೆಂದೆಚ್ಚರಿಸುತ್ತೆ ಪೋಪರೆನಲಾನೇನೆಂಬೆನಾಶ್ಚರ್ಯಮಂ| |೨೮||

ಕಂ|| ಗರವೊರಲಿಪಂತೆಮುಂದಿ | ರ್ದರನರಿಯದೆವಂದಿಸಲ್ಕೆನೋಡಲ್ಕಿತ್ತೊಱೆ | ತ್ಕರಮಂನುಡಿಯಿಸದುೞೆ | ಮರೆದಿರುತಿರ್ಪರ್ಸಿರಿಯಗರ್ಬದಿಂದುರ್ಬೀಶರ್|| ||೨೯||

ಸಿರಿಯೆಂಬಸುರೆಯಸೊರ್ಕಿಂ| ಪಿರಿದುಂಪೊಯ್ಮರೆದುಕಾಲವನರಿಯದನಿಂದಾ| ಸುರದಿಂಪೊರೆಯುಳಿದೊಪ್ಪು | ತ್ತಿರವರಿಸದೆಮುಂದುಗಾಣದಿರ್ಪರ್ಭೂಪರ್| ||೩೦||

ಶ್ರುತಲಕ್ಷಣಮಂಪರಸ| ದ್ಗತಿಯಂಸತ್ಯಮನುದಗ್ರಗುಣಮಂದಾನೋ| ನ್ನತಿಯಂನೂನಾಚಾರದ | ಮತಿಯಂಸಿರಿತೊಱೆಪಳ್ನೃಪಾಳರ್ಗಳೆಯೊಳ್|| ೩೧||

ಕನಕದಪೆಸರ್ಗೀಶಂನೆ| ಟ್ಟನೆದತ್ತೂರಮನೆತಾಳ್ದುಮರುಳಾದಂತಾನೆನೆನಿಜಕನಕದದೆಸೆಯಿಂ | ಮನುಜರ್ಮರುಳಪ್ಪರೆಂಬುದೊಂದಚ್ಚರಿಯೇ! ೩೨|

ಅತಿಸಂಚಳೆಯತಿನಿಷ್ಕಳೆ| ಯತಿಲಾಭೋಪೇತೆಯತಿಮದೋದ್ಧತೆಯತಿಡು | ರ್ಮತಿಯುತೆಯೆನಿಪಾಶ್ರೀಯಂ | ಕ್ಷಿತಿಪತಿಕೇಳಕ್ಕಡಿಕೊಂಡುತಾಮಿಂತಿರ್ಪರ್ |೩೩||

ನೆರೆಸನ್ನಿಪಾತವಡಸಿದ ! ತೆರದಿಂಕೇಳಪೆಸಂಪುಂತುನೋಡದೆಪಿರಿದೆ| ತ್ತರತತ್ತರದಿಂನುಡಿವ್ರು | ತೆಬೆರತಿರ್ಪರ್ಸಿರಿಯಮದದಿನರಸುಗಳಿಳೆಯೊಳ್|| ೩೪

ಬಿಡದಾಳನೊಡೆಯನೆನಿಸು | ತ್ತೊಡೆಯ ನನಾಳೆನಿಸುತಿೞಸುತಂನಗುತಿರ್ಪಿ| ಕೆಡುಘೊತೆಯಪ್ಪಲಕ್ಷ್ಮಿಯ | ವಿಡಂಬಮಂನಚ್ಚವರಸುಗಾವಿಲನಲ್ತೆ|| ||೩೫||

ಅದೆಂತೆಂದೊಡೆ

ಸಿರಿಕನಸಿನಂತೆಜವ್ವನ| ದಿರವಮುಸುಱಚಾಪದಂತೆತನುಬುದ್ಬುಧದಂತಿರೆಬಯಲೆಂಬುದನರಿಯದೆ|ಪರವಶನಪ್ಪರಸನೀಕ್ಷಿಸಲ್ಕಡಬರಸಂ||

ಇಳೆಯೆಂಬಪ್ಪರಿಯೆಂಬಳ್ | ಪಲಬರುವನನುಭವಿಪಸೂಳೆಯಂಜಾಗ

ಜುಗದೊಳ್| ನೆಲೆಗೊಳಲೆಲ್ಲೆಲ್ಲಿಯುಚಿಂಚ ಳಿಯುರ್ತನಗಾದರೆಂಬನ್
ಚಿಗಾಂಪಂ|| |೪೬|
ಡೊರಕವೆನಾಸಾವಿಧಿಯೊ| ಳ್ಬರಿಪುದುದೊರಕಿದೊಡೆಪ್ರೋಷಧ
ದಿಂದಂಬ್ರೈ| ತಿರಿಸಲ್ಕೆಸಿಯುಪ್ಪುದು ಘನ | ವಿರಹೆಂದುಂಬರಿದೆನೆಚ್ಚಿಕಿಡು
ವರ್ಭೋಪರ್|| |೪೭|
ಅದುಕಾರಣವಿೂಸಿರಿಪ್ರೋ ! ಗದೆತನಗಿಪ್ಪಲ್ಲಿಸಕಲಸುಖಮಂಸತ್ವ
ಣ್ಯದಪೆರ್ಚಂನೆರೆಗಳಿಯಿಸು | ತೊದವಿದಕೀರ್ತಿಯೊಳೆಬಾಳ್ವನಾತನ
ಧನ್ಯಂ|| ೪೮
ಅದೆಂತೆಂದೊಡೆ
ಬೆಳಗಿದಕನ್ನಡಿಯೊಳೆರವಿ| ಯೊಳಪುಗುವಂತೆಲೆನರೇಂದ್ರಸುತನಿ
ಯನಿ| ರ್ಮಳಹೃದಯದೊಳಾನೊಲವಿಂ| ತಿಳಿಪಿದಘನತರದಬುದ್ಧಿ
ಲ್ದುದುಸಹಜಂ| |೪೯|
ಪರಕಿಪೊಡವಿವೇಕಿಗಳ | ಪ್ಪರಸರ್ಗೆಹಿತೋಪದೇಶಮಂ ಪೇಳ
ಸುರದಿನುರಿದೇಳ್ವರಲ್ಲದೆ| ನಿರುತಂನಿನ್ನಂತೆಕೇಳಬಲ್ಲವರೊಳರೆ||
ವ|| ಅನರಿಂದಾಂಪೇಳ್ವಲಕ್ಷ್ಮೀವಿಡಂಬನ ಮಧಿಕತರಭೂಪಾಲರ್
ಲ್ಲದೆನಿನ್ನಂಪೊರ್ದದಾಗಿಸದುಪದೇಶಮಂ ಕೈಕೊಂಡುಸಧೃತಿಯಿ
ಯುವರಾಜಪಟ್ಟಾಭಿಷೇಕಮಂ ತಾಳ್ದುಸಕಲರಾಜಕಾರ್ಯಧುರಂಧರನ
ಗಿಚತುಸ್ಸಮುದ್ರ ಮುದ್ರಿತ ಧರಿತ್ರಿಯನೇಕಛತ್ರದಿಂ ತಾಳ್ವುದಂತ
ಮಲ್ಲದೆಯುಂ
ಕಂ|| ಸಿರಿಯುವಿಡಂಬಕ್ಕೊಳಗಾ| ಗಿರದೆಲೆಯುವರಾಜವಿಮಳಕೀರ್ತಿ
ಸಮೇತಂ| ಪರಿಹಾಸಕ್ಕೊಳಗಾಗದೆ || ಪಿರಿಯರ್ಪೊಗಳ್ವಂತೆಬಾಳ್
ದಾಚಂದ್ರಾರ್ಕಂ| |೫೦|
ವ|| ಎಂದುನುಡಿದಗಾಂಗೇಯಾಮಾತ್ಯನಮಧುರವಚನಸುಧಾರಸದಿ
ತೃಪ್ತನಾದಂತೆಯುಂನಿರ್ಮಳನಾ ದಂತೆಯುಂಪವನಮಾ ನಂದಹೃದ
ನಾಗಿಪೇಳ್ದಸದುಪದೇಶಮಂಕೈಕೊಂಡಿರ್ಪಸಮಯದೊಳ್ಮೌಹೂರ್ತಿ
ಕರ್ಬಂದುಸುಮುಹೂರ್ತಂಸಾ ರ್ತಂದುದಿನ್ನೇಳಿ್ವ ದೆಂದುಬಿನ್ನ
ಗೆಯ್ವಲ್ಕೆ ಸಂತೋಷಮನೆಯ್ದಿ ವಿ ಕ್ರಮಚೋಳ ರಾಜೇಂದ್ರಂನಿಜ
ಮಾ... ಟ್ಟಬದ್ಧಕ ಮಂಮಾಳ್ಪನೆಂಪ್ರಾತ್ಸಾ ಕ್ಯಂಮಿಕ್ಕ ತಿರಳ

ಸೆಯಲ್ಕಾಸ್ಥಾನ ಮಂಟಪದಿಂದೇಳ್ವ ಗಳ್ಕಾನಾವಿಧರತ್ನ ಖಚಿತಕು ಪಲಂಗಳ್ಗಂಡಮಂಡಳದೊಳ್ಪೊಳೆದಾಡೆಯುಂತಾರಾಹಾರಂಗಳ್ವಿಶಾಲವ ಕ್ಷಸ್ಥಳಂಗಳೊಳ್ನಲಿದಾಡೆಯುಂಝುಣಝುಣಿಸುತ್ತೆಚರಣಂಗಳೊಳ್ಪೊಂ ದೊಡರುಗಳುಲಿದಾಡೆ ಯುಂಪರಮೆ ಗಳ್ಸರು ಗಂಪಿನಪ್ಪೂ ದುರುಂಬಂಬಿ ಟ್ಟುಝುಂಕರಿಸುತ್ತೆ ನಭಕ್ಕೆ ನೆಗೆದಾಡೆಯುಂಮ ಹಾಸಂಭ್ರಮದಿಂದೊ ಡನೇಳ್ವಮಾಂಡಳಿಕದಂಡನಾಥ ಸಾಮಂತವರ್ಗದೊಳಂಕಂಕಣಝುಣ ತ್ಕೃತರವಂಗಳೆಸೆಯಲ್ಬೀಸುವಚಾಮರಗ್ರಾಹಿಣಿಯರೊಳಂ ಲೀಲೆಯಿಂ ದಡಿಯಿಡುವವೇಳೆಯೊಳ್ಸಿಂಜಿತಂಗುಡುವತಿತ್ನ ರಂಜಿತಮಂಜೀರಕೋಪ ತಾಂಘ್ರಿಗಳವಿಲಾಸಮಂಮೆರೆವವಿಲಾಸ ನೀಜನಂಗಳೊಳಂ ಕಮನೀಯ ರೂಪಾತಿಶಯಧರರಾಜಕುಮಾರ ಸಂದೋಹ ಕಿರೀಟಮಾಣಿಕ್ಯ ಮಾಲಾ ಪ್ರಭಾಪಟಲದೊಳಂಗೊಂದಣದಿನಡೆವಸಡಗರಕ್ಕೆ ಬೆಚ್ಚಿ ಪಳುಕಿನನೆಲಗ ಟ್ಟನೊಳ್ ಕೆದರಿದಪೂವಲ್ಲಿಗಳಂ ಬಿಟ್ಟುಮೇಲಕ್ಕೆರ್ದಚಂಚಚ್ಚಂಚ ರೀಕ ಸಂಚಯದಿಂ ಚರಂಗಳೊಳಂ ಮುಂದೆನಿಂದುಗುಣ ವೃಂದಮಂ

ಪೊಗಳ್ವಮಂಗಳಪಾಠ| ಕಪ್ರಕರಧ್ವಾನ ದೊಳಂಜಯ ಜೀಯಪ್ರಾ ಯುವಧಾರೆಂದಡಿಗಡಿಗುಗ್ಘಡಿಪ ಪದವರರಕಳಕಳದೊಳ್ಬಂದ ನೇಕರಾ ಜಲೋಕಂಬೆರಸೊಳಗಂ ಪೊಕ್ಕುನೋಳ್ಪನ್ನೆಗಮಲ್ಲಿ||

ಕಂ|| ಪರಿಪರಿಯಚಿತ್ರಪತ್ರೋತ್ಕರಮೆಯ್ದಲ್ಗ್ರಹಮಪತ್ತರಂಮ್ಮುಂ ಸಮೆದಾ| ಸರುಚಿರರತ್ನಸಮೂಹದಿ | ವಿರಚಿಸಿದ ಭಿಷೇಕಮಂಟಪಂಕ ರಮೆಸೆಗುಂ|| ||೪೩||

ವ|| ಅಂತೆಸೆವಭಿಷೇಕಮಂಟಪ ದೊಳ್ವಕ್ರಮಚೋಳ ರಾಜೇಂದ್ರಂ ನಿಜಪುತ್ರನಂ ಮೂರ್ತಿಗೊಳಿಸಿಭೂರಿಭೇರಿಮುರಜಡಿಂಡಿ ಮಕಹಳಪ ಟಹಪಟುರವಂಗಳೆಸೆಯಲ್ಮಂಗಳ ಪೀಠಮನಳಂಕರಿಸಿಮೆಂದುನಿಜಸೌಂ ದರೀ ಸಂದೋಹಕ್ಕೆನಿಯಮಿಸಲ್ಕಾಗಳ್

ಚಂ|| ಪರಸಿಕುಮಾರಮಸ್ತಕಮನೊತ್ತಿ ನಭಾಗ್ರದಿಪಿಕ್ಕೆಬಳ್ಕಿಕೇ| ಕರರುಚಿಪರ್ಬಿ ಘಮರ್ಮಜಲ ಮುಣ್ಮೆಕುರುಳ್ನಿಮಿರ್ದಾಡೆಕೂಡೆಪೀ|ವ ರಕುಚಮಂಡಲಂ ತೊನೆಯೆಹಸ್ತ ಯುಗಂಗಳಲಾಘವಂ ಪೊದಲ್ದಿರಚಿ ಕ್ಕುರಂಗಳಂ ಸುದತಿಪೂಸಿದಳೊಲ್ದು ಸುಗಂಧತೈಲಮಂ|| ||೪೪||

ಚಂ|| ಚಳದಳಕಾಲಿಯುಂಕೆಲಕಕೆ ಸೊಕ್ಕಿಸಮುಜ್ವಲರತ್ನಕಂಕ

ಣಂ| ಗಳನಿರಪೇರ ನೋಂಕಿನಿರಿಯಂ ಪರಜಾನಃಗಳಿಂದಿರ್ದಂಕಿಮಂ
ಳಮಮವಾರಿಯಂ ಮೆರೆವಹೊಂಗಳಸಂಗಳನಾತ್ಮ ಹಸ್ತದೊಳ್ತಳೆದ
ಷೇಕದೇವತೆಯರಂತಿರೆ ಕಾಂತಿಯರೊಪ್ಪಿತೊಪ್ಪಿಸಿದರ್|| |೪೪|
ಕಂ|| ಶಶಿಕರದಿಂನೀರೇರುವ| ಶಶಿಕಾಂತ ಪ್ರತಿಮೆಯಂದದಿಂಘವರ್ಣಾ
ಬು| ಪ್ರಶಮಿತತಿಲಕವದಾಗಿರೆ| ಶಶಿಮುಖಿಮಳಯು ಜದಜಳಮನೋ
ವಿಂಸುರಿದಳ್| |೪೫|
ವ| ಅಂತುಮಂಗಳಾಭಿಷೇಕಸ್ನಾನ ರಸದಿಂತೊಳ್ದು ನೆನಲ್ಕಾಗಳ
ಕಂ|| ಜಳರುಹಮುಖಿಯೊರ್ಬಳ್ಪೊಂ| ಗಳಸದಿಕುವ ರಂಗೆಘುಸ್ಸಣ
ಜಳಮಂಸುರಿದಳ್ |೪೬|
ನಿರುಪಮವಸಂತರಾಜನ|ವರಭೋಗಶ್ರೀಯುತೆರ ದಿನಖಿಳಸುಗಂಧೋ
ತ್ಕರದಿಂಪೊರೆದೋರ್ಪ್ನಂಗನೆ 1 ಧರಣಿಪತನಯಂ ಗೆಸುರಭಿಜಳಮ
ಸುರಿದಳ್|| |೪೭|
ಅಂತುಮಂಗಳಾಭಿಷೇಕಂಗೆಯ್ದು ನಂತರಂ
ಸುರುಚಿರ ದುಕುಲಧಿರತ್ನಾ| ಭರಣಂಗಳನುಟ್ಟುತೊಟ್ಟು ಕೈಸ
ಯಲೊಡಂ| ವರಸಚಿವಂಕೈಗುಡೆಬಂ | ದರಸುಮಗಂ ಸಿಂಹಪೀಠದೊ
ಳ್ಕುಳ್ಳಿರ್ದ್ನಂ|| |೪೮|
ಆಸಮಯದೊಳ್|
ಉ|| ದುಂದುಭಿನಿಸ್ವನಂನೆಗಳೆಗಾಯಕ ಗೀತರವಂಗವೂಪ್ಪೆಸಾನಂ
ದದಿವಿಪ್ರರುಚ್ಚರಿಪವೇದ ನಿನಾದಗಳಿಂದಮಾನಿನೀ ವೃಂದದಮಂಗಳಾ
ರತಿಗಳೆತ್ತೆ ಮಹೀಪತಿತನ್ನ ನಂದನಂ | ಗಂದನುರಾಗ ದಿಂಪರಸಿಕಟ್ಟಿದ
ನೊಲ್ದಧಿರಾಜಪಟ್ಟಮಂ|| ||೪೯|
ಅಲ್ಲಿಂಬಳಿಯಂ
ಕಂ|| ಕರಿಕುಳಮಂಹರಿಚಯಮಂ| ವರಊಥತತಿಯಂನಟೌಘಮಂ
ಕೋಶಮನು| ವ್ಸರೆಯಂನಿಜಸೂನುಗೆವಿಭು| ನಿರವಿಸಿತಾನಧಿಕಹ
ರುಷಮಂತಳೆದಿರ್ದ್ನಂ|| ೫೦|
ತತ್ಸಮಯದೊಳ್
ಕಂ|| ನರೆತೋರಿದವರನುಳಿವ| ತರ್ಣಿಯರೆಂದೆಂಬರದು ವಿಸತ್ಯ
ತದೂ| ವರನಂಬಟ್ಟಂತಾಶ್ರೀ| ಭವದಿಂ... ನಲ್ಲಿಗೆಯ್ದಿ ವಳ

ಗಳ್|| ||೫೨||

ಅಂತೆಯಿದ್ದರಾಜ್ಯಶ್ರೀ|ಯಂತಾಳ್ದಾ ಚೋಳಮಹಿಪನಿಂದಂವಿಭುನಿ ಕ್ಷಿಂತತೆಯಂತಾಳ್ದಂತಾಂ| ಕಂತುಹರಧ್ಯಾನವಲ್ಲಿಸುಖದಿಂದಿರ್ದ೦||

ಇತ್ತಲ್

ಪಿತನಾಜ್ಞೆಯಿಂದವಾಗಳ್ಗೆ ಇರುಗೆ ಭುಜದಗ್ರದಲ್ಲಿ ಕೇಯೂರಮ ನಾಂ| ತತಿರಂಜಿಪಂದದಿಂತತ್| ಕ್ಷಿತಿಯಂತಚೋಳನೃಪತಿತಾಳ್ದಿ ಸೆ ದಿರ್ದ೦|

ಪರಮುಖದೊಳ್ವಾಕ್‌ಶ್ರೀಪೇ|ರುರದೊಳ್ಮಗೆಚರತೆವೆತ್ತರಾಜ್ಯಶ್ರೀ ಯುಂ| ಪರಭುಜದೊಳ್ವ ಜಯಶ್ರೀ | ಸಿರುತೇನೆ ಲಸಿತವಿರಾಜಿ ಪಂತ ಚೋಳಂ ೫೩||

ವ|| ಅಂತುಸಕಲಭೂಭಾರಮಂ ತಾಳ್ದು ಸತ್ಪ್ರತಾಪದಿಂಚಿರತರಮ ಪ್ಪೇಕಬುದ್ಧಿಯಿಂದುನದೊಳ್ದೃಢೀಕರಿಸಿ ಯುಂ ಕರ್ತವ್ಯಮಕರ್ತ ವ್ಯಮೆಂಬದ್ವಿತೀಯಮನರಿದು ಕಾರ್ಯಮಂಪ್ರವರ್ತಿಸಿಯುಂ ಶತ್ರು ಮಿತ್ರೋದಾಸೀನರೆಂಬ ತ್ರಿವರ್ಗಮಂಸಮೀಕರಿಸಿಯುಂ ತ್ಯಾಗಸ ತ್ಯಶೌರ್ಯಮೆಂಬಮಹಾ ಗುಣತ್ರಯಮನಂಗೀಕರಿಸಿಯುಂ ಉತ್ಸಾಹ ಪ್ರಭು ಮಂತ್ರಮೆಂಬಶಕ್ತಿತ್ರಯಮನಳಂಕರಿಸಿಯುಂಸಾಮದಾನಭೇ ದದಂಡಮೆಂಬು ಪಾಯಚತುಷ್ಕಮಂ ತನ್ನೊಳಳವಡಿಸಿಯುಂ ಶಬ್ದಸ್ಪ ರ್ಶರೂಪರಸಗಂಧಮೆಂಬಪಂಚೇಂದ್ರಿಯುವ ನೊತ್ತರಿಸಿಯುಂಮಾತಾ ಪಿತಾಗ್ನಿ ಗುರುದೈವಮೆಂಬಪಂಚಗುರು ಪರಿಚರ್ಯಾತತ್ಪರನಾಗಿಯುಂ ಸಂಧಿವಿಗ್ರಹಯಾನಾಸನದ್ವೈಧೀಭಾ ವಸಮಾಶ್ರಯ ಮೆಂಬಷಡ್ಗುಣವಿ ಕಾರದನೆನಿಸಿಯುಂಕಾಮಕ್ರೋಧಲೋಭ ಮೋಹಮದ ಮತ್ಸರಮೆಂ ಬರಿಷಡ್ವರ್ಗಮನಥಃಕರಿಸಿಯುಂ ದ್ಯೂತ ಮದ್ಯಪಿಶಿತವೇಶ್ಯಾಪಾಪರ್ಧಿ ಚೌರ್ಯಪರ ದಾರಮೆಂಬ ಸಪ್ತವ್ಯಸನ ಮಂನಿರಾ ಕರಿಸಿಯುಂ ಅಭಯ ಸನ್ಮಾನದಾನಂಗಳಿಂ ಸದ್ಭೃತ್ಯವ್ರಾತಮಂ ಸ್ವೀಕರಿಸಿಯುಂನಿರ್ಧನರ ಪ ನಾಥರಂನಿಜ ಮೂಲಧನದಿಂ ಪರಿತೋಷಿಸಿಯುಂ ಕಾರ್ಯಕಾರಣ ಮನರಿದು ಬುದ್ಧಿ ಪೇಳ್ವಪ್ರ ಧಾನವರ್ಗ ದೊಳ್ಸಂಭಾವಿಸಿಯುಂ ಸನ್ಮಾ ನದಾನಗುಣಂಗಳಿಂ ಪಲತೆರದನಿಯೋಗಿಗಳನ ನೇಕವ್ಯಾಪಾರದೊಳ್ನಿ ರವಿಸಿಯುಂ ನಿಜಮಾಲಬಲಮಂ ಸೇರಿಸಿಯುಂ ಮಹಾಯಂಸಾಪ

ತ್ನಿಪುತ್ರದಾ ಯಾದ್ಯ ಚಿಂತನೆಗೆ ನಿಶ್ಚಿಂತತೆಯುಂ ವಿಚಾರಿಸಿಯುಂ ಸಮು ಚಿತಸನ್ಮಾ ನೋಪಚಾರಂಗಳಿಂದಂತಪ್ಪು ರಮಂಪರಿ ತೋಷಂಬಡಿ ಯುಂ ಅಂತ ಸಕಲನಾವಶ್ಯಕ್ಯಮಂ ನಿಷ್ಕಂಟಕತ್ವದಿಂ ಪಾಲಿಸು ರ್ದನಂತಪ್ಪುಲ್ಲಪೆಯುಂ

ಕಂ|| ಚೋಳಂಗನಪಮ್ಯನೆನಿಸಿಜ| ಕೋಳಂಗಳ್ನಿಷ್ಟನೆನಿಸಿತ್ತೋಳ್ಪ ದುಷವನ್ರೋಳ್ | ಘೋರವಾಣಿಂಪು ನೃಪರೊಳ್ | ಕ್ರೂರತೆಯುಂ ಜಗಳೊಳ್ಮ್ಮಪಂಜಪದಿರ್ದ| |೬|

ಅತಿಶಯದಬಲ್ಪಿನಿಂದಂ|ಕ್ಷಿತಿಯರಿಯಲ್ಕಂಡುದುಷ್ಟನಿಗ್ರಹಶಿಷ್ಟಪ್ರ ತಿಪಾಲನೆಯುಂ ಮಾಡುತ್ತಮತುಳಿ ತಬಳಚೋಳರಾಜ ನೆಸೆವುತ್ತಿರ್ದಂ|

ಅದಲ್ಲದೆಯುಂ|

ಆವದಿನಂವಿಭುತನ್ನಯ| ಮಾವಂಭಕ್ತರ್ಗೆ ಬೇಡಿದುದನಿತ್ತಂ ವಿಂ| ಕೈವಲ್ಯಕನೆಯ್ದಿದನೆನು| ತಾವಗವಿೂಶ್ವರನಭಕ್ತರಂಸಂಬಿರ್ಪ ಪು| ಜಪರಂಪ್ರಾಕ್ಷಿವಿಭೂತಿಯೆಂಬಿ ವನೊರಲ್ದಾಂತಿ ರ್ಪಸದ್ಭಕ್ತ ರಂ| ಷ್ಟುಪರೂಪರ್ಗಜಪೆಂಪು ಭಾವಿಸುತ ಮತ್ಯಾನಂದ ಸಂಭ್ರ ಹದಿಂ ಷೋಡಶವುಟ್ಪಾಡರಿಸುತ್ತ ಮತ್ಯಧಿಕಭಕ್ತ್ಯುದ್ರೇಕ ದಿಂಬೇಡಿದು ಕುಡುತಿರ್ದಂ ರಿಪುರಾಜಭಂಜನಪಗಲ್ಚೋಳಾಖ್ಯ ಭೂಪಾಳಕಂ| ಕಂ|' ಎಡೆಗುಡದೆಚೋಳಧರೆಯೊ| ಳ್ಮೃಡಭವನಂಗಳನನೇಕಮು ದಿನದಿನದೊಳ್ |ಬಡೆಸಮನಿಸುತೀನಿಯಮಂ|ಬಿಡಿದುಪಗಲ್ಚೋಳಭೂ ಪನೆಸೆವುತ್ತಿರ್ದಂ|| |೬|

ಅಂತೀನಿಯಮದಿಂದಿರ್ಪಲ್ಲಿ

ಗದ್ಯ|| ಇದುಶಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜ ರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪ ಶ್ರೀಸೋಮನಾ ಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪು ರಾತನರ ಚಾರಿತ್ರದೊಳ್ಪಗಲ್ಚೋಳಭೂಪಾಳನ ಪಟ್ಟಾಭಿಷೇಕ ಸ್ಥನಿರ್ಣಯಂ

ಏಕೋನವಿಂಶತ್ಯಾಶ್ವಾಸಂ



## ಇಪ್ಪತ್ತನೇಆಶ್ವಾಸಂ

### ಕಂಗುಲಿಕಲಿಯಾಂಡರ ಕಥನಂ

ಜನನುತಶರಣರಕಿಂಕರ | ನೆನಿಪಮಹಾಭಕ್ತಿ ಕಂಗುಲಿಯಕಲಿಯಾಂ
ಡಂ|| ಗನುರಾಗದಿಗಣಪದವಿ| ತ್ತನುಪಮುಸೋಮೇಶನೊಲ್ದು ಪಾಕೆ
ನಪ್ಮಂ| |೧||

ಚಂ| ಹರನನಿವಾಸಮೆಂದೆನಿಪಚೋಳಧರಿತ್ರಿಯೊಳುದ್ಧಕೀರ್ತಿಯಂ
ಧರಿಯಿಸಿಪೆಂಪುವೆತ್ತುಧನಧಾನ್ಯ ಸಮೃದ್ಧಿಗಳಿಂದನೇಕ ಭಕ್ತರನಿಳಯಂ
ಗಳಿಂ ಬಹುಳಲಿಂಗನಿಕೇತನ ಸಂಕುಲಂಗಳಿಂ ಕರಮೆವಿ ರಾಜಿಸುತ್ತೆ
ಪಡಪಿಂಕಡವೂರನಿಪೊಂದು ಸತ್ಪುರಂ] |೨

ಕಂ| ಪಿರಿದೆಸೆವಾಪುರದಾಣ್ಮಂ | ಹರಕಿಂಕರನೆನಿಸಿಕಂಗುಲಿಯಕಲಿ
ಯಾಂಡಂ| ನೆರೆಧನಧಾನ್ಯಸಮೃದ್ಧಿಯಿ| ನುರುವಿ ಭವಮನಾಂತುಮೆ
ರೆದನಾಕಡವೂರೊಳ್|| ||೩||

ನಯದಿಂಗುಗ್ಗಳಧೂಪದ | ನಿಯಮಂಬಿಡದಲ್ಲಿ ಕಂಗುಲಿಯಕಲಿ
ಯಾಂಡರ್|ನಿಯಮಂತಾಳ್ದೀಶ್ವರಭ| ಕ್ತಿಯೊಳೊಲವಿಂದೊಪ್ಪುತಿರ್ದ
ರದನೆಪೊಗಳ್ವೆಂ| ||೪||

ವ| ಅಂತೀಪರಿಯನಿಯಮಮಂಪಿಡಿದುಕಡವೂರಧಿಪತಿಯಪ್ಪಶಿವಲಿಂ
ಗಕ್ಕೆನಿಚ್ಚಂನಿಚ್ಚಮೆರಡು ತೊಲೆಧೂಪಮಂ ಸಮರ್ಪಿಸುತ್ತಂಬಂದ
ಲಿಂಗವಂತಮಹೇಶ್ವರರ್ಗೆ ಬೆಸಕೆಯ್ವುತಿರುತಿರ್ದನಂತುಮಲ್ಲದೆಯುಂ

ಚಂ| ದಿನದಿನದಲ್ಲಿಲಿಂಗಕೆರಡುಂ ತೊಲೆಧೂಪಮನರ್ಪಿಸುತ್ತಿರಲ್ಕೆ
ನರಜತಾದ್ರಿಯಂಮುಸುಕೆ ಶೈಲಜೆಮುಖ್ಯಗಣಂಗಳೆಯ್ದೆ ಕಂಪಿನಸೊ
ಗಸಿಂಗೆವೆಚ್ಚಿ ತಲೆದೂಗಲಿಳಾತಳದಲ್ಲಿ ಕೀರ್ತಿವೆತ್ತನನುಪಮ ಭಕ್ತನೀ
ನಿಯಮಮಂಪಿಡಿದಿರ್ಪ ನುದಾರವೃತ್ತಿಯೊಳ್| |೫|

ಕಂ|| ಹರಪೂಜೆಗೆಯ್ವುತಿಂತೀ | ಪರಿಯಿಂದಂಪಲವುವತ್ಸರಂಭಕ್ತಿಯಿ
ಗ|ಳ್ವರಧೂಪನಿಯಮಮಂಬಿಡದಿರುತಿರ್ದಂಕೂರ್ತುಕಂಗಲಿಯಕಲಿ
ಯಾಂಡಂ| |೬|

ದಿನದಿನದೊಳ್ಪಕ್ಷಂ| ಧನಮೆಲ್ಲಂತೀರೆವೃತ್ತಿವರ್ತನೆಗಳ್ಕಿ! ಟ್ಟನೆ

ತೀರದೀರತನದಿಂ| ಮನವನಿತಾಂತೀರದಿರ್ದನಂತಾ ಭಕ್ತಂ|| |೭

ವ|| ಅಂತೀಪರಿಯಲ್ಲಿಗುಗ್ಗಳಧೂಪದನಿಯಮಮಂ ಪಿಡಿದಿರ್ಪ ಕೆಂಗು
ಲಿಯ ಕಲಿಯಾಂಡರ ಮನಮನೊರೆದು ನೋಡಲ್ಕೆಂದಿಂತು ಧರಂಬ
ತನಮಂಪತ್ತಿಸೆ||

ಕಂ| ಪರಿಕಿಪೊಡೆಬಡತನಂಪ | ತ್ತಿರೆನಿಯಮದಧೂಪಕರ್ಥಮದು
ದೊರಕದಿರಲ್| ಪಿರಿದುಪವಾಸಂಬಡುತಾ| ದರದಿಂ ಭಂದಿಂದ ವಿಮ
ನಾಶಿವಭಕ್ತಂ| |೮

ಪಲವುಂಕೆಲವುಪವಾಸಂ| ಸಲೆಪತ್ತುತಿರಲ್ಕೆ ಲಿಂಗನಿಯಮದಧೂಪಕ್ಕೆ
ಲವಿಂಘನಧನಮಂಘಳಿ || ಸಲೆಂದುಪೊರಮಟ್ಟನಾತ್ಮಪುರಮಂ ಭಕ್ತಂ

ವ| ಅಂತುಪೊರಮಟ್ಟುಕಂಗುಲಿಯ ಕಲಿಯಾಂಡಂನಾನಾಶಿವಪುಂ
ಗಳಂಪರಮಾನುರಾಗದಿಂನೋಡುತ್ತಂ ತಿರಿಪಿನಂಡನಮೆಂಬಪುರಕ್ಕೆ ಬಂ
ದಿರ್ದನ್ನೆಗಂ||

ತರಳವೃತ್ತಂ| ತಿರಿಪಿನಂಡಪುರಾಂತದೊಳ್ ಲಿಚೋಳಭೂಪತಿನ
ಯಿಂ ವರಶಿವಾಲಯಮೊಂದನರ್ಥಿಮಿಗಲ್ಕೆ ಬಂಧುರಕಾಂಚನೋ
ರವಿನಿರ್ಮಿಸೆನೋಡಲುತ್ತರ ದಿಗ್ವಿಭಾಗಕೆಲಿಂಗಮಾ ಸ್ಮರದೆಕೆ
ರೆಕಂಡುಚೆಂತಿನಿಬಾತಿಯುಂ ನೆರೆತಾಳ್ದಿದಂ| ||೯

ವ|| ಅಂತುಖತಿ ಯಂತಾಳ್ದಿಂತಪ್ಪದಿವ್ಯಲಿಂಗಂಕೊಂಕಿಪುದಾದ
ಕಟೆನುತ್ತೆಡಬಲ ನನಗುಳ್ದಹಾ ರೆಯಂದೊತ್ತಿ ನೋಡಲ್ಕಿಡುಂಕು
ಪುದಂಪಗಲ್ಚೋಳರಾಜಂ ಕಂಡಚ್ಚರಿವಟ್ಟಾಸಮಯದೊಳ್||

ಕಂ| ಪೊಸಕಜ್ಜಗಳಿಂಲಿಂಗಮು| ನಸವಸದಿಂಸುತ್ತಿಮೂರುಘಟಿಯಾ
ನೆಗಳಿಂ | ಮಸಗಿಕಲಿಚೋಳವಿಭುತೆಗೆ | ಯಿಸೆದಿಟದಿಟಯೆನುತೆಪರಿ
ದುಮುಗ್ಗಿದುವಾಗಳ್|| ||೧೦

ಅಂತದನೀಕ್ಷಿಸಿಕಲಿಚೋ| ಳಂತನ್ನಯಮಂತ್ರಿಗೆಂದನಕಟಕಲಿ
ದೆಂ| ದುಂತೆರಳದಚಲಲಿಂಗಮು| ನಿಂತಲ್ಲಾಡಿಸುವೆ ನೆಂಬನಾಂಮರು
ಳಲ್ತೇ|| ||೧೧

ಎಂದುಮನ್ತುಮಿಂತೆಂದ||

ವ|| ಹರಿಬೊಮ್ಮಾದಿಗಳಸಾಧ್ಯಮಪ್ಪ ಶಿವಲಿಂಗಮನಾಂಸೈತಿಪೆನೆ
ದೆಂಬುದೆನ್ನ ಳಪಲ್ಲವಿ ದಕೆಂ...ಕ್ಕೆ ಮಂ ಮಂಕಂಡನೆಗೆ...

ಚಂ॥ ಕರೆದೆಡೆಬರ್ಪನಾಲಯದ ಬಾಗಿಲೊಳಿರ್ಪನಲಂಬದಿಂಕರಾಂ|
ಬುರುಹದೊಳಿರ್ಪ ನಾಡರದೆಬೆಂಬಳಿಯೊಳ್ಪರುತಿರ್ಪ ನದ್ರಿಜಾವರ
ನೆನೆಲಿಂತು ಭಕ್ತರೆಸಮರ್ಥರವರ್ಗಳ ಕೈಗಳಿಂದನೀ | ವರಶಿವಲಿಂ
ಗಮಂ ಸಸಿನೆಗೆಯ್ದುಸ್ವವೆನೆಂದೆನುತಿರ್ದನಾನೃಪಂ॥ |೧೩|

ವ| ಅಂತುಪಗಲೊಳ್ಬೇಳರಾಜಂ | ನಿಜಮಂತ್ರಿಯಪ್ಪಗಾಂಗೇಯನೊ
ಳ್ನಿಶ್ಚಯಿಸಿ ನಾಲ್ಕುಂಗಾವಿದಪೊನ್ನಪೊಟ್ಟಣ ಮಂಶಿವದ್ವಾರದವಮುಂ
ದೆಕಟ್ಟರಿಸಿಚರರಂಕರೆದು ತದ್ವೃತಾಂತಮಂಪೇಳ್ದು ನಿಯಾಮಿಸಲ್ಕಾ
ಗಳ್॥

ಕಂ॥ ಹಿಂಗಡೆಬಡಗಲ್ಕೊಂಕಿದ | ಲಿಂಗಮನುರತಿರ್ದಿಕಿತ್ತುಪೊಸ
ಪೊಟ್ಟಣದೀ| ಪೊಂಗಳಪಡೆವುದೆನುತ್ತೆಜ | ನಂಗಳ್ಗೆ ಚರಾಳಿಸಾರುತಿ
ರ್ದತ್ತಾಗಳ್ |೧೪|

ವ| ಅಂತುಸಾರುವಚರರಮಾತಂ ಕೇಳ್ದುಕಂಗುಲಿಯಕಲಿಯಾಂಡ
ಸಂತಸಂಬಟ್ಟೆನ್ನಕಜ್ಜಮಾದುದೆನುತ್ತಂ ಪೊರಮಟ್ಟಾಗಳ್|

ಹರಿಣೀವೃತ್ತಂ॥ ಚಲದಿನಿಯಕ್ಕಾತ್ತಮಿಕ್ಕೆಂದು ನಿಲ್ಲದೆಬಂದುಕಂ|
ಗುಲಿಯಕಲಿಯಾಂಡಂ ಕಂಡಾಲಿಂಗಗೇಹದಬಾಗಿಲೋ| ಳ್ಕಾಲವು
ಮಂಯಿಗಲ್ಕಟ್ಟಿರ್ದಪೊನ್ನಪೊಟ್ಟಣಮಂ ಕರಂನಲಿದುಪರಿದಂಥೋಪಕ್ಕಾ
ಯ್ತೆಂದೆನುತತತ್ರವೇಗದಿಂ॥ |೧೫|

ವ| ಅಂತುತಾಂಪರಿದಪೊಟ್ಟಣದ ನಾಲ್ಕುಸಾವಿರಪೊಂಗಳಂಕೊಂಡಂ
ಗಡಿಯಂ ಪೊಕ್ಕಾಗಳ್

ಕಂ| ತಳಃವಿಡಿಯುಬೆತೆಂದಾಪೊಂ| ಗಳನೊಲವಿಂಕೊಟ್ಟುಕೊಂಡ
ಕೊಂಡನಿಜನಿಯಮದಗುಗ್ಗುಳಧೂಪದಪೊರೆಗಟ್ಟಸಿ|ಘಳಿಲನೆಶಿವಮಂ
ದಿರಕ್ಕೆಬಂದಂಭಕ್ತಂ| |೧೬|

ವ |ಅಂತುಬಂದುತತ್ಶಿವಮಂದಿರಮಂಪೊಕ್ಕುಪರಮಾನುರಾಗದಿಂದಾ
ಗವೋಕ್ತಿಯಿಂ ವಿಭೂತಿರುದ್ರಾಕ್ಷಿಗಳಂ ತಾಳ್ದು ಮಾಶಿವಲಿಂಗಕ್ಕತು
ಳಭಕ್ತಿಯಿಂ ನಾನಾಪುಷ್ಪಸಂಕುಳದಿಂ ದತ್ಯಾನ್ನತಮಪ್ಪಪೂಜೆಯಂಕ
ಟ್ಟಕಂಗುಲಿಯಕಲಿಯಾಂಡಂನೋಡಿಹಾರೈಸುತ್ತುಬಿಸಿಕೊರ್ಬ್ಬಿಪಲವುದಿ
ನವನಿಯಮದ ಗುಗ್ಗುಳೂಧಪಮನೊಟ್ಟಿಪೊತ್ತಿಕ್ಕಿ ಬಹಳಪರಿಮಳವ
ನವಧರಿ ಪುದುದೇನಾಎನುತಂದಂಪ ಪ್ರಣತನಾಗಿನಿಂ ದಿರ್ದುಕರಕವು

ಳಂಗಳಂ ಮುಗಿದಾಗಳ್‌॥

ಕಂ॥ ಸ್ಮರಹರಪುರಹರತರಣಿಜ। ಹರಗಂಗಾಧರನಗಾತ್ಮಜಾವರಕ
ರುಣಾ। ಕರಶಶಿಶೇಖರಜಯುಜಯು। ಕರುಣಿಪುದೆನ್ನಿಷ್ಟಸಿದ್ಧಿಯಂಭ
ತ್ತೆರಾ। ।೧೪।

ವ॥ ಅಂತುನುತಿಗೆಯ್ದಾಗಳ್ ಶಿವಲಿಂಗಪ್ರಸಾದ ಮಂಕೊಂಡುರ್ಬಿ
ನಲಿವುತ್ತಂಮಿಕ್ಕಪೊಂಗಳಂಶಿವಭಕ್ತರ್ಗಿತ್ತು ಮನಂತರಂತದ್ಭಕ್ತಂ
ಗದೆಸೆಗೆ ಕೊಂಕಿರ್ದಲಿಂಗಮಂನೋಡಿಸ ದ್ಭಕ್ತಿಯಿಂದೆ ಲಿದೇವ
ದಿವಸಮಿಂಪರಿಯೊಳ್ಪಾಗಿರಲ್ದೇವರಸಕೋಮಳಶರೀರಂ ನೋಯ
ನ್ನಿಭಕ್ತರ್ಗೆನಸಿ ನವಾಗಿರ್ಪ ನೆಂಬುದಂತೆೋರಲಾ ಗದೆನುತ್ತಂ
ತ್ತಿದೊಳ್ಪರಿಚ್ಛೇದಮಂ ತಾಳ್ದಾಗಳ್। ।೧೮।

ಕಂ॥ ಪಳಯಂಬಿಗಿದುಟ್ಟತಿನಿ। ರ್ಮಳಭಸಿತಮನೊಪ್ಪಿರ್ದೇಹ
ಳ್ತೆಳೆದಾಗ। ಳ್ಥಳಥಳಿಪಬೊಮ್ಮಹಾಸಮ ನಿಳೆಬೆದರಲ್ಕೊರಳೊಳ್
ಕೊಂಡಂಭಕ್ತಂ ।೧೯।

ವ ಅಂತದಂಪಗ ಲ್ಕೊೀಳರಾಜ ನಚ್ಚರಿ ವಟ್ಟೀಕ್ಷಿ ಸುತ್ತಿರಲ್
ಲಿಯಕಲಿಯಾಂಡಂ ವೀರೋದ್ರೇಕಭಕ್ತಿಯಿಂ ಕೊಂಕಿದಲಿಂಗದ
ರಸಾದರ್ಾದರ್ಬೊಬ್ಬಿರಿವುತ್ತಾಗಳ್

ಮ॥ ಅಥಟಂದಂಪೊಸಪಟ್ಟು ನೂಲಗುಣದಿಂತಲ್ಲಿಂಗಮಂ ಸುತ್ತಿ
ಟ್ಟಿದತದ್ಗಿ ೯ವದ ಬೊಮ್ಮಹಾಸಮನದಂ ಸೈತಾಗೆನುತ್ತಾರ್ದು
ದಿದೊಡಾ ಕೊಂಕಿದ ಲಿಂಗವೊಲ್ದೊಡನೆ ಬಂದಂತಾಕ್ಷಣಂ
ವೆತ್ತಿದಿ ರೊಳ್ಸೈತಿರೆಕಂಡುಪೆರ್ಚನಲಿದಂ ತದ್ವೀರಮಾಹೇಶ್ವರಂ।
ಆಗಳ್

ಕಂ॥ ತಲುವದೆಸೈತಾಗೆಮಹೋ! ತ್ಪಳರಿಪುಧರನಂದುಕಂಗುಲಿಯ
ಯಾಂಡಂ। ತಳೆದಿರ್ದಬೊಮ್ಮಹಾಸದ ॥ ಗಳವುಂಪಿಡಿದೊಲ್ದು
ಡೋರಿದನಾಗಳ್। ॥೨೦

ಪಿಂಗಳೆಜಟಿಬಾಂದೊರೆಯುರೆ। ದಿಂಗಳ್ಫಣೆಗಣ್ಣ ಳೆಸೆಪಪಂಚವ
ಗ॥ ಳ್ತುಂಗದಶಬಾಹುಕಂಜಿಸೆ। ಲಿಂಗಂನಿರಿಜಾತೆಗಾಗ ಳಂದಿಂತೆ
ತನ್ನಯಥೂಪದನಿಯುಮಕ॥ ಪೊನ್ನಂಕೊಂಡುವರ್ಿಯರಸ
ಸುತಿರಲಿಂ। ದೆನ್ನಯುಕೊಂಕುಗಳೆದನೆನು ಲಿನ್ನೀತಂಗಾರ್ಸಮಾನ

ಧನ್ಯವೇಶಂ। 

೨೧।

ವ॥ ಅಂತುಪೇಶಂಕಂಗುಲಿಯ ಕಲಿಯಾಂಡರಭಕ್ತಿಯನೆರವಣಿಗೆ ಯಂ ಪೊಗಳ್ದು ಕೊಂಡಾಡುತಿರ್ಪಾಗಳ್॥

ಕಂ। ಘೋರನೆಘೂಮುಳಿಗರೆಯುಲ್ । ವೋದಂತಮರಾನಕವ್ರಜಂಗಳ್ಮೊಳಗಲ್। ಚಾರುಮಣಿಪುಷ್ಪಕಂಗಿರಿ। ಜಾರಮಣನನಿಯಮದಿಂದೆಬಂದುತ್ತಾಗಳ್॥

॥೨೨॥

ವ॥ ಅಂತುಬಂದದಿವ್ಯವಿಮಾನದೊಳ್ಕಂಗುಲಿಯಕಲಿಯಾಂಡರಂಶಂಕರಂ ಪರಮಕರುಣದಿಂಕುಳ್ಳಿರಿಸಿ ನಿಯೋಮಿಸಲ್ಕಾಗಳ್

ಚಂ। ತೊಳಪವೃಷೇಂದ್ರಕೇತು ನಪದೊಳ್ಮೆರೆಯಲ್ದಿವಿಜಾಂಗನಾಳಿಮಂ। ಗಳಮಯನೃತ್ಯಮಂಪ್ರಕಟಿಸಲ್ಕಸುರಾಗದಿವೇಪಪಾತಕಾವಳಿಪೊಗಳಲ್ಕೆ ತತ್ಪರಮಭಕ್ತಸಮೇತ ವಿಮಾನಮುಂದುಮು ಜ್ವಳರಜತಾಚಳಕ್ಕಿರದೆಬಂದುದು ಭವ್ಯಮಹೋತ್ಸವಂಗಳಿಂ ॥೨೪।

ವ॥ ಅಂತುಬಂದಕಂಗುಲಿಯಕಲಿಯಾಂಡಂಚಿರಸು ಕೈಲಾಸಸಭಾಮಂಟಪದೊಳ್ಗಿರಿಜಾರಮಣ ನೋಡ್ದೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ। ಇಂದುಧರನೊಲ್ದುಸುಮನೋ। ವೃಂದಂಪೊಗಳಲ್ಕೆ ಕಂಗುಲಿಯಕಲಿಯಾಂಡಂ। ಗಂಪುಗಣಪದಮನಿತ್ತಾ। ನಂದದಿನೆಸೆವುತ್ತಮಿರ್ದನಾಸ್ಥಾಯಿಕೆಯೊಳ್॥ ॥೨೫।

ಭರದಿಕಂಗುಲಿಯಕಲಿಯಾಂ। ಡರನಭವಂರಜತಗಿರಿಗೆ ಕೊಂಡೊಯ್ದಿಲ್ಕಾ। ಚ್ಚರಿವಡುತೆಪಗಲ್ಗೋಳಂ। ಕರಿಯಾರ್ಗಂಬಂದಿಳಾಧಿಪತ್ಯದಿಮೆರೆದಂ॥ ॥೨೬॥

ಇದುಸಕಲ ಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜ ಶ್ರೀಮತ್ಪಾಲಿಗೆರೆಯಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪತ್ರಿಷಷ್ಟಿಪುರಾತನರಚಾರಿತ್ರದೊಳ್ಕಂಗುಲಿಕಲಿಯಾಂಡ ಮಾಹೇಶ್ವರಕಥಾವೃತ್ತಾಂತಂಪಂಚತ್ರಿಂಶತ್ಯಾಶ್ವಾಸಂ



## ಇಪ್ಪತ್ತೊಂದನೆಯ ಅಶ್ವಾಸಂ

### ಊರ್ಧ್ವಶಿಲೆಯಾಂಡರಕಥನಂ

ಊರ್ಧ್ವಶಿಲೆಯಾಂಡಪಿಭುವಿನ| ಕೂರ್ಪಿನಭಾವಕ್ಕೆ ಮೆಚ್ಚಿ ಗಣಪದವಿತ್ತಾ| ಸರ್ವವಿಭೂಷಣಗಣಮುಖ|ದರ್ಪಣಸೋಮೇಶ ನೋಲ್ದುಪಾಲಿಕೆನಮ್ಮಂ|| ||೧

ಪರಮಾನಂದದಿಚೋಳೋರ್ವರೆಯೊರ್ವರಯೋಗಿವೇಷವಂತಾಳ್ದಿತ್ತು| ದರದಿಂಭಕ್ತರಸಂಗದೊ| ಳಿರುತಿರ್ಪನೋರ್ವನೊಪ್ಪದೂರ್ಧ್ವಶಿಲೆಯಾಂಡಾಖ್ಯಂ| |೨

ವ|| ಅಂತೀಪರಿಯೊಳೂರ್ಧ್ವಶಿಲೆಯಾಂಡಶಿವಯೋಗಿಚೋಳದೇಶದೊಳ್ಪರಮಾನಂದದಿಂದಿರುತ್ತಮೊಂದು ದಿವಸಂ|

ಕಂ|| ಕಾಗದೊಳ್ತಾಳ್ದಿದಲಾಕುಳ| ಮುರುತರದಿಂದಾಂತಯೋಗಪಟ್ಟಗೆಕಾಶಾಂ| ಬರಮೆಸೆಯಲ್ಸಿಲೆಯಾಂಡಂ| ಕರಿಯೂರ್ಗಂಬಂದನುತ್ಸವಂಮಿಗಲಾಗಳ್|| ||೩

ವ|| ಅಂತುಬಂದೂರ್ಧ್ವಶಿಲೆಯಾಂಡ ಶಿವಯೋಗಿತತ್ಪುರದಪೊರವೊಳಲನೆಳಲೊಳರಲಿತ್ತು ಲ್ಕರಿಯೂರಧಿಪತಿಯಪ್ಪ ಪಗಲ್ಚೋಳರಾಜಂಮಹಾಭಕ್ತಿಯಿಂ ಶಿವಲಿಂಗಪ್ರತಿಷ್ಠೆಯಂ ಮಾಳ್ಪೆನೆಂದುಶಿಲ್ಪಶಾಸ್ತ್ರವಿದರಪ್ಪಾಚಾರ್ಯರಂಬರಿಸಿ ದಿನದಿನದೊಳ್ಮಹೂರ್ತಿ ಕರ್ವರಸು ನೆಲಗಟ್ಟುಶೋಧಿಸಲ್ಕು ದ್ಯೋಗಮಂತಾಳ್ದಿರ್ಪಾಗಳ್||

ಕಂ|| ಧರಣಿಪತಿನವ್ಯಶಿವಮಂ|ದಿರಮಂಮಾಳ್ಪನುವನೂರ್ಧ್ವಶಿಲೆಯಾಂಡಂಕೇ| ಳ್ದುರುತರಹರುಷದಿತನ್ನಂ|ತರಂಗದೊಳ್ಬಗೆದನತುಳಕಾರ್ಯಮನಾಗಳ್|| ||೪

ವ|| ಅಂತಾಕಾರ್ಯಮಂಮನದೊಳ್ನೆನೆದುಶಿವಾವೇಷದಿಂದೂರ್ಧ್ವಶಿಲೆಯಾಂಡಾಖ್ಯ ಶಿವಯೋಗಿಮತ್ತಮಾಪಗಲ್ಚೋಳರಾಜಂ ದೇವಾಲಯಮಂ ಸಮೆಯಿಸುವತಾವಿಂಗೆಬಂದೊಂದ ಶೋಕಭೂರುಹದತಣ್ಣೆಳಲೊಳ್ಕುಳ್ಳಿರ್ದಾಗಳ್||

ಕಂ|| ನರಪತಿಧರೆಯೊಳ್ಶಿವಮಂ| ದಿರಮಂಸಮೆಯಿಪ್ಪಲ್ಕೆತನ್ನದೇಶ

ದೊಳಾಂಬಿ॥ತ್ತ್ರರಿಪೆಂಶಿವಗೃಹಮನೆನ್ನ ।ತ್ತಿರದುದ್ಯೋಗಿಸಿಶಿವೈಕ್ಯನಿರಲಂತಾಗಳ್॥ ೫॥

ವ॥ ಅಂತೂರ್ಧ್ವಶಿಲೆಯಾಂಡಾಖ್ಯ ಯೋಗಿನಿಜದೇಹದೊಳ್ ಶಿವಗೃಹಮುಂ ವಿರಚಿಪೆನೆಂದುದ್ಯೋಗಿಸಿರಲಿತ್ತಲ್ ಪಗಲ್ವೊಳರಾಜಂ ತದ್ದೇಶದೊಳಗುಳ್ಳ ವಾಸ್ತು ವಿದ್ಯಾನಿಪುಣರೆನಿಪವಿನ್ನಾಣಿಗಳ್ವೆರಸು ಶುಭಮುಹೂರ್ತದೊಳ್ನೆಲನಂ ಶೋಧಿಸಿ ಪಚ್ಚೆಯ ಪಾದಶಿಲೆಯುಂ ಬಿಗಿದು ವಜ್ರಸ್ತಂಭಂ ಸ್ಥಾಪನಂಗೆಯ್ದು ಸುವರ್ಣದಭಿತ್ತಿಯುಂ ನಿರ್ಮಿಸಿ ಚಂದ್ರಕಾಂತದ ತೊಲೆಗಳಂ ಪಾಸಿನೀಲದ ಜಂತೆಗಳನಿಕ್ಕಿ ಪುಷ್ಯರಾಗದ ಲೋವೆಯುಂ ವಿರಚಿಸಿ ಮೌಕ್ತಿಕದ ಸೂಸಕಂಗಳ ನಳವಡಿಸಿ ಪದ್ಮರಾಗದ ಕಳಶಮಂ ಕೆತ್ತಿಸಿ ಶಿವಾಗಮಿಕಾಚಾರ್ಯರಿಂ ಶಿವಲಿಂಗಪ್ರತಿಷ್ಠೆಯುಂ ಮಾಡಿಸಿ ಪಂಚಮಹಾವಾದ್ಯ ಸಂಭ್ರಮದೊಳ್ಪರಮ ಹರುಷದಿಂ ಭಕ್ತಿಮಿಗೆ ನೆರೆದಿರ್ದ ಮಾಹೇಶ್ವರರ್ಗೆ ಬೇಡಿದ ಪೊಂಗಳಂ ಕೊಟ್ಟು ಸಂತುಷ್ಟಿ ಪಡಿಸುತ್ತಿರಲಿತ್ತಲ್

ಮ॥ ಪಿರಿದಾವೇಶದ ಭಕ್ತಿಯಿಂದ ಮೊಲವಿಂ ತದ್ದೇಹದೊಳ್ ದೇವಮಂದಿರಮಂ ನಿರ್ಮಿಸಿ ಭಾವದಿಂದೆ ಶಿವಲಿಂಗಸ್ಥಾಪನಂಗೆಯ್ದು ಸಾದರದಿಂ ದಾಬುರ್ಜತೆ ಕೊಬ್ಬಿ ತೂರ್ಧ್ವ ಶಿಲೆಯಾಂಡಂ ನಲ್ಮೆಯಿಂ ನರ್ತಿಸುತ್ತಿರೆ ಕಂಡರ್ ಜರಗ್ಗಾಗಿ ಬಂದು ಬೆಸಗೊಂಡ ಪೂರ್ಣಾಡಾಕ್ಷಯರ್ದಿಂ। ।೬॥

ವ॥ ಅಂತಾಪಲ ಜನಪುರಜನಂಗಳ್ಬಳಸಿ ಬರಿದೆನಲಿದು ನರ್ತಿಸುವ ಕಾರಣವೇನೆಂದು ಬೆಸಗೊಳುತ್ತಿರ್ಪುದಂ ಪಗಲ್ವೊಳರಾಜಂ ಕಂಡು ತಾನಲ್ಲಿಗೆಯ್ದು ವಂದಿಡೇಂ ಶಿವಯೋಗಿಗಳೆ ಪಿರಿದಪ್ಪ ಸಂಭ್ರಮದಿಂದಬ್ಬರಿಕೊಬ್ಬಿರ್ಪ ಕಾರಣವಿದೇನೆಂದು ಬೆಸಗೊಳಲಾತನಿಂತೆಂದಂ॥

ಕಂ॥ ಧರೆಯೊಳ್ ಲಿಂಗಾಲಯಮಂ। ಧರಣಿಪ ನೀಂ ಸಮೆಸಿದಂದದಿಂದೆನ್ನ ಕಳೇ। ವರದೊಳ್ ಶಿವಮಂದಿರಮಂ। ವಿರಚಿಸಿದುತ್ಸವದಿ ನಲಿವುತಿರ್ದಪೆನೆಂದಂ॥ ॥೭।

ವ॥ ಎಂಬಾ ಮಾತಿಂಗೆ ಶಿವಯೋಗಿಗಳೆ ಕೇಳಿಮಾಂ ಮಾಡಿದ ಶಿವಲಿಂಗಮಂದಿರವ ಜಲ್ವಂ ಜಗಮೆಲ್ಲಂ ಕಂಡತ್ತು ನೀಂ ದೇಹದೊಳ್। ಮಾಡಿದ ಶಿವನಿಳಯಮಂ ನಾರುಂ ಕಂಡುದಿಲ್ಲಮೆನಲೆನ್ನೊಳ್ವೊಡಂತೆ ಪೇಳ್ವೆನೆಸುತ್ತಾಗಳ್।

ಕಂ॥ ಧರಣೀನಾಥಂನೋಡು। ತ್ರಿರೇಕಾರಲಗಿಂದಮೂರ್ಪ್ವಶಿಲೆಯಾಂ ಡಂನಿರ್ಭರಭಕ್ತಿಭಾವದಿಂತ। ನ್ನರಮಧ್ಯಮನಿರಿದುಸೀಳ್ದು ತೋರಲ್ಕಾಗಳ್॥ ।೮।

ಚಂ। ಒದವಿದಪಚ್ಚೆಯಿಂ ಸಮೆದವೇದಿಕೆವಜ್ರನಕಂಭಮಿಂದುಕಾಂತದತೊಲೆನೀಲದಿಂನೆಗಳ್ದಜಂತೆಸುವರ್ಣದಭಿತ್ತಿ ಪುಷ್ಯರಾ। ಗದಪ್ರೋಸಲೋವೆಮೌಕ್ತಿಕದಸೂಸಕ ಮಗ್ರಪೊಳರ್ಪ ಪದ್ಮರಾ।ಗದಕಳಶಂ ರಾಜಿಸುತೆದೇಹದೊಳೊಪ್ಪಿ ತುಲಿಂಗಮಂದಿರಂ॥ ।೯।

ಕಂ॥ ನರಪತಿಕಂಡಚ್ಚರಿಯಿಂ। ಪರವಶನಾಗಲ್ಕೆ ಶರಣನೊಡಲೊಳ್ ಗಣಮಂ। ದಿರದಿಂದಂಪೊರಮಟ್ಟೇ। ಶ್ವರಿಯಾಳ್ದಂಮೆಚ್ಚಿರೂಪುದೋರ್ದನಾಗಳ್॥ ।೧೦।

ಎಳೆವೆರೆಬಾಂದೊರೆಕೆಂಜಡೆ, ತೊಳಗುವನೃಕರೋಟಮಾಲೆಘಸಿತಂ ಘಣಿಕುಂ। ಡಲಯುಗಮುರಿಗಣ್ಗಳ್ಕಂ। ಗೊಳಿಸೆಶಿವಂದಿವ್ಯಮೂರ್ತಿಯಿಂದೆಸೆದಿರ್ದಂ॥ ॥೧೧

ವ॥ ಅಂತೆಸೆವದಿವ್ಯಮೂರ್ತಿಯಂ ಕಂಡುಭಯಚಕಿತಹೃದಯನಾಗಿ ಪರಮಾನಂದಾಶ್ರುಜಳಪೂರಿತನಯನನಾಗಿಪೊಗಳಲ್ಕರಿಯದೆಗದ್ಗದಕಂಠನಾಗಿಭಕ್ತಿಯಿಂ ಚರಣಕಮಲದೊಳ್ಪಗೆಗೆಡದಿದೂರ್ವಶಿಲೆಯಾಡಾಖ್ಯಸಂಪ್ರಾರ್ಥತೀವರಂಪಿಡಿದತ್ತಿ ಕಾಳ್ಗರಿಸಿವಜ್ರದೇಹಮಪ್ಪಂತೆಸೆಯ್ದುಡವುತ್ತಂ ನಂದಿನಾಥಂಗಿಂತೆಂದಂ।

ಕಂ॥ ಧರೆಯೊಳನೇಕರ್ಮರ್ನ್ನ। ಜಿರಮಂನಿರ್ಮಿಪರದಲ್ಲದಾತ್ಮಶರೀರಾಂ ತರದೊಳೆನಗಾಲಯಮನಾ। ದರದಿಂವಿರಚಿಸಿದಿಮಂಗಡಾರ್ಪೊರೆಧರೆಯೊಳ್। ॥೧೨।

ವ॥ ಎಂದಿಂದುಧರನಾನಂದದಿಂಕೊಂಡಾಡುತ್ತಂತಾಂ ಏರಿಸಿದದಿವ್ಯವಿಮಾನದೊಳೊಪ್ಪ ಶಿಲೆಯಾಂಡ ನಂಕೆರೆದುಕುಳ್ಳಿರಿಸಿಪುಷ್ಪಕ ಮಂನಿಯುವಿಸಲ್ಕಾಸಳ್।

ಕಂ। ಪುರಹರಶರಣಾನ್ವಿತಮಂ। ಬರಪರೆಯುಮರಿಯರನೃತ್ಯದಿಭ್ರೂವಳೆಯಿಂ। ಸುರಚಿರಮಣಿಪುಷ್ಪಕಮಾ। ದರದಿಂರಜತಾಚಳಕ್ಕೆಬಂದುತ್ತಾಗಳ್॥ ।೧೩

ವ॥ ಅಂತುಬಂದೂರ್ವಶಿಲೆಯಾಡಾನ್ವಿತಂ ಪ್ರಮಥಗಣಂಬೆರಸಾ

ರಿಜಾವರನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ॥ ಉರಗಾಧೀಶಂಪೊಗಳು| ತ್ತಿರಘನತರಕ್ಕ ಪೆಯೊಳೂರ್ಜಶಿಲೆ ಯಾಂಡಂಗಂ| ಪರಮುಪದವಿತ್ತುಮೆರೆದಘು | ಕರಿಹರಿಯೆ ನಿಪಫವನೆಸೆದ ನಾಸ್ಥಾಯಿಕೆಯೊಳ್| |೧೪|

ಗಿರಿಜೇಶನೂರ್ಜಶಿಲೆಯಾಂ | ಡರನಾಕೈಲಾಸಗಿರಿಗೆಕೊಂಡೊಯ್ವ ಲ್ಕಾ| ಚ್ಚರಿವಡುತೆಪಗಲ್ಬೋಳಂ| ಕರಿಯುರೊಳ್ಸುಖದಿನಿರುತಿರಲ್ಕಂ ತಾಗಳ್|| |೧೮||

ಗದ್ಯ||ಇದುಸಕಲಸುರನಿಕರಮುಕುಟ ಮಾಣಿಕ್ಯ ಮಾಲಾಮರೀಚಿಪುಂ ಜರಂಜಿತಪಾದಪಂಕಜಶ್ರೀ ಮತ್ಪ.ಲಿಗರೆಯ ಪುರಾಧಿಪಶ್ರೀ ಸೋಮ ನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷ ಷ್ಟಿಪುರಾತನಚಾರಿತ್ರ ದೊಳೂರ್ಜಶಿಲೆಯಾಂಡಮಾಹೇಶ್ವರ ಕಥಾವೃ ತ್ತಾಂತಮೇಕವಿಂಶತ್ಯಾಶ್ವಾಸಂ



## ಇಪ್ಪತ್ತೆರಡನೆಯಅಶ್ವಾಸಂ

### ಇರಿಭಕ್ತರಕಥನಂ

ಪರಘುತಹರನೆನಿಪಿರಿಭ| ಕ್ತರಘನವೀರಕ್ಕೆಮೆಚ್ಚಿಗಣಪದವಿತ್ತಾ ದ ರದಿನುರವೆರೆದಪುಲಿಗೆರೆ| ಪುರಪತಿಸೋಮೇಶನೊಲ್ದುಪಾಲಿಕೆನಮ್ಮಂ

ಕಂ॥ ಅಂತಾಕಲಿಯುಗಂಬಳ,ಪಂತಂವೀರಾವತಾರನೆನಿಸುತ್ತೊ ಪ್ಪಿ| ಕಂತುಹರಭಕ್ತಿಯಿಂವಿ| ಕ್ರಾಂತಿಯಿನಿರಿಭಕ್ತನೆಂಬ ನೋರ್ವಂ ಬಂದಂ| |೨|

ವ|| ಮತ್ತಮಾಗಳ್|

ಕಂ॥ ಶರಣಜನಕಲ್ಪವೃಕ್ಷಂ | ಶರಣಾಗತಪಂಜರಂಸುಭೂಭುಜವಿ ನುತಂ| ಶರಣಜನಾಂಭೋನಿಧಿಪಿಮ | ಕರನೆನಿಸುತ್ತಿಪ ನಪರಿನಿಂ

ದೀಭಕ್ತಂ॥ |೪|

ಶಿವನಿಂದೆಗಳಂಕೇಳಂ। ಶಿವಧಾಯೆಂದೆಂಬದೂರನಾಲಿಸಿಕಾವ್ಯ
ಶಿವಭಕ್ತಿಯಪದವಿಲ್ಲದ। ಭವಿಗಳನೊಲ್ಲಂಪ್ರತಾಪನಿಧಿಯಿರಿಭಕ್ತಂ॥

ವ॥ ಅಂತು ಪ್ರತಾಪನಪ್ಪಿರಿಭಕ್ತಂ ಒಂದುಕರಿಯೂ ರಧಿಪತಿಯಪ್ಪ ಶಿವಲಿಂಗಕ್ಕೆ ನಾನಾವಿಧ ದರ್ಶನೆಯಂ ಮಾಡಿದಂಡ ಪ್ರಣಾಮಮಂ ಮಾಳ್ದು ಕೈಗಳಂ ಮುಗಿದೆಲೆಖಂಡಪರಶುವೆ ಕೇಳ್ ಸದಾಚಾರನಿಪ್ತಾಚಾರಗಣಾಚಾರ ಮೆಂದಾಚಾರತ್ರಯಂಗಳುವುದರೊಳ್ ಗಣಾಚಾರಮೆಂಬುದುಗುರುಲಿಂಗನಿಂದೆ ಯುಂಕೇಳದಿರ್ಪುದುದನಾಂ ಕೈಕೊಂಡಿರ್ದಪೆನದಕ್ಕೆತಕ್ಕುಪಾಯುವುಂಬಗೆ ದೊಂದುನಿಶಿತ ಪರಶುವಂ ಕೊಡಿಸಿದನಾಂನಿಮ್ಮ ನಿಯುಮದಿಂ ಪಿಡಿದಿರ್ಪೆನಿಂದಕರ ನಿಳೆಯೊಳ್ಲಿಸಿ ನೀಳಲಮಂಪಾಲಿಪುದೆನಗಿದೇರಾಜ್ಯಸಂಪದಮೆನುತ್ತ ವಂಪೆಗಳೊಳ್ತುಪೊರಮಟ್ಟುವೀರೋದ್ರೇಕದಿಂ ಬೀಳ್ಕೊಂಡುಬರುತ್ತಿದಿರೊಳ್ಬಪ ಲ್ಲಿಶಿವಭಕ್ತರನೊಸಲೊಳೆಸೆವ ಭಸಿತವುಂ ಕಂಡುಹಾರೈಸುತ್ತಂತವ್ವರ ದೊಳಾಶೀರ್ವಾದಮೆಂಬರಂತಲ್ಲಿಗೆ ಪರಿದುಪೋಗಿಶಿವನಿಂದೆಗೈದಪ್ಪ ಕರಂಕಡಿದುಬಿಸುಡುತ್ತು ದ್ದಂಡವೃತ್ತಿಯಿಂತತ್ಪುರ ದೊಳಿರುತಿರ್ಪನಂತುಮಲ್ಲಪೆಯುಂ॥

ಕಂ॥ ಪುರಹರನಭಕ್ತನಲ್ಲದ। ದುರುಳಂತಾನೋರ್ವನಂದುಬರುತಂಗಳ್॥ ಸರಭಸದಿಂದಿರಿಭಕ್ತಂ। ಪರಭಸಿತಮನಿಪಲಿಕೊರಸಿದಂ ಮುಳಿಸಿಂದಂ। |೫|

ವ। ಅಂತುದುರುಳನಪ್ಪ ಪರಸಮಯಿಕಂಡುಗೆರಳಿ ತನ್ನಫಣೆಯೊಳಿಟ್ಟ ವಿಭೂತಿಯಂತಳುವದೊರಸಿಕೊಂಡಿದಿರಾಂತು ಜರಿದುಶಿವನಿಂದೆಯುವ್ವತ್ತಿರಲ್ಕೆರಳ್ದಿರಿಭಕ್ತಂಕೋಪಾಟೋಪದಿಂದವನಮುಂದಲೆಯುಂ ಪಿಡಿದಾಗಳ್।

ಕಂ॥ ಪರಸಮಯಿಗಳೀಕ್ಷಿಸುತಿರೆ ; ಪರಭಸಿತವುನೊರಸಿಕೊಂಡ ಮೂರ್ಖನತಲೆಯುಂ। ಪರಶುವಿನಿಂದಂಕಡಿದಿಳೆ। ಗುರುಳಚೆ ದಂಸೆವಿಜೆದರಲಂದಿರಿಭಕ್ತಂ॥ |೬|

ವ॥ ಅಂತಿರಿಭಕ್ತಂಪರಶುವಿನಿಂತಲೆಗಡಿದು ಬಿದ್ದವನಗೋತ್ರಜನರದುಃಹಾ [illegible] ಪ್ಪತ್ತುಂ [illegible] ಪ್ರೋತ್ತ ಕೊಂಡು

ಜವ್ವಾರವಮುಂದೆ ತಂದಿಳುಪಲದಂ ಕಂಡುದೌವಾರಿ ಕಂಪರಿದುಪೋ
ಗಿನಿಜಾಸ್ಥಾನವೊಳೊಡ್ಡೋಲಗಂ ಗೊಟ್ಟುಕುಳ್ಳಿರ್ದಪ ಗಲ್ಲೋಳರಾ
ಜಂಗೆಮೆಯ್ಯಿಕ್ಕಿ ಪೊಡಮಟ್ಟುತದ್ವೃತ್ತಾಂತವುಂಬಿನ್ನಪಂಗೆಯ್ಯಲ್ಕೇ
ಳ್ದು ಬರಲೆಂದುನಿಯಮಿಸಲ್ಕವಂ ಪೋಗಿಪುಗಿಸಲ್ಕವರ್ಬಂದಿದಿರೊಳ್ನಿ
ಗಡೆದುಬಾಯ್ವಿಡುತೆದ್ದು ಕೈಗಳಂ ಮುಗಿದಿಂತೆಂದರ್।

ಕಂ॥ ನರನಾಥನೆಚಿತ್ತೈಸುವುದು। ಪುರರಿಪುವಿನಭಕ್ತನಲ್ಲವೆಂದೆಮ್ಮವ
ನಂ। ಪರಶುವಿನಿಂದಿರಿಭಕ್ತಂ। ನಿರಾಪರಾಧಿಯನೆಕೊಂದನೆಂದೆನುತಿ
ರ್ದರ್॥ ।೭।

ವ॥ ಎಂದುದೂರುತ್ತಿರ್ದವರಬಿನ್ನಪಮುಂ ಕೇಳ್ದು ಶಿವಭಕ್ತಾಗ್ರಗಣ್ಯ
ನಪ್ಪಪಗಲ್ಲೋಳರಾಜಂತನ್ನಮನದೊಳ್ಮೆಚ್ಚಿಸಿವನಲ್ಲದನ್ಯದೈವಮಿಲ್ಲೆಂ
ದುಪರಸಮಯದವರಂ ಕೊಂದುಶಿವಭಕ್ತಿಯಂಮೆರೆದಿರಿಭಕ್ತನಥಂ
ಕ್ಕೆ ಸಂತಳಂಬಟ್ಟುವಂತ್ತಂದೂರಿದವರ್ಗೆ ತಾನುನ್ನತದಯಾಳುವಾಗ
ಲ್ಕೇಳ್ಕೆಂದುಪಡಿಯರರಂಕರೆದುಬೇಗಂಪೋಗಿತದ್ಭಕ್ತನ ನೋಡಗೊಂಡು
ಬರ್ಪುದೆಂದು ನಿರೂಪಮುಂ ಕುಡಲ್ಕವಂ ಪೋಗಿಯೆ ಲಿಮಹೇಶ್ವರಾ
ನಿಮ್ಮಡಿಗಳಂ ರಾಜೇಂದ್ರಂಬರ ವೇಳ್ಕೆಂದಟ್ಟಿದನೆಂದುಬಿನ್ನಪಂಗೆಯ್ಯ
ಲ್ಕೇಳ್ದುಪಗಲೊಳ್ತಾಳ್ದು ಪರಶುವೆರಸವನೊಡನೆ ಬಂದಾಸ್ಥಾನಮಂಟಪ
ಮಂಪೊಕ್ಕುರಾಜಂಗಭಿ ಮುಖನಾಗಿ ನಿಂದಿರಲ್ಕಂಡಿತ್ತಂ ಬನ್ನಿಮೆಂದು
ಸಮೀಪಕ್ಕೆಕರೆದು ಕುಳ್ಳಿರಿಸಿಬಳಿಕಿಂತೆಂದಂ॥

ಕಂ॥ ಹರಭಕ್ತಾಗ್ರಣಿಕೇಳೀ। ನಿರಾಪರಾಧಿಯನದೇಕೆಕೊಂದಿರಿ
ಯೆಂಬ॥ ನೃಪತಿಗಿರಿಭಕ್ತಂಶೈ। ಪರಬಳಗಂ ಮೆಚ್ಚೆನುಡಿದನಾಸ್ಥಾ
ಯಿಕೆಯೊಳ್ ।೮॥

ಚಂ॥ ನೊಸಲೊಳೆಭಸ್ಮವಿಲ್ಲದಿದಿರ್ಗೊಳ್ಬರೆಕಂಡೊಲವಿಂದ ಮಾಗಲಾ
ಘಸಿತಮನೊಪ್ಪಿಪೂಸಿತೊಡವಂ ತೊಡದೀಶ್ವರನಿಂದೆ ಗೆಯ್ದುಕೋಪಿ
ಸುತೆನಗಾಂತು ನಿಂತದವನಂಕಡಿದಿಕ್ಕಿದೆನುಂಟು ಪಾಳ್ಪುದೇ ನುಸಿ
ರದನೆಂದೊಡಂದು ಗಿರಿಭಕ್ತನಮಾತಿಗೆಮೆಚ್ಚಿದಂನೃಪಂ ।೯॥

ವ॥ ಎಂದಾರಾಜನವಂಗೆಮೆಚ್ಚಿ ಪರಸ ಮುನಿಗಳಂಕೊಲ್ವುದಿದನಿ
ಯಮವೆನೆ ಈ ನಿಯಮಮಾದೊಡೆನಿಮಗೆ ಸಂದಿತ್ತಿನ್ನವಂವಿಭೂತಿಯ
ನಿಟ್ಟಿರೆಮರಳೇಳ್ವನೆಯೆಂದಮಾತಿಂಗಿರಿಭಕ್ತನಿಂತೆಂದಂ॥

ಕಂ॥ ಪಿರಿಮುಂಬಳಗಂವೆರಸೀ। ಶ್ವರಭಕ್ತಿ ಝುನಾಂತುಭಶಿತವಿಶೇ ಶಿವನಂ। ಹರಭಕ್ತರಕೃಪೆಯಿಂದಂ। ಮರಳ್ದಿತ್ತುವೆನೆಂದನೊಲವಿನಿಂ ರಿಭಕ್ತಂ। ೧೧॥

ವ॥ ಎಂದಿರಿಭಕ್ತಂನುಡಿಯಲ್ಕೀಳ್ದ ಪನಬಳಗವೆಲ್ಲಂನಿಜಸಮಯವು ಬಿಟ್ಟುಮನೋಭಾವದಿಂಶಿವಭಕ್ತರಾಗಿಯೆಮ್ಮಯ ಶಿಶುವಪ್ಪೀತನಜೀ ದಾನವುಂಕೊಟ್ಟುರಕ್ಷಿಪುದೆನುತ್ತಂಮೆಯ್ಯಿಕ್ಕಿಬೇಡಿಕೊಳಲ್ಕರುಣದಿ ದಾಗಳ್

ನರಪತಿಬೆರಗಾಗುತ್ತಿರೆ। ಧರೆಯೊಳ್ಬಿದ್ದವನಮೇಲೆನಿಜಚರಣವು ದರದಿಂದಿಡಲಾಗಲ್ಕವ। ನುರಿವೆದ್ದಿರಿಭಕ್ತನಂಘ್ರಿಗಾನತನಾದಂ। ೧೧॥

ವ॥ ಅಂತುತಾಂಜೀವಂಗೊಟ್ಟೆತ್ತಿದವನಂ ಕರುಣದಿಂನೋಡಿವಿಭೂ ಯನಿಟ್ಟು ಶಿವಭಕ್ತಜನಂಮೆಚ್ಚೆ ಪರವಾದಿಗಳ ಕಣ್ಮುಚ್ಚಲಪನಬಳಗ ಲ್ಲರಂಶಿವಭಕ್ತರಂಮಾಡಿಮೆರೆದಿರಿಭಕ್ತರಗಣಾಚಾರದಭಕ್ತಿಯಥಲ ಕೌತುಕಂಬಡುತ್ತಾನಂದಮನೆಯ್ದಿ ಪಗಲ್ಕೋಳರಾಜನಿಂತೆದಂ॥

ಕಂ। ಪರಸಮಯಿಗಳಂಕೊಲ್ವುದು ಬಿರಿದೀಭಕ್ತಂಗೆನುತ್ತೆವಿಭುಸ ರಿಸಲಾ। ಪುರದೊಳಗವರಿವರೆನ್ನದೆ। ನಿರುತಂಶಿವಭಕ್ತರಾದರದನೇ ಳ್ವೆಂ! ॥೧೨॥

ಅನಂತರಂ

ನರಪತಿಯುಂಬೀಳ್ಕೊಂಡಾ। ದರದಿಂದಿರಿಭಕ್ತನೀಶ್ವರನಭಕ್ತಿಯ ನಾ। ಪುರದೊಳ್ನೆಲೆಗೊಳಿಸಿಸಮ। ಸ್ತರನೆಲ್ಲರಭಕ್ತರೆನಿಸಿಮೆರವುತ್ತಿ ರ್ದಂ ೧೪॥

ವ॥ ಅಂತುಪರಸಮಯಿಗಳನುಂಟೆನಿಸಿ ಕೊಲಲುಂಕಾಯಲುಮೀಶ್ವ ರಭಕ್ತರಲ್ಲವೆ ಪೆರರಿಲ್ಲೆಂಬುದಂತೋರುತ್ತಂ ಮಹಾಪ್ರತಾಪದಿಂಶಕ್ತಿ ತಿಸವೆತ್ತಿರುತ್ತೊಂದುದಿವಸಂ ಪ್ರಭಾತಸಮಯದೊಳಿರಿಭಕ್ತಂಶಿವಲಿ ಗಾರ್ಚನೆಯಂ ಮಾಡಿಪರಮಾನಂದದಿಂ ಪುರವೀಧಿಯೊಳ್ಬರುತಿರ್ಪ ಗಳಿತ್ತಲ್॥

ಕಂ॥ ಮೊರೆದೆರಗುವಪರಮೆಗಳೊ! ತ್ತರವೇಳದಮುನ್ನಮೆಯ್ದಿ ಶಿವ ಗಾಮಿಪೊದ। ಲ್ದಿರವಂತಿಗೆಸೇವಂತಿಗೆವಕಚಂಪಕಮುಖ್ಯ ಕುಸುಮತತಿ ಯಂಕೊಯ್ದು॥

ಅಂತು ಕೊಯ್ದು

ಕರಿಯೂರಶಿವನಪೂಜೆಗೆ| ವರಕುಸುಮಂಗಳನೆತಂದುಕರಡಿಗೆಯಂ ತುಂ| ಬಿರದೆಶಿವಗ್ರಾಮಿಯೆಂಬಂ| ಪುರದಂಗಡಿಪೀಥಿಯೊಳಗೆ ಬರುತಿರ್ಪಾಗಳ್| |೧೫|

ಮತ್ತಮಿತ್ತಲ್

ಧುರಗಲಿಚೋಳನಪಟ್ಟದ | ಕರಿವರನಾನೀಲಗಿರಿಯುನಿರ್ಝರಜಲದಂ| ತಿರೆಗಂಡಯುಗಳದಿಂದಂಪರಿವಮದಾಂಬುಗಳಿನೆಸೆದುದದನೇವೊಗಳ್ವೆಂ| |೧೬|

ಮ| ವರದಾನಾಳವಗಂಧಲುಬ್ಧಮಧುಪವ್ರಾತಾರವೋಲ್ಲಾಸಿತಂ| ಕರದೋದಂಚಿತಬಿಂದುಜಾಳಕಯುತಂಸಂಚಾರಿತೋದ್ದಂಡಪುಷ್ಕರರವ್ಯಂಘನಕರ್ಣತಾಳಲಸಿತಂ ಶುಭ್ರಾಂಶು ವಿಸ್ತಾರಿತೋಚ್ಚರದಂ ಲೋಹಿತಲೋಚನದ್ಯುತಿಯಿನುದ್ಯತ್ಕಂಧರಂಸಿಂಧುರಂ| ೧೭||

ವ||ಮತ್ತಮಾಗಜಂ ಸಪ್ತಮದಾವಸ್ಥೆಯೊಂದಾದ ಮಹೋದ್ರೇಕದಿಂ ಮೆಯ್ಮರೆದು ಕಾಯ್ದಿಕ್ಷುದಂಡಮಂಕೀಳ್ವಂತೆಬಾಳ್ಗಂಭಮಂ ಕೀಳ್ತೀಡಾಡಿ ಬಿಸತಂತುವಂಪರಿವಂತೆ ಕಟ್ಟಿದನಿಗಳಂಗಳಂ ಪರಿದಿಕ್ಕಿಕಾಯ್ಪಂ ಕುಶಕ್ಕೆಶಂಕಿಸದೆ ಮಾವಂತರಂಮೆಟ್ಟಿಸೀಳ್ದುಪೋಡರ್ಪಿ ನಿಂದಾರೆಕಾರರಂ ಬೆಂಕೊಂಡಟ್ಟಿಮುಟ್ಟಿನೆಲದೊಳ್ಕಿಟ್ಟೊರಸಿ ಕೆಟ್ಟಾಸುರದಿಂ ಪೊರಮಟ್ಟುಕೆಂಗಣ್ಮಾಸಗಿ ಪುರವೀಧಿಯ ಪಟ್ಟಶಾಲೆಯಕಲ್ಲ ಕಂಭಂಗಳಂ ಶುಂಡಾದಂಡದಿಂ ಪಿಡಿದುಕೆಡಪಿ ಗಜಾಸುರನಂತೆಚಾರಿಪರಿವುತ್ತಿಂ ಬರ್ಪುದಂಕಂಡು ಪುರಜನಂಭಯಂಗೊಂಡು

ಚಂ|| ಎಲೆಎಲೆಪೋಗು ಪೋಗದಡಗಕ್ಕಟಡಂ ಗುರೆಬೇಗಬೇಗಸಾ| ರ್ತೊಲತೊಲಗೆಯ್ದಿತೆಯ್ದಿತಿರಿಯಿತ್ತಿರಿಯಿತ್ತೀಗಿಕ್ಕಲಿಕ್ಕಳಾರ್ದುಲಿವಜನಂಗಳಂಮುಳಿದುಸೀಳ್ದುಸೀಳ್ದುದೆನುತ್ತೆಭೀತಿಸಂ| ಕುಳರಿರದೋಡಲಟ್ಟಿಬರುತಿರ್ದುದು ತತ್ಪುರದೊಳ್ಮದದ್ವಿಪಂ ||೧೮||

ವ||ಅಂತುಪೌರಜನಮನೊಕ್ಕಲಿಕ್ಕಿ ತಾಂಕಡಿಸುತ್ತಂಸೊಕ್ಕಿ ದಿಭೇಂದ್ರಂವೀಧಿಯೊಳಿದಿರಾಗಿಬರ್ಪಶಿವಾಗಮಿಯೆಂಬಶಿವಬ್ರಾಹ್ಮಣನಂಕಂಡು||

ಚಂ||ಪರಿದುಮಹೋಜಪ್ವಪೇಚ್ಚನೆರಿದಟ್ಟಿಬಿಲಾಗಿ ಬಕಿತ್ತು... ಶಂಕರ

ಜದಭಕ್ತನಪ್ಪ ಶಿವಗಾಮಿಯಹಸ್ತಕರಂಡಮಂನಘ್ರಕ್ಕಿರದಿರದೆಯ್ದೆ ತ್ತುಸುಮ ಸಂಕುಳಮುರ್ವಿಯೊಳೆಯ್ದೆ ಚೆಲ್ಲೆ ಕಂ.ಡುರುತರ ಮ ಯ್ದಿ ಶಿವಥಾ ಶಿವಥಾ ಯೆನುತಿರ್ದನಳ್ಕರಿಂ|೧೯|

ಕಂ||ಶಿವಪೂಜಾಗೆತಂದಲರ್ಗಳ|ನವನಿಗೆಕರಿಚೆಲ್ಲಿತಕಟ ಶಿವಥಾ ಯೆ ತಂ,ಶಿವಗಾಮಿಬಿಡದೆ ವೋರೆಯಿಡೆ| ತವಕದಿನಿರಿಭಕ್ತನಿರದೆಕೇಳ್ವ ದಂ | |೨೦|

ಅಂತೇಳ್ತಂದುನೋಳ್ಪನಗಳ್.|

ಧರೆಯೊಳ್ಚಲ್ಲಿದ ಪುಷ್ಪ ...ತ್ಕರಮಂ ಪೊಡಗೆಡೆದುಬಿದ್ದ ಕರದಿಗೆ ಕಂ| ಡುರುತರಕೋಪದಿನಿಭಪುಷ್ಕರಮಂ ನಿಡಿಕಾಯ್ದ ಪರಶುವ ಗೆದಾಗಳ್|| ||೨೧|

ಚಂ|| ಪರಶುವನೆತ್ತಿತತ್ಕರಿಯಶುಂಡಮನಿರ್ಕಡಿಗೆ ಯ್ದವಾಡೆ ಧರೆಗುರುಳಲ್ಕೆಪೊಯ್ದುನಿಡುಮಧ್ಯಮ ನಿಕ್ಕಡಿಮಾಡಿಸೀಳ್ದುಕಂ| ಮನಳುಂಬದಿಂದರಿದುಕೊಂಡಿರಿಭಕ್ತನುದಗ್ರದೂಷಣೋತ್ಕ ಳ್ದು ಕಾಯ್ಪುಮಿಗೆಪೊಬ್ಬಿರಿದಾರು ತಮಿರ್ದನಳ್ಕರಿಂ|| ||೨೨|

ವ|| ಅಂತುಕಡಿಖಂಡಮಾಗಿಬಿದ್ದಿರ್ದ ಗಜೇಂದ್ರನಂಕ..ಡಳು ಮಾರೆಕರ್ವರಿದು ಪೋಗಿನಿಜಸ್ವಾಮಿಯುಪ್ಪ ಪಗಲ್ತೊ..ಳರಾಜಂಗ ಕದಿಂಮೆಯ್ವಿಕ್ಕಿ ಕೈಗಳಂಮುಗಿದೆಲೆದೇವಾ ನಮ್ಮ ಪಟ್ಟದಾನೆಯ ರ್ವಭಕ್ತಂ ಕೊಂದನೆಂದುಬಿನ್ನಪಂಗೆಯ್ವಲಿ ನ್ನಾನೆಯಂ ಕೋ ತಂ ಮರ್ತ್ಯನಲ್ಲೆಂದರಿದೆದ್ದು ಭಯಭಕ್ತಿಯಿಂಪೊರವಟ್ಟು ಡೆಯಿಂ ಬರುತ್ತುಂತಾಶಿವಭಕ್ತನ ಪಾಪಿಯಾನೆಯೇನಂಮಾಡಿತ್ತೋ ಪನೇಬಲ್ಲನೆನುತ್ತುಂ ಗಳಗಳನೆಯ್ದಿ ನೋಳ್ಪನಗಳ್ ಗಜಾಸುರನಂ ದು ಚರ್ಮವನುಗಿದರುದ್ರನಂ ತತಿರೌದ್ರಾಕಾರದಿಂಪರಶುವಂ ದಿರ್ದರಿಭಕ್ತನಂಕಂಡ ಡಿಯೊಳ್ಸೈಗೆಡೆದಿದೆ-ಲಿತಂದೆ, ,, ಭೃತ್ಯಾ ಧಿನಸ್ಸ್ವಾಮಿನೋದಂಡ,, ಮೆಂಬಜಗದನೀತಿಯಿಂದೆನಗಾದುದು ರಣಮಿಂಗಜಕ್ಕೆ ತಪ್ಪಿಲ್ಲಮುಚ್ಚಿರಮನರಿವುದೆಂದು ತನ್ನಕೆ ಡ್ಡಿರ್ದರಾಜಪರ್ಯನುಕಂಡು ಮನಂನೊಂದು||

ಕಂ|| ಇಂತಪ್ಪಭಕ್ತಮರ್ಯನ | ದಂತಿಯನಕಟೇಕೆಕೊಂ ಯಸತ್ವಂ| ಕಂತುಹರ ... |ಜಂತ ...ತ್ತೆನುತ

ನಾಯಿನಿಭಕ್ತಂ ||೨೩||

ವ|| ಅಂತಳಲಿಬಳಲಿನಿಜಬುದ್ಧಿಗೆತನ್ನಮೇಲೆತಾಂಕಡುಕೆರಳ್ದಗಳ್

ಕಂ|| ಕಡುಗೋಪದಿಂದತನ್ನಯ | ಪಿಡತಲೆಯುಂಪೋಪದು ಕಡಿವೆ ನೆಂದೆನುತಿರ್ದಾಗ, ಕೊಡಲಿಯುಂಕೈಯುಂಪಿಡಿದಂ; ಮೃಡನಿರಿಭಕ್ತಂಗೆಕೂರ್ತುಮೆಚ್ಚಿದನಾಗಳ್|| |೨೪||

ಅಂತುಮೆಚ್ಚಿ

ಅಚ್ಚರಿಯಿಂದಿರಿಭಕ್ತನ| ನಿಚ್ಚಟಗಲಿತನದಭಕ್ತಿಯುಗ್ಗಳಿಕೆಗೆತಾಂ ಮೆಚ್ಚಿಶಿವಂಗಣತತಿನೆರೆ| ಪೆಚ್ಚುತ್ತಿರೆತನ್ನರೂಪುದೋರಿದನಾಗಳ್

ಕಿರುಜಡೆನದೀಶಶಿನೊಸಲಗಣ್ಗರೆ, ಗೊರಳಹಿಘಸಿತವೆಡದಶಿವೆಗಜದಜಿನಂ ಮೆರೆವಶಿವನ್ನೈದುಮೊಗದಿಂ | ಮಿರುಗುವದಶಭುಜದಿನೆಸೆದನಂಪೊಲಪಿಂದಂ|| ||೨೫||

ವ|| ಅಂತೀಶ್ವರಂನಿಜಮೂರ್ತಿಯ ನೋಪಿನಿಂದಿರಿಭಕ್ತಂಗೆ ತೋರಿದಾಗಳ್||

ಕಂ|| ಭರದಿಂದಿರಿಭಕ್ತಂಶಂ | ಕರನಡಿದಾವರೆಯೊಳೆರಗಿಸ್ತೈಗೆಡೆದತಿಭ| ಕ್ತಿರಸಾವೇಶದಿನೀಶ್ವರ | ಪುರಹರಕರುಣಾಬ್ಧಿಜಯಯೆನುತ್ತಂ ಪೊಗಳ್ದಂ|| ||೨೬|

ವ|| ಅಂತುಪೊಗಳ್ದಿರಿಭಕ್ತನಂ ಕಾರುಣ್ಯಾವಲೋಕನದಿಂನೋಡಿ ನಂದಿನಾಥಂಗಿಂತೆಂದಂ||

ಕಂ|| ಹರಭಕ್ತಂಶಿವಧಾಮನೆನೆ, ಪಿರಿದಂಜದೆನೃಪನಗಜವನಿರಿದಿಕ್ಕಿದನ| ಚ್ಚರಿವಿಗಲಿರಿಭಕ್ತನೆನಲ್ | ದೊರೆಯಾರೀತಂಗೆಧರೆಯೊಳೆಂದನುಮೇಶಂ|| |೨೭||

ವ|| ಅಂತುಮೇಶನಿರಿಭಕ್ತನ ಗಣಾಚಾರದ ಛಲಮಂನಂದಿನಾಥಾದಿ ಪ್ರಮಥರ್ಗೆಪೇಳುತ್ತೊಲಪಿಂದಾ ಪಗಲೊಳಾಜನಸದ್ಭಕ್ತಿಗೊಲ್ದು ಕಡಿಖಂಡವಾಗಿಬಿರ್ದ ಪಟ್ಟದಾನೆಯುಂಜೀ ವಂಗೊಟ್ಟೆತ್ತಿಮುದವಾಸಿತ್ತನಂದವಾದ ನಾಗಿಪಾ. ಗಳ್,

ಕಂ|| ತೊಳಪಮಣಿಕಳಶತತಿಯಿಂ | ಪೊರ್ವರ್ಪುಷ್ಪವೃಷ್ಟಿಜಿನಪುರ ಜಯಜಯರವದಿಂ! ಒಳಸಿಸುರರಿಂಪೆಸೆವು| ತ್ತಿಳೆಗೆಳ್ತು, ದಾತ್ತದಿವ್ಯಪುಷ್ಪಕಮಾದಳ್||

ವ|| ಅಂತುಬಂದದಿವ್ಯವಿಮಾನ ದೊಳಾನಂದದಿಂದಿರಿಭಕ್ತನಂಕುಳ್ಳಿ
ಸಿಶಂಕರಂನಿಯಾಮಿಸಲ್ಕಾಗಳ್||

ಚಂ|| ನೆರೆದೊಲವಿಂಸಿರೀಕ್ಷಿಸುತೆ ಜೋಳಧರಿತ್ರಿಯಭಕ್ತಜಾಲಪ
ಚ್ಚರಿವಡಲಂ ಬರಕ್ಕೆನೆಗೆದಾಯಿರಿಭಕ್ತಸಮೇತ ಪುಷ್ಪಕಂಸುರುಚಿ
ಕಾಂತಿಯಂ ಕೆದರುತಂವೃಷಭಧ್ವಜವೊಪ್ಪೆ ತಾರಘೋಷರಕವು
ರಾನಕಂ ವೊಳಗೆಬಂದುದುಮಂಗಳದುತ್ಸವಂಗಳಿಂ|| ||೪೧||

ವ|| ಅಂತುಬಂದುಕೈಲಾಸಸಭಾ ಮಂಟಪದೊಳ್ಪ್ರಮಥಗಣಂಗಳ್ಪ
ರಸೊಡ್ಡೋಲಗಂ ಗೊಟ್ಟುಕುಳ್ಳಿರ್ದಾಗಳ್||

ಕಂ|| ಪ್ರಮಥರ್ಮುದದಿಂಪಡೆಯ| ಲ್ಕಮರಪ್ರಕರಂಪೊವಳ್ದುಪೊ
ಳುತ್ತಿರೆಶಂ| ಭ್ರಮುದಿಂದಿರಿಭಕ್ತಂಗಂ| ದುಮೆಯುರಸಂಪ್ರೀತಿಯಿಂ
ಗಣಪದವಿತ್ತಂ|| ||೪೨||

ಅನಘನ-ನಕ್ಕಿಯೊಳಿರಿಭ| ಕ್ತನಗುಣಮಂಹೈಮವತಿಗೆಪೇಳುತ್ತ
ತಾ| ತನಸಂಗೀತರಸಕ್ಕಂ| ಮನನೀವುತ್ತೊಪ್ಪುತಿರ್ದನಾಸ್ಥಾಯಿ
ನೊಳ್|| ||೪೩||

ಹರನತಿಕರುಣದಿನಿರಿಭ| ಕ್ತರನಾರಜತಾಚಳಕ್ಕೆ ಕೊಂಡೊಯ್ಯು
ಲ್ಕಾ| ಚ್ಚರಿವಡುತೆಪಗಲ್ಪೋಳಂ| ಕರಿಯೂರೊಳ್ಸುಖದಿನಿರುತಿರಲ್ಕ
ತಾಗಳ್|| ||೪೪||

ಗದ್ಯ|| ಇದುಸಕಲಸುರನಿಕರಮುಕುಟ ಮಾಣಿಕ್ಯ ಮಾಲಾಮರೀಚಿಪುಂ
ಜರಂಜಿತಪಾದಪಂಕಜಶ್ರೀ ಮತ್ಪಾಲಿಸಿರೆಯ ಪುರಾಧಿಪಶ್ರೀ ಸೋಮ
ನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪ ತ್ರಿ
ಷ್ಠಿಪುರಾತನಚಾರಿತ್ರ ದೊಳ್ಪಗಲ್ಪೋಳರಾಜ ರಾಜ್ಯ ಪರಿಪಾಲನವರ್ಣ
ನಮುರಿಭಕ್ತ ಮಾಹೇಶ್ವರ ಕಥಾವೃತ್ತಾಂತಂದ್ವಾವಿಂಶತ್ಯಾಶ್ವಾಸಂ



## ಇಪ್ಪತ್ತುಮೂರನೇಆಶ್ವಾಸಂ

### ಏನಾಧಿನಾಥರ ಕಥನಂ

ಏನಾಧಿನಾಥಗಂಧರ। ಣೀನುತಗಣಪದವನಿತ್ತು ಮೆರೆದಪ್ರತಿಮ। ಜ್ಞಾನನಿಧಿಪುಣ್ಯನಿಧಿಮಹಿ। ಮಾನಿಧಿಸೋಮೇಶನೊಲ್ದು ಪಾಲಿಕೆನಮ್ಮಂ। ॥೧।

ಕಂ॥ ಪುರಹರಪದಭಕ್ತವ್ರಜ। ಕೆರೆದುದನೀಯಲ್ಕೆ ವೇಳ್ಕೆನುತ್ತರ್ಥಮನಾ। ದರದಿಂದಾರ್ಜಿಸಲೆಂದಾ। ಕರಿಯೂರ್ಗೇನಾಧಿನಾಥನೆಂಬಂ ಬಂದಂ॥ ॥೨।

ವ॥ ಅಂತೇನಾಧಿನಾಥಂಬಂದು ತತ್ಪುರದೊಳೋಲೈಸಿಸೇವಕಾವೃತ್ತಿಯಿಂದಾರ್ಜಿಸಿದ ಅರ್ಥಮದು ಕಷ್ಟಮೆಂದಾ ಬುದ್ಧಿಯಂಬಿಟ್ಟುಚಿಂತಿಸುತ್ತೊಂದು ರಾತ್ರಿಯೊಳ್ ಶಿವಧ್ಯಾನದಿಂದಿರುತಿರ್ಪಾಗಳ್

ಕಂ॥ ಮಣಿಮಕುಟಂನಿಟಿಲದಕ। ಣ್ಣಣಿಕುಂಡಲಮುಗ್ರದಾಡೆಯಸಿಫಲಕಂಬಿ। ಲ್ಲಿಣದುಡೆಪೊಂಗೊಡರೊಪ್ಪಲ್ । ರಣಧೀರನೆನಿಪ್ಪವೀರಭದ್ರಂಬಂದಂ। ।೩॥

ಕನಸಿನಮುಖದೊಳ್ಬಂದೀ। ಶನನಿಯಮದಿವೀರಭದ್ರನಸಿಫಳಕಮನಿತ್ತನುನಯದಿಂಪೋಗಲ್ದಚ್ಚವೆನಿಸಲ್ಕೇನಾಧಿನಾಥನೊಲವಿಂತಾಳ್ದಂ

ವ॥ ಅಂತುಕನಸಿನೊಳ್ದಿಟಮಾದ ಸಿಫಲಕಮಂಪಿಡಿದುಬಿಗನಲ್ಲಾಚ್ಛಾದನಮಪ್ಪ ಭಸಿತವಿಲ್ಲದಶಸ್ತ್ರಜೀವಿಗಳಗಂಡನೆಂದುಕಾದಿಗೆಲ್ದು ಧನಮನಾರ್ಜಿಸಿಯೆನ್ನೊಡೆಯರಪ್ಪಮಾಹೇಶ್ವರರ್ಗೆಬೆಸಕೆಯ್ವೆನೆಂದೇನಾಧಿನಾಥಂ ಸಮರಕ್ಕುದ್ಯೋಗದಿಂದಿರ್ದನಂತುಮಲ್ಲದೆಯುಂ।

ಕಂ॥ ಪಿಡಿದಸಿಫಲಕಂಪೊಳೆಯ । ಲ್ತೊಡರ್ವರ್ಭಟರಗಂಡನೆಂಬಬಿರಿದಿನಪೊಸಪೊಂ। ದೊಡರೆಡಗಾಲೊಳ್ಮೆರೆಯ । ಲ್ಕಡುಗಲಿಯೇನಾಧಿನಾಥನಾರ್ಪಿಂದಿರ್ದಂ॥ ॥೪॥

ಕಂ॥ ಭಸಿತಂತೀವಿರಲಾಗ। ಳ್ಪೊಸರುದ್ರಾಕ್ಷಿಗಳರಕ್ಕೆವಣಿಯೆಂದೆನಿಸ। ಲ್ಮಿಸುಗುವದುಕೂಲದೊರೆಯಿಂ । ದೆಸೆವುತ್ತೇನಾಧಿನಾಥನುಬರ್ತಿರ್ದಂ। ।೫।

ಪರಭುಜದೊಳ್ಭಕ್ತಿಶ್ರೀ। ಯಿರೆಘುಕದಪೊನ್ನಗೆಜ್ಜೆಘಂಟೆಗಳುಲಿವ॥

ಪೆರ್ಬಸೆಯುಂಪೊಯ್ಸುತ್ತಂ| ಬೆಬ್ಬಿರಿದಾಲುತ್ತೆ ವೀರಶೃಂಗಾರವುನಾಂ
ತುರ್ಬಿಫುಟನೆಗೆವುತಿರದತಿ | ಗರ್ಬದಿಮಾರಾಂಕನೆನಿಪಭಟನೆಲ್ತಂ
ದಂ|                                                                                 |೧೪|

ವ| ಅಂತುಮಾರಾಂಕನೆಲ್ತಂದುಕಳನಂಪೊಗಲ್ಕೇಣಾಧಿನಾಥಂಮೂ
ದಲಿಸಿಮುಂಪೆಗದ ಭೂಮಾನಮನರಿದುದೂರಗತಿ ಚಿತ್ರಗತಿಗಳಿಂತೋ
ರಿಜತ್ತಾಯಿತಂಬುಕ್ಕುಹಲಗೆಯು ಹಲ್ಲಣೆಯಂತೆರದು ನಾಲ್ಕುತೆರದಧಾ
ರೆಯುಂ ಮೂರುತೆರದನಿವಾರಣೆಯುಂ ನಾಲ್ಕುತೆರದಪ್ಪವೊಯ್ಲುಂಬಿತ್ತ
ರಿಸಿ ಖಡ್ಗಭ್ರಮಣಬಿನ್ನಾಣಮಂ ಬೀರಿಪಗಲ್ಕೊಳರಾಜಂನೋಡಿಮೆ
ಚ್ಚುತ್ತಿರಲಾಗಳ್|

ಕಂ| ಪಿರಿದುಜನಮದ್ಭುತಂಬಡು| ತಿರಲಸಿಯಿಂದರಿಯಸಿರಮ ನರಿ
ದಂತಾಗ | ಳ್ಭರದಿಂದಪ್ಪರಿಸುತ್ತಂ| ದುರುಗಲಿಯೇಣಾದಿನಾಥನಾರ್ಪಿ
ನೊಳೆಸೆದಂ||                                                                          |೧೫||

ಖಳನತಲೆಚಿದಿದುಭಯದಿಂ | ಕಳನೊಳ್ಬೀಳಲ್ಕೆಜೀವಮಂತದುತಾ
ರಾ| ಚಳಕಂಪೋಗಲ್ಕೊಲವಿಂ | ದಿಳೆಯುರಸಂಭಕ್ತನಂಮುದಂಬುಗೆ
ಪೊಗರ್ದಂ|                                                                           ||೧೬||

ವ|| ಅಂತುಪೊಗಳ್ದುಕೊಂಡಾಡುತ್ತಂ ಪಗಲ್ಕೊಳರಾಜಂಗಜಮನೇ
ರಿಸಿಮೆರೆಯಿಸೆಪಲವುಪೊಂಗಳಂ ಮೆಚ್ಚುಗೊಟ್ಟುಕಳುಪಲ್ಕೇಣಾದಿನಾ
ಥಂ ನಿಜಪುರಮಂಬರಕ್ಕೆ ಬಂದುಸಂಭ್ರಮದಿಂ ಶಿವಭಕ್ತರ್ಗೆಬೇಡಿದುದಂ
ಕೊಡುತ್ತಂ ದಾನಿಗಳ್ಗೀಶ್ವರನೆನಿಸುತ್ತಂತನ್ನ ಕೈಯೊಳ್ಕಡಿದಮಾ
ರಂ ಕನಗಳಮಂಶಿವಲೋಕಕ್ಕೆಯ್ದಿ ಸುತ್ತಂಪಿರಿದುಜಸಮನಾಂತೀಪರಿ
ಯೊಳ್ಪಲವುವತ್ಸರಂ ಪೋಗುಲ್ಕಿರುತ್ತಿರ್ದನಂತುಮಲ್ಲದೆಯುಂ||

ಕಂ|| ಧರೆಯೊಳಗಾವಂಗೆಲ್ಲದ| ಪರಿಗಂಡೇಣಾದಿನಾಥನೊಳ್ಕಾದಲ್ಮ
ತ್ಸರಿಸುತ್ತೆರಾಜಗರುಸಾ| ಸಿರಪೊನ್ನಂಕಟ್ಟಿಕೊಂಡುಕಳನಂಪೊಕ್ಕಂ

ವ|| ಅಂತುಪಗಲ್ಕೊಳರಾಜಂ ನೋಡುತ್ತಿರಲ್ಕಳನಂಪೊಕ್ಕು ವೆಳೆ
ಯೋಗಿಣೀ ಬಲಮಂಕೊಂಡುಸವಸರವಬಿಗಳ್ಬೇನಾಗಳಂಕದಕುಟಿಲ
ಮಂತ್ರತಂತ್ರಯಂತ್ರ ಬೇಳುವೆತಿಲಕತಿಗರುಬಸರುಚ್ಚು ಧೂಪಲೇ
ಪಕವಳಚಿಪ್ಪುತೋಳದಂಡೆರಕ್ಕೆಯಮಣಿಬ್ರಹ್ಮಸೂತ್ರಘುಟಿಕೆಗತಿಸ್ತಂ
ಭನಮೆಂಬಕಾ ವಿದ್ಯಮಂಪ್ರಯೋಗಿಸುತ್ತಿ ಡಿರ್ದೊಳ್ಮಾರಾಂಕ ಮಪ್ರರಾಜಗು

ಕುನಿಶಿತಾಸಿಯುಂ ಶಿರಃಪುತ್ರಂಮಾರಾಂತರತ್ತಿತ್ತ ಪೇಷದಿಂದುಬೀ
ತಂದರಿಯುಕುಮಂತ್ರಮಂ ಹರನಬಲದಿಂ ನಿವಾರಿಸಿವೀರಭದ್ರಂಗ
ಡವಾಟ್ಟೇಣಾಧಿನಾಥ ನಾತ್ಮಫಲಕಖಡ್ಗಂಗಳಂ ಜಡಿದುಮೆರೆವಾ
ಸ್ವಪಕ್ಷಪರಪಕ್ಷಹೆಲ್ಲಣೆ ನಿರ್ವಾದವುಂದಗತಿಚಾರಣಚೋರ ಣೋ
ಟಚವರ್ಜ ಟಪ್ಪೈಸರಪಕ್ಕೆಸಾದಿವಿಕ್ಕರಿ ವೃತ್ತಮುಮುಧ್ಯಮಜಘನ್ಯ
ರಣೆತದಗ ಕಂತದಗ್ಸೆ ತಾಳವಟ್ಟವೆಂಬನಾನಾ ವಿಧಖಡ್ಗಬಿನ್ನಾ
ವಂ ತೋರಿಜರಿದಟ್ಟಮುಟ್ಟ ಮಿಕ್ಕುಪೊಕ್ಕು ಬೊಬ್ಬಿರಿದಬ್ಬರಿಸುತ್ತ
ಗಳ್॥

ಕಂ॥ ಬಿಡೆಸಾಟಿಹಿಂಚೆತಡೆಯುದೆ। ಕಡುಗಲಿಯೇಣಾಧಿನಾಥ
ಮಿಂಪೊಯ್ಯು। ಲ್ಕಡಿದರಿಯುಶಿರಮನುರ್ವಿಗೆ, ಕೆಡಹಲ್ಕೋಳಭ
ಜಮುತ್ತಿರಲಾಗಳ್॥

ವ॥ ಅಂತಾರಾಜಗುರುವಂಕಡಿದಿಕ್ಕಿ ಜಯುದಿಂತನ್ನಸಾಸಿರ ಪೋ
ಶಿವಭಕ್ತರ್ಗಿತ್ತೇಣಾದಿನಾಥ ಮಾಹೇಶ್ವರಂಪ್ರತಾಪೋನ್ನತಿಯಿಂ
ತಿರ್ದನಂತುಮಲ್ಲದೆಯುಂ॥

ಕಂ॥ ಅರಿಯೆಯೇಣಾದಿನಾಥಂ।ಧುರದೊಳ್ತಿವಿಸಲ್ಕಮುವನತನ
ಮುನಿಸಿಂ,ದಿರದೆನಿಜಜನನಿಗರುಹ।ಲ್ಪಿರಿದಳಲಿಂ ಕೋಪ್ವರ ವನಪೋ
ಪೇಳಲ್॥

ಎಲೆಮಗನೆಭಕ್ತಪೇಷಂ। ಸಲೆಜೀವಂಭಸಿ ತವಿಟ್ಟರವನೀಶ್ವರನಂ।
ಲವಿಂಪೆಕಾಣ್ಬರದರಿಂ। ಗೆಲಲಕ್ಕಾಪಗೆಯ ನೆನುತೆಕುಟಿಲದಿ ನುಡಿದ

ವ॥ಅಂತುಪಗೆಯುಮುಗಂಪೊಂಗಟ್ಟಸ್ಮರಿಸುವುದಂ ಕೇಳ್ದಾ ಹಾ
ನ್ನೊಡೆಯುರಪ್ಪಮಾಹೇಶ್ವರರ್ಗೀವನೆನುತ್ತಂಬಂ ದೇಣಾದಿನಾಥಂ
ಗಳಪೊಟ್ಟಣಮಂಪರಿದು ಕೊಂಡು ಪಗಲ್ಕೋಳ ರಾಜನಡೆಗೆಲ್ತಂ
ನಾಳೆಕಾಳಗಮೆಂದು ಪೇಳ್ದುನಿಜನಿಳಯುಕ್ಕೆಳ್ತಂದು ತಾಂತಂದ
ಳಂಮಾಹೇಶ್ವರರ್ಗಿತ್ತುಶಿವಲಿಂಗಧ್ಯಾನದಿಂದಂತಾಯಿರುಳಂ ಕಳೆದು
ರುದಿವಸದೊಳ್॥

ಕಂ॥ ಭಸಿತೋದ್ಧೂಳಿತತನುವಿಂ, ಪೊಸರುದ್ರಾಕ್ಷಿಗಳ ತೊಡಿಗೆ
ಪೊಂದೊಂದಿರಿಂ! ಬಸ್ಸೆಸಲಕದಿನೆಸವುತೆಸರ। ಭಸದಿಂಪೇ ಣಾದಿನಾ

ದೇಳ್ತಂದಂ|| ೨೧|

ತರಳವೃತ್ತಂ| |ಪರಮಭಕ್ತಸಮೂಹದೊಳ್ನಿಜಸತ್ವದುಗ್ರದೆ ಬಂದುಸ ಚ್ಚರಿತಚೋಳನೃಪಾಳನೀಕ್ಷಿಸುತಿರ್ಪನಂಕಳದಲ್ಲಿಪೊ|ಕ್ಕರಿಭಟೇಭವ್ಯಾ ಗೇಂದ್ರನಪ್ಪಮಹೇಶಕಿಂಕರನುರ್ಬಿಯುಬ್ಬರಿಸುತ್ತಂನಿಜಖಡ್ಗಮಂಜಳಿ ದುರ್ಬಿಚಾರಿಸುತೊಪ್ಪಿದಂ| ೨೨|

ವ|ಅಂತುಬಿಂಕದಸಿಂಗರದೊಳಂಕದಕಳದೊಳ್ನಿಶ್ಶಂಕತೆಯಿಂ ದೀಶ್ವ ರಕಿಂಕರನಪ್ಪೇಣಾದಿನಾಥಂಘನಾರಾತಿಭಯಂಕರ ನೆನಿಸುತ್ತಿರ್ಪನ್ನೆ ಗಮಿತ್ತಲ್!

ಮ|| ಶಿರದೊಳ್ಕಂಠಹರಂಗಳೊಳ್ಕಟಲದಿಂರುದ್ರಾಕ್ಷಿಯಂ ತಾಳ್ದುನಿ ರ್ಭರದಿಂಸರ್ವಶರೀರದೊಳ್ಭಸಿತಮಂಸಲ್ಲೇಪನಂಗೆಯ್ದುಶಂ|ಕರ ಪಾ ದಾಂಬುಜಭಕ್ತನೆಂಬತೆರದಿಂಪೂರಾಂಕನುಬ್ಬುತ್ತೆ ತ|ತ್ಪುರದೊಳ್ಪೆರ್ಬ ರೆವೊಯ್ಸುತಂನಡೆತರುತ್ತಿರ್ದಂಘನಾಟೋಪದಿಂ| ೨೩!

ಕಂ| ನೆರೆವಾತ್ಮಮಿತ್ರಭಟರೊ| ತ್ತರದೊಳ್ಪರಿಗೆಗಳ ಮರೆಗಳೊಳ್ಸೀ ಗುರಿಝು| ಲ್ಲರಿಗಳನೆಳಲೊಳ್ತದ್ರಿಪು|ಪರಿವಾರಂಕಾಣಬಾರದಂತಿರೆಬಂದಂ|

ವ. ಅಂತುತನ್ನಂಪುಚ್ಚಿವುಸುಂಕಿಟ್ಟು ತದ್ವೈರಿಭಟಂಬಂದಂಕದ ಕಳ ನಂಪೊಲಗಂಡುಝುಳಪಿಸುತ್ತೇಣಾದಿನಾಥನಿದಿರಾಗಿರ್ಪನ್ನೆಗಂ|

ಕಂ ಗಳೆಯೋಡಲ್ಪುಗೆಝುಲಗಂ, ಸೆಳೆದಕಟಮೃತಪನೆತೋರಿವಿಷವೆರ ದಂತಾ|ಗಳೆಭವಭಕ್ತಾಕೃತಿಯಂ| ತಳೆದಿಗದೇಣಾದಿನಾಥನಿದಿರೊಳ್ನಿಂ ದಂ|| ೨೫

ವ, ಅಂತಿದಿರಾಗಿ ನಿಂದಿರ್ದುಪರಿತಪ್ತವೂರಾಂಕದಶಿವಭಕ್ತವೇಷಮಂ ಕಂಡೇಣಾದಿನಾಥನಸಿಫಲಕಮಂಬಿಸುಟುಶರಣೆನುತ್ತಿಂತೆಂದಂ|

ಚಂ| ಶಿವಶಿವದೇವರಾವದೆಸೆಯಿಂನಡೆತಂದಿರಿಜೀಗಮೆನ್ನದೇ|ಹವನಿ ರದೊಕ್ಕಲಿಕ್ಕಿಕಡಿದಿಕ್ಕಿ ವಿನೋದಮನಾಂಪುದೆಂಬತ| ಚ್ಛಿವಪದಭಕ್ತ ನಂಕುಟಲನಪ್ಪರಿನಿಷ್ಕೃಪೆಯಿಂದಮಕ್ಕಟಾ | ತಿವಿದಸಿಯಿಂದೆಪೊಯ್ದು ತಣಿವಿಲ್ಲದೆಮತ್ತಿರಿದಂರಣೋರ್ವಿಯೊಳ್| ೨೬!!

ಕಂ| ಇರಿದಲಗೋಡಲೊಳ್ಪುಳಕಂ| ಪೊರಮಯ್ಯೊಳ್ಪೊಣ್ಮಲುರ್ಬಿಸಂ ತಸದಿಂದಂ|ಕರೆಗೂರಲನೆಶರಣೆಂಬಾ | ಸರಗಲಿಯಂನೋಡಿವೈರಿಯಾಸಿ ಯಂಬಿಸುಟಂ| ||೨೭||

ಕಂ॥ ಅಲಗಂಬಿಸುಟಾಪಗೆಪೆರ| ತೊಲಗಲ್ಕೇಣಾದಿನಾಥನೀಶ್ವರಕ್ಷ್ಷ ಷ|ಕ್ಕ್ಯಲವಿಂದೊಡಲಂಕೊಟ್ಟಾ| ಛಲಕ್ಕೆಶಿವನೋತುರೂಪುದೋಷ ನಾಗಳ್| ೭೮|

ಮ.ಸ್ರ॥ ಒಲವಿಂದಾಕಾಶಮಂಮುಟ್ಟುವವಿಕಟಜಟಾ ಜೂಟದಿಂದ್ಧ ವಗಂಗಾ|ಜಲದಿಂದರ್ಧೇಂದುವಿಂದಂದ ಹನನಯನದಿಂ ನಾಗರಿಂನೀ ಡಿಂದು|ಜ್ವಲಭಸ್ಮಾಲೇಪದಿಂಸಿಂಧುರದ ಜಿನದ್ವಿಖಟ್ವಾಂಗದಿಂ ಕೂಡಿ ಮಂ ಗಳೆಯಿಂಪಂಚಾಸ್ಯದಿಂದಂದಶಭುಜದಿ ಶಿವಂಮೂರ್ತಿವೆತ್ತೊಪ್ಪಿ ರ್ದ೦|| ೭೯|

ಕಂ॥ ಹರಮೂರ್ತಿಯನೊಲ್ದೀಕ್ಷಿಸು|ತಿರದಾಗಳರಣಕಮಲದೊಳ್ಪ ರಳುತ್ತಂ| ಪರವಶದೊಳ್ಭಕ್ತನಿರ| ಲ್ಗಿರಿಜಾವರನಲ್ಮೆಯಿಂದವೆತ್ತಿದನಾ ಗಳ್|

ವ॥ ಅಂತುಪರಮಕೃಪೆಯಿಂದೇಣಾದಿನಾಥನಂ ಸದಾಶಿವಂಪಿಡಿದೆತ್ತಿಮೆ ಯ್ದಡವಿಮುತ್ತಮೊಗಳ್

ಕಂ॥ ಪರಿಕಿಪೊಡೆನ್ನಯವೇಷ| ಕ್ಕಿರದೊಲವಿಂತನ್ನದೇಹಮಂಕೊ ಟ್ಟಂತೀ| ಶರಣಂಗಾದೊರ್ಕೆಯೆಂದಾ|ದರದಿಂದಂನಂದಿಗಂದನದಗಣ ಶಂ |೮೦|

ವ॥ ಅಂತೇಣಾದಿನಾಥನಭಕ್ತಿಛಲಮಂ ಕೊಂಡಾಡುತಿರ್ಪಾಗಳ್

ಕಂ॥ ಘನಮಹಿಮನೆನಿಸುವೇಣಾ| ದಿನಾಥನಂತಿವಿದಪಾಪಿತಾನೆನ ತಲೆಪೋ| ದನಿರವೆಛಕ್ತಾಕೃತಿಏದಿ| ಜೆನೆಸುಜನರವ್ಯೆರವೇನನೀ| ಮ ದುಘರೆಯೊಳ್||

ತಾನೋಸೆದುಬರಿಸೆಬಂಡವಿ| ಮಾನಮೊಳೇಣಾದಿ ನಾಥನಂಕ್ಷ ಗೆಗಾ| ರೀನಾಥಂಕುಳ್ಳಿರಿಸಿಮ| ಹಾನಿಯಮದಿನಿಯಮಿಸಲ್ಕೆ ಜ ತ್ತಾಗಳ್| ||

ಸುರನಿಕರದಲರಮಳೆಯೊ| ಳ್ಸುರುಚಿರನವರತ್ನ ಖಚಿತ ದಿವ್ಯವಿಮಾನ ಹರಭಕ್ತಂಬೆರಸಾಗ| ಳ್ಪರಕಜತಾಚಳಕೆಬಂದುದುತ್ಸವದಿಂದ||

ವ॥ ಅಂತುಬಂದವೀರಮಹೇಶ್ವರ ನಪ್ಪೇಣಾದಿನಾಥಂಬೆರಸುಕ ಣಾಕರನೆನಿಪಶಂಕರಂಪರಮಾನಂದದಿಂದಖಿಳ ಪ್ರಮಥಗಣಸಮೇತ ಕೈಲಾಸಸಾ ನವಂ ಟಪ ಸೋಗೆದ್ದೋಲಗಂ ಕೊಟ್ಟು ಕುಳ್ಳಿರ್ದಾಗ

ಕಂ|| ಮೀನಧ್ವಜಪಿತನತಿಸು | ಮ್ಮಾನದಿಪೊಗಳಲ್ಕೆ ಮೆಚ್ಚಿ ಗಣಪದ ಮಂಕೊ ಟ್ಟೇಣಾದಿನಾಥನಂಮೆರೆ| ದಾನಗಜಾರಮಣನೆಸೆದನಾಸ್ಥಾಯಿಕೆಯೊಳ್|| ೩೫||

ಅನುಪಮಶಿವನೊಲ್ದೀನಾ| ದಿನಾಥನಂರಜತಗಿರಿಗೆಕೊಂಡೊಯ್ಯಲ್ಕೆ| ವಿನುತಪಗಲ್ಗೊಳ್ಳೀನೃಪಂ | ಮನವೊಲ್ದೆರಗಾಗಿರುತ್ತಿರಲ್ಕಂತಾಗಳ್|| ||೩೬||

ಗದ್ಯ| ಇದುಸಕಲಸುರನಿಕರಮಕುಟ ಮಾಣಿಕ್ಯ ಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀ ಮತ್ಪಾಲಿಗರೆಯ ಪುರಾಧಿಪಶ್ರೀ ಸೋಮನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿಪುರಾತನಚಾರಿತ್ರ ದೊಳೇಣಾದಿನಾಥ ಮಾಹೇಶ್ವರ ಕಥಾವೃತ್ತಾಂತಂತ್ರಯೋವಿಂಶತ್ಯಾಶ್ವಾಸಂ



## ಇಪ್ಪತ್ತುನಾಲ್ಕನೆಯಾಶ್ವಾಸಂ

### ಜೊನೆಯಾಂಡರ ಕಥನಂ

ಚಂಡಭುಜಬಲದಶ್ಲಿವೊನೆ | ಯಾಂಡರ್ಗಾಶ್ಚರ್ಯ್ಯೆ ಮೆಚ್ಚಿ ಗಣಪದವಿತ್ತಾ| ಖಂಡಲಸುತನೆನಿಸಿದಫಣಿ, ಕುಂಡಲನೊಲ್ವೀಶನೊ ಲ್ದುಪಾಲಿಕಸಮ್ಮಾ|| ||೧||

ವ|| ಅಂತುಮಾದೊನೆಯಾಂಡಂ

ಕಂ|| ಸೊಗಯಿಪಪವಿಭೃತಿರುದ್ರಾ| ಕ್ಷೆಗಳಿಂದೊಪ್ಪುವರನೀಶನೆಂದೀಕ್ಷಿಸುವೀ| ಬಗೆಯಿಂಶಿವೈಕ್ಯರಂನೆ| ಟ್ಟಗೆಮನ್ನಿಸುತಿರ್ಪನವಮಹಾಕಲಿವೊನೆಯಾಂಡಂ|| |೨||

ವ|| ಮತ್ತಮಾ ...

ಕಂ॥ ಪಿರಿದಘಟುವಿುಗಕ್ರೋಳೋ|ರ್ವರೆಯೊಳ್ ರಾವುತ್ತನೇಷವಂ ತಾಳ್ದತಿವಿ | ಸ್ತರಸುಖದಿಂ ನಳರೇಷಂ | ತರನುರೆಪಳಿವುತ್ತ ವಿಪ್ಪ ವೊನೆಯಾಂಡಂ! ॥೪

ವ॥ ಅಂತುರಾವುತ್ತವೇಷವುಂತಾಳ್ದು ವಿಭೂತಿಯಿಲ್ಲದೆಮಲೆವತುರಂಗಿಗಳಗಂಡನೆಂಬ ಬಿರುದಿನಪೊಡರ್ಪಿಂ ಚೋಳಮಂಡಳದೊಳೆಲ್ಲಿಸಂಗ್ರಾಮವುಂಟಲ್ಲಲ್ಲಿಗೆ ಪೋಗಿನಿಜತುರಗಮನೇರಿನಿಂದಿರ ಲುಭಯಬಲದೊಳಾರ್ತನರ್ತಮತಮಗೆ ಪೇಳ್ಕೆಂದುಸಹಸ್ರಸಂಖ್ಯೆಯಪೊಂಗಳಂಪಡೆದು ಪೋಗಿ ಘುಪರಪಗೆಗಳಂತರಿದು ಒಳಿಕೆಯುದ್ಧಗೆಲ್ಲವುಂಕೊಟ್ಟನೆಸಗಲಿತನಮಂಬೀರುತ್ತಂ ವೊನೆಯಾಂಡನಿರುತಿರ್ದನಂತುವಲ್ಲದೆಯುಂ|

ಉ|| ಈ ತೆರದಿಂದವುತ್ಯಧಿಕಸತ್ವದಿನರ್ಜಿಸಿಭಕ್ತಸಂಕುಳ| ಕ್ಕೋತುವುತೀವಹರ್ಷದೊದವಂಪಡೆಯಲ್ಕನವಿತ್ತವುಂಮುಹಾ | ಪ್ರೀತಿಯೊಳಿತ್ತು ಭಕ್ತಜನಕಲ್ಪವಹೀರು ಹನೆಂಡೆನಿಪ್ಪವಿ | ಖ್ಯಾತಿಯೊಳಿರ್ದನೊಲ್ದುವೊನೆಯಾಂಡನತಿಪ್ರಬಳಪ್ರತಾಪದಿಂ|| ॥೬

ವ॥ ಅಂತತಿಪ್ರಬಳತನದಿಂ ದಿರುತ್ತೊಂದುದಿವಸಂ||

ಕಂ॥ ಭಸಿತವಳವಟ್ಟಮೈವರ| ಪೊಸರುದ್ರಾಕ್ಷಿಗಳರಕ್ಕೆವಣಿಯಾಗಿರಾ | ಜಿಸೆದುಗುಲದುಡಿಗೆಪೊಂದೊಪ|ರೆಸೆಯಲಿಶ್ಮನೆಯಾಂಡವೀರಸೊಪ್ಪಿದನಾಗಳ್|| ॥೫

ವ॥ ಅಂತೊಪ್ಪುವಾಗಳ್|

ಕಂ| ಅನಿಲನನಹಿಪತಿರಿಪುವಂ | ಮನಧಿಂದಂವಿುಗಿಲೆನಿಪ್ಪಘನವೇಗಂನು| ಳ್ಳನುಪಮತುರಂಗವಂಕಲಿ| ವೊನೆಯಾಂಡನಪದರ್ಪಕರಿತ್ರಕ್ಕೇಳ್ತಂದ|| ॥೭

ವ॥ ಅಂತೇಳ್ತಂದುಕರಿಯೂರಂಪೊಕ್ಕುತುರಂಗದಿಂದವನಿತಳಕ್ಕವತರಿಸಿವೊನೆಯಾಂಡಂ ದೌವಾರಿಕನಿ ವೇದಿತಾಸ್ಥಾನಮಂಪೊಕ್ಕು ಪನಲೆ ೃ ಳರಾಜನ ಸಂಮುಖಮಾಗಲ್ಕಾ ತಂಶಿವಭಕ್ತನಪ್ಪುದರಿಂಪತ್ತಿಸೆಕರೆದುಕುಳ್ಳಿರಿಸಿ ಸನ್ಮಾನಿಸಿ ನೀವಾರೆಂದು ಬೆಸಗೊಳಲ್ಕಾಂತುರಂಗಿಯೆಂದು ಪೇಳಲ್ಕೇಳ್ದು ಸಂತಸಂಬಟ್ಟಂತಪ್ಪಸುಭಟವರೆನ್ನ ಪೊರೆಯೊಳಿರ್ಪೊಡೆ ಲ್ವೇಳ್ಕೆಂದು ಸಹಸ್ರಸಂಖ್ಯೆಯಪೊಂಗಳಂ ಕೊಟ್ಟುಕಳುಹಿಸೆ ಪ್ರಸಾದಲ್ಪಸುಖದಿಂದಿರುತ್ತಿರಲೊಂದು

ಮ॥ ಸ್ರ॥ ನೆಲಸಿಂದಂ ಸಿಂಹಳಸ್ತ್ರೀಕಚದ ವಿಚಕಿಳಸೌಗಂಧ್ಯಮಂ ಬೀ
ರುತಂ ಸ। ದ್ಬಳವಪ್ಪಾವಾಮನೇಭ ವ್ಯಾಕಟಗಳಿತದಾನಾಂಬುವಂ ಸೂ
ಸುತಂ ಪೋ। ತಳಕೆಲ್ಲಂ ದಾನವೀವೃತ್ತಿ ನಜನ ದೆಸೆಯಿಂ ಬಂದುದಾನಂದ
ಕಾರಂ ಮಳಯೋರ್ವಿ ಭೃದ್ವಿಹಾರಂ ಘನಸುರಭಿಮಿಳ ಚ್ಛೈತ್ರ್ಯಪೂರಂ
ಸಮೀರಂ॥ ।೭॥

ಆಸಮಯದೊಳ್॥

ಚಂ॥ ಮೊದಲದಳಂ ಪೊದಳ್ದು ಬಿಡೆ ಪಾದರಿಯೊಳ್ ತಳಿದೋರೆ ಚೂತ
ದೊಳ್ಮೊದದಿ ಶುಕಾಳಿ ಕೊಕ್ಕರಿಯೆ ಕೋಗಿಲೆ ಬಗ್ಗಿಸೆ ಪೋಪುದೋರೆಷ
ಟ್ಪದತತಿ ಪೂತ ಮಲ್ಲಿಗೆಯ ಕೇತನ ಪತ್ತೆ ವಿಯೋಗಿಜಾಲವೆ ಯ್ದಿರ್ದಗೆ
ಡೆತಂ ಬೆಲರ್ಪ ಲಿವ ಸಾಯಕಪಾನ ವಸಂತನೆಯ್ದಿದಂ। ।೮।

ಮ॥ ಸ್ರ॥ ರಜನೀನಾಥಂಗೆ ನೈರ್ಮಲ್ಯತೆ ವಿಚಕಿಳಕಾಳ ವಾಮ್ರಕ್ಕೆ
ಚಂಚತ್ಫಳಂ ಭೋ। ಗಿಜನಕ್ಕತ್ಯಂತರಾಗಂ ಪರಭೃತನಿಚಯಕ್ಕಂ ಸು
ರಂಗಸ್ವರಂ ಚೈ। ತ್ರಜವೋರ್ದಂಡಕ್ಕೆ ದರ್ಪಂ ಶುಕತತಿಗೆ ಮುದಂ ಪೆರ್ಚೆ
ಬಂದಂ ವನಶ್ರೀ ನಿಜಕಾಂತಂ ಕೀರ್ತಿವಂತಂ ವಿರಹಿ ನಿಕರಹೃತ್ಕುಂತನಂ
ತಾ ವಸಂತಂ॥ ।೯॥

ಪಸಿರ್ವೆತ್ತೊಪ್ಪುವ ನಂದನಂ ಜನಪದಂ ಕೇಳೀನಗಂ ಕೋಟಿಕಂ। ತು
ಸಖಂ ಹಂಸನವಾತ್ಯಸೂರ್ಜಿತ ಸುಗಂಧಂ ಕೋಶಮುನ್ಮತ್ತಭೃ। ಂಗ
ಸಮೂಹಂ ನಿಜಕಿಂಕರಾಳಿ ನಿರುತಂ ತಾಂ ಗೂಡಿ ಸಪ್ತಾಂಗ ರಾ। ಜ್ಯಸ
ಮೇತಂ ಪಿರಿದೊಪ್ಪುತಿರ್ಪನೊಲವಿಂ ಚೈತ್ರಕ್ಷಮಾವಲ್ಲಭಂ। ॥೧೦॥

ಮತ್ತಂ।

ಕಂ॥ ಧರೆಗೆ ವಸಂತಾಗಮಮಂ ಪಿರಿದರಿ। ಪುವುದರಿನಾ ವಸಂತದೂತಿ
ಸತಾರ್ಪಂ। ನಿರುತಮದಾಯ್ತೆನಲಥೊರ್ಪ। ತ್ತರ ದಿಂಡಡಿಪರ್ಪತ್ತೆ
ಯೊಪ್ಪುತಿರ್ದತ್ತಾಗಳ್॥ ॥೧೧॥

ಮುನಿಸಿಂ ವಿರಹಿಜನಂಗಳ। ನನಿತಂ ತೆಗದಿಕ್ಕಿ ಬಿಡದೆ ಸುಡುವೆನೆನು
ತ್ತಂ। ಮನಸಿಜನೊಟ್ಟಿದ ಪೆರ್ಗಿರ್ಚ್ಚಿನವೊಲು ಲದರ್ಪಲಾಶಸುಮತತಿ
ಯೆಸೆಗುಂ। ॥೧೨॥

ಅದಲ್ಲದೆಯುಂ

ಕಂ॥ ವನಲಕ್ಷ್ಮಿ ಸುರಭಿಗಂಧೋ। ಜನಕೆಡೆಮಾಡಿರ್ಪ ಪೊನ್ನ ಬಟ್ಟ

ಲ್ಗಳ್ತ್ತು ವೆನಲಲರ್ದ ಕರ್ಣಿಕಾರದ| ಘನತರಕುಸುಮಾಳಿಕಣ್ಗೆಸೊಗ
ಯಿಸಿತೋಕುಸುಂ|| |೧೧||
ಚಂ|| ವಿಕಸಿತಕೋರಕಂಕಲಿಕೆಬಿಚ್ಚಿ ಗೊನರ್ಪಿನಸಂದಳರ್ತನ
ನನೆವೊಗ್ಗೆ ಪೂಮಿಡಿಕನಲ್ಮಿಡಿಕಾಯುಂದೋರೆದೋರೆಸಲ್ಲಲಿತ ವೆನಿಪ್ಪ
ಣ್ಣು ತನಿವಣ್ಣವೆನಿಪ್ಪವರಿಂದೆ ಕಣ್ಗೆವಂಗಗಳ ವೆನಿಸುತ್ತ ಮೊಪ್ಪಿ ದುದು
ಕಾಮುನತೋಮರೆದಂತೆಮಾಮರಂ ||೧೪||
ಅರೆಗಿಳಿವಿಂಡಿಗಿಕ್ಕೆಕಳಕಂಠ ಸಮೂಹದಜನ್ಮಭೂಮಿಷ| ಟ್ಪದ
ನಿಕಾಯುದೇಳ್ಗೆಯತವರ್ಮನೆ ಕಾಮುನರಾಜಧಾನಿಸಂ| ಚರಿಸ
ರನುಕ್ಕಡವೆನಲ್ಕವ ಪುಷ್ಪಫಲಪ್ರದಾನದಿಂ |ಪಿರಿದೆಸೆದತ್ತುಪಾಥವಸ
ಮರದಂದದಿಬಂದ ಮಾಮರಂ|| |೧೫||
ಮತ್ತಮಲ್ಲಿ
ಮ|| ವರಚೂತಾಂಕುರಮುಂ ಕದರ್ವಕಿಸೊನೆಯುಂಸಂತೃಪ್ತ ಮ
ದೀಂಟಕಂ ಧರರಂಧ್ರಂಘನಶುದ್ಧ ಮಾಗಿ ಪಿರಿದುಂಪ್ಸೈವರ್ಚೆಸಂತೋ
ಷದಿಂ ಸ್ಮರರಾಗಂದಳವೇರೆವಾಧವನ ದರ್ಪಂವಿಸ್ತರೆಸತ್ಕಾಕಳಸ್ವ
ಮಂ ಬೀರೆಪುಗಿಲ್ಪುಗಿಲ್ಕರೆದುದಂದುಬಿಂದರ್ಪ ಪುಂಸ್ಕೋಕಿಲಂ||
ಮತ್ತಂ
ಕಂ|| ಲಲನಾನೀಕ್ಷದಪದಹತಿ | ಯಲಕ್ತಕಂಪತ್ತಲಧಿಕತೆರಡನ
ಕ್ತಂವಳವಂತಿರೆಕೆಂದಳಿರಿಂ| ತಳಿರ್ತಕಂಕೆಲ್ಲಿವಿಟಪಿಕಣ್ಗೆ ಸೆದಿರ್ಕುಂ||
ತರುಣಿಯುರಾಲಿಂಗನದಿಂ| ನವರಾನಂದವುನೆಪಡೆವುದಚ್ಚ ರಿಯೆ
ನೌಂ|| ದರಿಯುಂಮೊಲೆಗಳಸೋಂಕಿಂ | ವರನೆನಿಸುವಕುರವಕಂ
ರ್ತನೆಸೆದಿರ್ಕುಂ' |೧೮||
ಘನಕಾಮುಕನಂಪವನಂ | ಗನೆಯುಳಕಣ್ಬೆಳಗುಮೇಲೆಬೀಳಲ್ಕು
ದಿಂ | ತನುಪಿರ್ಚೆತಳ್ತುಪರಚ್ಛೈ | ತ್ರನತಿಳಕದತೇದೆತಿಳಕವೆಸೆದ
ಕುಂ|| ಮತ್ತಂ |೧||
ಎಲ್ಲಾಕುಸುಮವನುಳಿದಳಿ| ಗಿಲ್ಲದೆನೀಂಬಾಯೆನುತ್ತೆ ಬಾಯ್ದೆರೆದ
ತ್ತು ಮ್ಮಲ್ಲಿಗೆಕರವಂತಿರೆಪೊಸ i ಮಲ್ಲಿಗೆಮುಲರೆಸೆದುವ ವಸಂತಾಗದ
ದೊಳ್| |೨೦||
ಪರಿಮಳಪವನ ಸ್ಥಿಗೆಮುಪೊಸ | ಬಿರಿಮುಗುಳ್ಗಳಮೇಲೆಬಿಡದೆಪತ್ತಿರೆ

ಳಗೆ। ಶ್ವರವನಲಕ್ಷ್ಮಿಯಮುತ್ತಿನ। ಹರಿನೀಲದತೊಡವಿನಂತೆಕಣ್ಗೆಸೆದಿರ್ಕುಂ॥ ೨೨

ಒಸಗೆವಿುಗಲ್ಕೆವನಸ್ತ್ರೀ । ವಸಂತಕಂಗುರೆಸಿವಾಳಿಸುವನವದೀಪ। ಪ್ರಸರನೆನೆಕನಕಚಂಪಕ। ಕುಸುಮಂಗಳೊಳಂಕೆವೆತ್ತುಕಣ್ಗೆಸೆದಿರ್ಕುಂ॥ ।೨೩॥

ವನಲಕ್ಷ್ಮಿಮಧುಗೆಪ್ಪೃಗಮದ । ವಿನಿಹಿತನವಕನಕಚಷಕಮಂನೀಡಳೆಂ। ಪೆನಲೆರಗಿದಳಿಸಮೇತಂ। ಕನಕಾಂಬುಜಮಲರ್ದುವೆಮೇದದಾತ್ರಿಳಿಗೊಳದೊಳ್। ೨೪।

ವ॥ ಮತ್ತಂಚಿತ್ತಜನಭುಜಶ್ರೀಯಲರ್ದಂತೆ ವಿಚಕಿಲನಿಚಯಂ ವಿಕಾಸಮನೆಯ್ದಲುಂ ಮಲಯಾನಿಳನಲೀಲೆಯಂತೆಸುರಭಿ ಯಸಿರಿಬೀದಿವರಿಯಲ್ಕುಂರತಿಯಚಿತ್ತಪ್ರಸನ್ನದಂತೆಪುನ್ನಾಗಮುನ್ನತಮಾಗೆಯುಂ ಭೋಗಿಜನದಹರ್ಷಂ ಪೆರ್ಚುವಂತೆಮರುವಕವಚ್ಚರಿಯಾಗೆಯುಂವಿಯೋಗಿಪ್ರಕರದಾವನದಂತೆ ಜಾತಿಯಮೊಗಂಕೊರಗಲುಂ ಪಾಂಥಸಂತತಿಯಂತಾಕರುಣದಂತೆಮಡಲ್ತ ಮಾಲಲತೆಕತ್ತರಿಸಲುಂ ಸೌಂದರಿಯರಾನಂದದಿಂ ಪಾಡುವಹಿಂದೋಳರಾಗದಂತೆ ಲಳಿತಾಂದೋಳಿಚೇತ್ಕೃತಮುದಯಿಸಲುಂ ವಸಂತರಾಜನಕೀರ್ತಿಯಂತೆಬೆಳ್ದಿಂಗಳಪ್ರಜ್ವಲಿಸಲುಂ ಪರಮಯೋಗಿಜನದಹೃದಯದಂತೆ ಮಿಸುಪಬಿಸಿಲೆಸೆಕಂಪಸರಿಸಲತಿರಮಣೀಯವಸಂತದೊಳ್॥

ಚಂ। ನಳನಳಿಪಿಕ್ಷುಕಾರ್ಮುಕನನೇರಿಸಿ ನೂತನಪುಷ್ಪಬಾಣಮಂ ಸೆಳೆದಳಿಮಾಲೆಯೆಂಬತಿರುಗಿಕ್ಕಿಮಹಾಘನದಿಂವಿಯೋಗಿಸಂಕುಳದೆರ್ದೆಯಿಂಧನುಚ್ಛಳಿಸಿನಿಲ್ಲದೆ ಪಾಯ್ವನಮೊಚ್ಚಿ ಮೇದಿನೀತಳಕ್ಕಿರಿದಿಕ್ಕಿದಂಮದನಭೂಪತಿಕಾಯ್ದು ವಸಂತಮಾಸದೊಳ್॥ ॥೨೫॥

ಚಂ। ಸ್ಮರನಲಕಂಬುತಾಪಸ್ವರ ಮೇಲ್ದೆಗುತ್ತಿರೆದರ್ಪ-ಕ್ರೋಧಮುತ್ತರಮುನವಂಗನಾರತಿಗಳಂ ಬಯಸುತ್ತಿರೆಕೋಕಿಲಾಳಿ ಸೊಕ್ಕಿರದೆಪುಗಿಲ್ಪುಗಿಲ್ಗರೆವುತುಬ್ಬಿರೆತುಂಬಿಗಳತ್ತಲಿತ್ತಸಂಚರಿಸುತಿರಲ್ಕಡಂ ಗಿನ್ನಘುಮಾನವದಾವರಿಸಿತ್ತು ಧಾತ್ರಿಯೊಳ್।

ವ। ಅಂತಾಮಧುಮಾಸದೊಳೊಂದು ದಿವಸಂ

ಕಂ॥ ಸುರಪನವಿಭವಮನಾಂತೀ। ಶ್ವರಕಿಂಕರನೆನಿಪಚೋಳರಾಜಂ

ಮುದದಿಂ| ದರಸುಂ ಸಾಮಂತಸಚಿವ | ವ್ರಾರಸೊಡಗ್ಗೋಲಗದೊಳಿರ್ದ
ನತಿಸಂಭ್ರಮದೊಳ್|| |೨೪|

ವ|| ಅಂತಾಸಮಯದೊಳ್|

ಮ|| ಸ್ರ|| ಕಳಕಾಂಚೀಕಿಂಕಿಣೀ ಸಂಕುಳಬಿಡದುಲಿಯಲ್ಲಾರವಂ
ಲ್ದಾಡೆಸತ್ತೊಳ್ಕೀ ಮಳನಿಧಿ (?) ಕಂಚುಕಂವಾಪ್ಪೊಳಿಯೇಸಿತಹಸ್ತಾ
ರುಣ ದ್ಯೋತಿಯಿಂದಂ ತಳೆದಿಪ್ಪಾವೇತ್ರದಂಡಂಪವಳ ದಸೆಳೆಯಂ
ತೊಪ್ಪೆಸಲ್ಲೀಲೆಯಿಂ ಭೂತಳನಾಥಾಸ್ಥಾನಮಂ ಮೋಹಿಸುತಮಿರದ
ಬಂದಳ್ಪ್ರತೀಹಾರಿಯೊರ್ವಳ್| ೨೫||

ವ| ಅಂತುಬಂದುಗುರುಕುಚ ಭರದಿಂಬಳ್ಕುತೆವಣಿಕುಟ್ಟಿಮತಳನಿ
ಹಿತಕರತಳೆಯಾಗಿಸವಿನಯದಿಂದಿಂತೆಂದಳ್

ಕಂ|| ಜನಪತಿಕೂರ್ತವಧರಿಪುದು | ವನಪಾಲಂಬಾಗಿಲಲ್ಲಿಬಂದಿರ್ದ
ಪನೆಂ| ದೆನೆಬರವೇಳೆನಲವಳ್ಪೋಂ | ಕೆನೆಬಗೆವಿಗೆಪೋಗಿಭರದಿಕಳು
ಪಿದಳಾಗಳ್| |೨೬|

ವ| ಅಂತಾಪಡಿಯರತಿಕಳುಪಲ್ವನ ಮಹತ್ತರಂಬಂದಾಸ್ಥಾನಮಂ
ಪೊಕ್ಕಾಗಳ್|

ಸುರಹೊನ್ನೆಯಶೂಸಂಪಗೆ| ಯುರಳಬ್ಜದಮೊಗ್ಗೆದವನದೊಳ್ಪೊಡೆಚೂ
ತಾಂಕುರಮೆಂಬಿವನರಸಂಗಾ||ದರದಿಂವನಪಾಲನಿತ್ತುವಿನಮಿತನಾದಂ

ವ| ಅಂತುವಿನಮಿತನಾಗಿ ಕರಕಮಳಮುಕುಳತಾಂಜಲಿಪುಟನಾಗಿ
ವನಮಹತ್ತರಂ ಭಯಭಕ್ತಿಯಿಂತದ್ಭೂಪಾಳಂಗಿಂತೆಂದಂ|

ಕಂ| ತರುಣಿಯನಬ್ಜನಿಬಯಸುವ| ಪರಿಯಿಂವನಲಕ್ಷ್ಮಿನಿಮ್ಮಬರ
ವಂಬಯಸು| ತ್ತಿರುತಿರ್ಪಳರಸಬಂದಾ / ದರದಿಂವನಕೇಳಿಯೊಳ್ಪನಾಂ
ಪುದುದಯೆಯಿಂ|| |೨೮|

ವ| ಎಂದುವನಮಹತ್ತರಂ ಬಿನ್ನಪಂಗೆಯ್ವೃಲ್ಕೆಯೆಲ್ದು ಪಗಲೊಳ್ದೊಳರಾ
ಜಂ ತದ್ವನಪಾಲಂಗುಡಲಿತ್ತು ಬಂದಪೆನೆಂದುಕಳುಪಿತತ್ಸಭಾಭವನ
ದಿಂಪೆರ್ದನಂತಃಪುರದೊಳಯಿಂ ಕೆಬಂದುಜಲಜ ಲಿತದಶಶಿಕಾಂತದಸೆ
ಜ್ಜೆವನೆಯುಮುಂ ಬೆಸೆವರತ್ನಮಂಟಪದೊಳ್ಕಟ್ಟಿರ್ದ ಚಿತ್ರಚೀನಾಂಬರ
ದತೆರೆಸೇರೆಯಿಂ ಕಂಚುಕಿಯನೇಗಪದೊಳ್ ಪೊಕ್ಕುಸಿತಾಬ್ಜದಿಂ
ಳ್ಕಿರೆವಸಿರಿಯಂತೆದುಕೂಲದಿಂ ಪಚ್ಚವಡಿಸಿದ ಶಯ್ಯಾತಲದಿಂದಿಳಿ

ರ್ದಸೋಮಪ್ರಭಾದೇವಿ ಯಾಕಕರ ಪಲ್ಲವಮಂಪಿಡಿದೇಳಿಸಿಯದೆನಲ್ಮೆ ವಿಂತಾಂಸನಿಸಿಪದೊಳ್ಕುಳ್ಳಿರ್ದಾಗಳ್|

ಕಂ| ತೊಳಗುವತನಸ್ನಿಗುಗೆರ್ನೆಯಿಂ|ಚೆಳದಳಕಾವಳಿಯನೊಪ್ಪಿ| ನೇವರಿಸುತ್ತಂ! ಗಳದಮಣಿಹಾರವಂ ಕರತ ಳದಿಂತಿರುಪುತ್ತೆರಮ ಣಿಗಂದಿಂತೆಂದಂ |೨೧|

ಚಂ ಜಳರುಹವಕ್ತ್ರೆ ಭೃಂಗ ಕುಳಕುಂತಳೆ ಚಂಪಕನಾಸೆ ಪತ್ತಕೋ| ಕಿಳರವಕೀರವಾಕ್ಯವರಕೋಕ ಪಯೋಧರೆಕೇತಕೀನ ಖ| ಫ್ರಲಸಿತೆನೀಂಪೊದಳ್ದು ವನಲಕ್ಷ್ಮಿಯಸಾಮ್ಯವನಾಂತುದಕ್ಕೆ ಕೋ ಮಳವನಕಿಂತುಪೋಗಿವನ ಕೇಳಿಯನಾಡಿಪಮೆಂ ದನಾನೃಪಂ

ವ| ಅಂತು ಕರ್ಣಾನಪೃತಸ್ಯಂದಿಗಳೆ ನಿಪಿನಿಯಸವಾಕ್ಯಮಂ ಕೇಳ್ದು ಸೋಮಪ್ರಭಾದೇವಿ ತಾಂಪನನಮಂನೋಳ್ಪರ್ಥಿಯಿಂದರ ಹಸಿತವು ಖಿಯಾಗಿ ವರಾವಲೋಕನದಚೆಲ್ವಂ ಬೀರುತ್ತಂಮಹಾಪ್ರಸಾದವೆಂ ದೊಡಂಬಡಲ್ಕಾಗಳ್|

ಕಂ| ಮಡದಿಯನುಡಿನೃಪತಿಗೆಸಿ| ದುಡಿಗೆರೆದದ್ಯೋತಿತಮುಗೆಚಂ ದನದಣ್ಪಿಂ| ಕಡೆಗಣ್ಣೆಳಗದುಗಳದೊಳ್| ಬಿಡದೆಸೆವಲತಾಂತಮಾಲಿ ಯೆನಿಸಿತ್ತಾಗಳ್| ||೨೨|

ವ| ಅಂತತಿಹರುಷಾತ್ಸುಕ್ಯ ಹೃದಯನಾಗಿಪಗಲ್ಬೊಳರಾಜಂವನ ಕೇಳಿಗೆಪೋಗಲೆಂದು ತನ್ನಪೆಂಡವಾಸಂಗಳಂ ಶೃಂಗಾರಂಗೆಯ್ದು ಒರ ಲ್ವೇಳ್ದುಸತ್ಪ್ರಿಯದಿಂಕಂಚುಕಿಯರ್ಗೆ ಬೆಸಸಲ್ಕಾಗಳ್

ಕಂ| ಪತಿಯಾಜ್ಞೆಗಖಿಳಸತಿಯ | ರ್ನುತಪಸ್ತ್ರಾಭರಣದಿಂದೆಮೆರೆ ವುತ್ತೊಲವಿಂ| ರತಿನಾಥನಪಡೆಯೆಂಬಂ| ತತಿಮೋಹನವೃತ್ತಿಯಿಂದೆ ನೆರೆದೇಳ್ತಂದರ್|| |೨೪|

ವ| ಅಂತುಶೃಂಗಾರವ್ಯಂತೇಳ್ತಂದ ಪೆಂಡವಾಸದತಂಡವಂ ಪಗ ಲ್ಬೊಳರಾಜಂ ಕಂಡುಹಾರೈಸಿವಸಂತವನಕೇಳೀ ಪ್ರಸ್ತಾವಭೇರಿ ಯಂ ಪೊಯ್ಸಿಸಂಭ್ರಮದಿಂ ನಿಮ್ಮನಿಮ್ಮವಾಹನಂಗಳ ನೇರುವುದೆಂ ದುನಿಯಮಿಸಲ್ಕಾಗಳ್

ಕಂ|| ಕರಿಣಿಗಳಮೇಲೆಕೆಲಬ| ತುರಗಗಂಗಳಮೇಲೆಕೆಲಬರ್ನೆಸೆವಾಂ

ದೊಳಿರ್ದ | ಉರವರೆಬರ್ಸತಿಯರ್ತಾಗಂ | ಪಿರಿದೊಲವಿಂದೇರಿವ
ದರತಿಸಂಭ್ರಮದಿಂ| ||೬೫||

ವ| ಮತ್ತಮನಂತರಂ ಖಗಲೋಕಲರಾಜಂ ಪಣ್ಣಿಬಂದಿರ್ದ ಕ್ಷ
ದ್ರನ ಸಮೀಪಕ್ಕೆಯ್ತಂದಾಗಳ್||

ಕಂ|| ಸುರಗಜವಮಂಶಚಿತರಸಾ | ಸುರಪತಿನಲವಿಂದಮೇರುವಂದ
ನಂತಾ| ವರಸೋಮಪ್ರಭೆಗೂಡಿಭ| ವರಸನಡರ್ದೇರಿಪೊಡಲ್ಲದ ಚೆಲ
ಳನೃಪಾಳಂ| ||೬೬||

ಮತ್ತಮಾಗಳ್

ಕಂ|| ಸುಮಿಹಿರಮಂಡಳಮಾಸಂ | ಭ್ರಮವಂನೋಡಲ್ಸಹಸ್ರಮ
ಖದಿಂಬಂದಂ| ತಮಳಾತಪತ್ರತತಿಭೂ | ರಮಣಂಗೆಮಧೂಸಿಕಾದು
ಕೊಪ್ಪಿದುದಿಂಗಳ್| ||೬೭||

ಘನತರಸಂಭ್ರಮದಿಂದಂ | ಒನದವಿನೋದಕ್ಕೆ ತಕ್ಕಪರಿಜನಸ
ತಂ| ವನಿತಾತತಿವೆರಸುಮನೋ | ಜನತೆರದಿಂತಳರ್ದನಂದುಚೆಲ
ಳನೃಪಾಳಂ| ||೬೮||

ವ| ಅಂತುಸರ್ವಸಂಭ್ರಮಮೆಸೆಯ ಖಗಲೋಕಲರಾಜಂನಿಜಪುರದಿಂ
ತಳರ್ದವನಪರಿಸರಕ್ಕೆಯ್ತಂದು ನೋಳ್ಪಾಗಳ್||

ಚಂ| ಸುರುಚಿರಪಲ್ಲವಂತೆರಲತಾವಳಿಗಳ್ಸ ಉಪುಪ್ಪಸಂಕುಳಂನೆ
ಮಿಡಿಬುದ್ಬುದಂವಿಚಕಿಳಂ ಪೊಸಮುತ್ತುಮುಕೋಕವಿದ್ರುಮಂ ಬ
ಬದರೀಫಳಂ ಮಣಿಸರೋಜಮುಶಂಖಮು ನೋಕಕೋಕಿಳ ಸ್ವನ
ದುಘೋಷಮಾಗೆವನಮಬ್ಧಿಯು ವೋಲ್ವಿರಿದೊಪ್ಪಿತೋಗುಗಂ|

ವ|| ಅಂತಾವನೋಪಕಂಠದೊಳ್ಖಗ ಲೋಕಲರಾಜಂನಿಜಸೌಂದರಿ
ಸಂದೋಹಂಬೆರಸು ಸಿಂಧುರಸ್ಕಂಧದಿಂದ ವನೀತಳಕ್ಕವತರಿಸಿವನಮ
ರಿಕೇಳೀಯೋಗ್ಯಮಪ್ಪ ಕತಿಪಯಪರಿಜನಂತದ್ವನದ್ವಾರಮಂಪೊಕ್ಕ
ಗಳ್||

ಮ|| ಸ್ರ|| ವಿಲಸನ್ನೇತ್ರಾಂಶುಮಿಂಚಂ ದೆಸೆಗೆಕರೆಯೆಸೋಮಪ್ರ
ಮುಖ್ಯಸತ್ಕೋಕಿ| ಮಳಕಾಂತಾವೃಂದಮತ್ಯುತ್ಸವದೆ ಬಳಸಿರಲ್ಪಿಂದಿ
ಕಾಮಧ್ಯದೊಳ್ಪ ||ಜ್ವಲಿಸುತ್ತಿರ್ಪಂದು ವೆಂಬಂತೆಸೆವುತೆವನಪ
ರ್ಪವಂ ತ್ರಿಪ್ರಯುಕ್ತಂಲಲಿತೋರ್ವೀ ಜಾತಮಂನಿಟ್ಟಿಸುತೆನೆ

ನಂತಾಗಲಾಚೋಳಭೂಪಂ॥ ॥೪೦॥

ವ॥ ಅಂತಾಪಗಲ್ಚೋಳರಾಜಂ ನರ್ಮಸಚಿವಂಬೆರಸುನಡೆದುನೋಳ್ಪಗಳ್॥

ಚಂ॥ ತಳಿರ್ಗಳಿತೋರಣಂಮಿಸುಪಲರ್ಗುಡಿ ಪೂಗೊಳನುದ್ಘ ದರ್ಪಣಂ ವಿಳಸಿತಬೀಜಪೂರಕವೆ ಪೊಂಗಳಸಂಗಿಳಿಪಾತಕಂಪಿಕಂ ಸ್ಖಲಿತಗಾಯಕಂಲತೆಗಳಂ ಗನೆಯುಭೃಂಗಪುರಸ್ವರಾನಕಾವಳಿಯುನೆಭೂಷನಂ ಪ್ರಿಯದಿನಂದಿದಿಗೊರ್ಂಡನ ಗಾಢಮಾಧವಂ। ॥೪೧॥

ವ॥ ಅಂತಾಮಾಧವಂ ಪ್ರಿಯದಿನಿದಿಗೊರ್ಂಡುದಂಕ್ಕೈಕೊಳುತಾನಂದದಿಂಸೋಮಪ್ರಭಾದೇವಿಯು ವೆರಸುಪಗಲ್ಚೋಳರಾಜಂಪರಿಹಾಸಕನಕಕರಮಂಪಿಡಿದು ತದ್ವನದಸಿರಿಯಂನೋಡು ತಂಬರ್ಪಾಗಳ್ಮಂದೊಂದೆಸೆಯೊಳ್।

ಕಂ॥ ಪುರುಡಿಪಮಲ್ಲಿಗೆಗಳ್ಗಾ। ಸುರದೆಸಿಜಾತಿಯೊಳೆನೆರೆದಡಿಲ್ಲಿನುತೆದಿಬ। ಕ್ಕುರಿವೊಕ್ಕುಪೊರಮಡುವವೆನ। ಲ್ಕಿರದೆಸೆದುವುಮುತ್ತದಲಗಳಳಿಗಳನಿಕರಂ। ॥೪೨॥

ಮತ್ತಂಮಂದೊಂದೆಡೆಯೊಳ್।

ಕಂ॥ ಸ್ಮರನಿಳೆಯೊಳ್ಸರಿಕಳೆಯಿಂ। ಪರಿಮಳದೊಳ್ಪೊರೆದುಬಿತ್ತಿಬಮರ್ದಂಪೊಯ್ದಾ॥ ದಱದಿಂಬೆಳೆಸಿದಕಳಂಕಂ। ಧರಿಯಿಸಿಕರ್ಪೂರಕದಳಿಯೆನಿಸುತ್ತೆಸೆಗುಂ। ॥೪೩॥

ವ॥ ಅಂತುಕಂಪುತಂಪುವಿಂ ಪುಪೆತ್ತಕರ್ಪೂರಕದಳಿಯಂಕರ್ಪೂರಗೌರವದಾಜ್ಞಭೃಂಗ ನಪ್ಪಪಗಲ್ಚೋಳರಾಜಂನೋಡುತ್ತಂನಡೆಮುಂಪೊಂದೆಡೆಯೊಳ್,

ಕಂ॥ ವರಫಲಪಿತರಶೀಲಂ। ಧರಣಿಪಭೋಗಾನುಕೂಲಮುರುಶುಕಲೀಲಂ ಪರಭೃತಪಾಲಂಪೊರೆದುದು ಪರಿಗಾಯದ್ಭೃಂಗಮೂಲಮುಪ್ಪೃತರಸಾಲಂ, ॥೪೪॥

ಚಂ॥ ಅಲರ್ಗಳಬಂಡುಭೂಸಿದವಿಭೂತಿ ತಳಿಗಳೆಕಾಪಿಕಾಖೆಗಳ್ ಲಿತ್ತಜಟಾಕಳಾಪವಿಡಿದಿರ್ದಫಳಾವ್ರಯ ಕ್ಷಮಾಲೆಕೋಗಿಲೆಗಳಪಂಚಮಸ್ವರಮೆಮಂತ್ರಪಾಳಿಧ್ವನಿ ಪಾಡುಕೀರಸ್ತಾವ್ರಲಿನು ತಿಯಾಗೆ ಓಮಾನಿಯುಂ ... ದೊಳ್ದಿದ... ದೊಂದಮಾಪ್ರಿರಂ॥ ॥೪೫॥

ವ॥ ಅಂತಾಮನೋಹರಮಪ್ಪ ಮಾಕಂದಮಂ ಸೌಂದರೀ ಸಾಜ್ಞಾ ಹಂ ಚೆರಸುಪಗಲ್ತೋಳರಾಜಂ ನೋಡುತ್ತಂ ನಡೆವಾಗಳ್ಮಂದೊಂದೆಡೆಯೊಳ್॥

ಮ। ಸ್ರ। ಪರಿಪಕ್ವಂ ಬೆತ್ತಪಣ್ಣಂ ನೆಖದಿ ನಿರಿದುಸೋರ್ವಾರಸಾಸ್ವಾದನಂಗೆ ಯ್ದುರೆಗಣ್ಣಂ ಪುಟ್ಟಿ ಪಕ್ಕಂ ನಿಮಿರ್ದೆಳಲೆಮಹಾನಂದಮಂ ತಾಳ್ದು ಮತ್ತ್ಯಾಸುರದಿಂದಂ ಸೊಕ್ಕಿ ಕೀಳ್ಗೊಂಬಿನೊಳೆ ತಪಕಮೆಟ್ಟುತ್ತ ಕೂರ್ತೆರ್ಗೀಡುತಂ ನುಣ್ಗಿರಳಂ ಸೈಕತ್ತಿ ಪೇಳ್ವೆಳನುತೆ ಗಳಪಿದತ್ತಾ ಮ್ರಪೊಳ್ತಾಮ್ರತುಂಡಂ। ೪೬

ವ॥ ಅಂತಾಗಿಳಿಯ ಲೀಲೆಯಂ ಭೂಪಾಳಂ ನಿಜವಲ್ಲಭೆಗೆ ತೋರುತ್ತು ನಡೆವಾಗಳ್ಮಂದೊಂದೆಡೆಯೊಳ್।

ಕಂ॥ ತೊಳಗುವಪೊಸಬೆಳ್ದಂಗ। ಳ್ಪಳಸಿದಸುರ ಘೂಜದಂತಿರಲರ್ದ ಲಗಳಸುಜ್ವಳಿಸುತಿಡಿದಿರ್ದಪಲ್ಲಿಗೆ। ಗಳನುಷ್ಪ್ಯದೊಳಿರ್ದುದೊಂದು ಫಲತರಸಾಲಂ॥ ॥೪೭॥

ಮ। ಸ್ರ। ಪರಪುಷ್ಪಶ್ರೇಣಿಚಾಪಂ ಬಹುಳಪರಿಮಳಂ ಸದ್ಗುಣಂ ತುಂಬಿಬಾಣೋತ್ಕರ ಮೊಪ್ಪುತ್ತಿರ್ದ ಪಕ್ವಾಮ್ರತ ಫಳತತಿ ಭೂಷಣಾಪರ್ಣಾಳಿವಸ್ತ್ರಂ ಪರಪುಟ್ಟಾನೀಕವೆಲ್ಲಂ ಪಡೆಲತೆರತಿಯೂ ನಲ್ಮನೋಜನೆಬಂ। ತಿರೆನಾನಾಭೋಗಜಾಳಂ ಮೊರೆದು ಮವಿರಹಿ ವ್ರಾತಕಾಳಸನಾಳಂ। ೪೮

ಮತ್ತಮಲ್ಲಿ

ಚಂ॥ ಪರುಚಿರ ಗುಚ್ಛಮಾಳಾವಳಿಗಳ ಗ್ರಪೋಳಾದಿಸಮಂತು ಕೇಸರೋತ್ಕರನನೆಸೂಸಿನುಣ್ಪೆ ಸೆವಕಂದಳಿಪೊರ್ಣಂಗಲಿ ನೊಳ್ಪುಸುರ್ದರಲ್ಗ ರಲ್ಗಳಬಂಡನುಂಡುಕಡುಸೊಕ್ಕಿ ಮುದಂಬಿಗೆಪಕ್ಕವೆತ್ತಿರ್ದುಂ। ಕರಿಸು ತಮುಂಬಿಸಂಚರಿಸುತಿರ್ದುವು ಪಳಿಪ್ರಜಮುದ್ಯಚೂತದೊಳ್ ॥೪೯।

ವ॥ ಅಂತುತುಂಬಿಪಳಿಗಳಬಳಗಮಂ ಪಗಲ್ತೋಳರಾಜಂ ನೋಡಿ ಹಾರೈಸುತ್ತಂ ಪೋಗೆಪೋಗೆ ವಂಗೊಂದೆಡೆಯೊಳ್

ಕಂ॥ ವನಲಕ್ಷ್ಮಿಗೆ ಮಧುರಾಜಂ। ಮನವೊಲ್ದಿತ್ತಿಸಿದಮಿಸುಪಪಟ್ಟೆಯ ಕೊಡೆಯೊ। ದೆನೆಚೆಲ್ವಂಬೀರುತ್ತಂ। ಘನತರದಿತಳ್ತ ಬಾಳಚೂತಮದೆಸಗ್ಗುಂ॥ ॥೫೦॥

ವ॥ ಅಂತಾಬಾಲಚಕೋರದಚಲ್ವಂ ಪಗಲ್ಗೋಳರಾಜಂನೋಡುತ್ತಂ ಪೋಗೆಪೋಗೆಮುಂದೊಂದು ತೆರಪಿನೊಳ್ಮೃಗಮದದಿಂಸಮೆದಕುಟ್ಟಿ ಮತಳಂಗಳಂ ಚೆನ್ನದಪಂಕದಸಾರಣೆ ಗಳಂಸಪ್ಮಾತಮುಪ್ಪಪನ್ನೀರಚ ಳಯಂಗಳಂ| ಮೇಲಿಕೆದರಿದಕರ್ಪೂರದಪಳುಕಿನಪ್ರಾವಲಿಗಳಂ ದಟ್ಟೈಸಿಕಟ್ಟಿದ ಬಾಳವೇರತೇರ್ಗಳಿಂನಳಿನಳಿಸಿಪೊಳೆವಬಾಳೆಯುಕಂಭಂಗಳಿಂ ಪುನ್ನಾಗದವಿಸುಪಲಗೊಂಚಲಜಂತೆಗಳಿಂಪೂಗಾಂಗಿನವಿಸುಪತೊಲೆಗಳಂ ದವನದಮೇಲ್ಪೊದಕೆಗಳಿಂಬಕುಳಕುಟ್ಮಳದ ಸೂಸಕಂಗಳಿಂ. ವಿಸುಪಪೊಂದಾವರೆಯುಘಟ್ಟಗಳಿಂಸಿಂದುವಾರದಚಾಮರಂಗಳಿಂ ತೆರುಣಕದಳೀದಳದ ಮೆಲ್ಕಟ್ಟುಗಳಿಂಕಂಡರಿಸಿ ದತಪೂಲಪತ್ರದಚಿತ್ರಂಗಳಂ ಅಶುಗೆಯುವಿಕುಪಪೊಸಗುಡಿಗಳಿಂವಿಚಕಿಳಪ್ರಸೂನಪ್ರಸರದತೋರಣಂಗಳಿಂ ಕಣ್ಗೆಕೌತುಕಂಬೆತ್ತೆಸೆವ ಕಂಪಿನಕಾರಾಗೃಹಮೆನಿಪವ ಸಂತಕೇಳೀಸದನ ಮಂಪಗಲ್ಗೋಳರಾಜಂಸೋವಪ್ರಭಾದೇವಿಯ ವೋದಲಾದ ರಾಣಿವಾಸಂಗಳ್ವೆರಸೊಳಗಂ ಪೊಕ್ಕಲರ್ವಾಸಿನೊಳ್ಕುಳ್ಳಿರ್ದುವಂದನವೀಣೆಯೆಂಬ ಗಾಯಕಿಯುವೊಗವಂ ನೋಡಲ್ಕವಳರಸನಿಂಗಿತವುನರಿದು ವೀಣೆಯಂತೆಗೆದುಬಾಜಿಸುತ್ತಾಗಳ್

ಚಂ॥ ಶ್ರುತಿಗಮನಂಬಜಾವಣೆನಯಂವಳಿಯಗ್ಗಣೆಘಾತುರೀತಿಕಂಬತವನುಜಾಯಿಶುದ್ಧಿ ಗತಿಯೊಪ್ಪಿರೆ ಶುದ್ಧವಸಂತರಾಗವುಂನುತಿಯಿಗೆ ಮಾಡಿಕತ್ತ್ರಪದ ಗೀತಚಯಂಗಳನುರ್ವಿಪಾಡಿದಳ್ ಕ್ಷಿತಿಪತಿಮೆಚ್ಚೆ ಮದನ ವೀಣೆಯುನಿಪ್ಪಸುಜಾಣೆರಾಗದಿಂ॥ ॥೫೧॥

ವ॥ ಅಂತಾಗಾಣೆಯುವಾಡಂ ಕೇಳ್ದು ಹಾರೈಸಿಮುಚ್ಚು ಗೊಡುತಿರ್ಪ ರಾಜನಪರಿವೃತದೊಳಿರ್ಪ ಕಾಂತಾಜನಂಪುಷ್ಪಾಪಚಯದೊಳ್ಮನಸ್ಕರಾಗಿ

ಪ॥ ಕುರುಳಂಸಂವರಿಸುತ್ತೆಜೋಲ್ವಮುಡಿಯಂ ಸೈತಿಕ್ಕುತಂಜಾರುತಿ.ರ್ಪುರುಸಂವ್ಯಾನವುನುದ್ಧಪೀ ವರಕುಚಕ್ಕಂನಾರ್ಚುತಂಕಾಂಚಿಯಂ ಕರದಿಂದಂಕಣೆಗೆತ್ತುತವ್ಮಿನುಪಹಾರಂ ತೂಗಲೊಪ್ಪಿತ್ತುನಿರ್ಝರದಿಂದಾಗಳಿಳೇಶಾಜ್ಞೆಯಿಂ ... ॥ ೫೭

ಕಂ|| ಶಶಿಮುಖಿಯುರುಚರಣಂಗಳ| ವಿಶದಮಣಿಪ್ರಸರಬಿಚಿತ್ರನೂಪು
ರರವಂಡಶಡಿಶೆಯುನೆಯ್ದಿ ರತಿನಾಥಶರಾಸನಟಂಕೃತಕ್ಕೆಸಮಮೆನಿ
ಪನರ್|| ||೫೪||

ನುಡಿಗೆಗಿಳಿದನಿಗೆಕೋಗಿಲೆ ಮುಡಿಗೆಮಯೂರಂಪಯೋಧರಕ್ಕೆ
ಥಾಂಗಂ| ನಡೆಗೆಮರಾಳಂಸೋಲ್ತು| ಯೊಡನೆಬರಲ್ಕೆಡೆದರುಲಿಯು
ತ್ತುಣ್ಗೊಯ್ವೆಲ್|| ||೫೫||

ವ|| ಅಂತಬಯಲೆನೆಡೆದುನೋಡಲೊಲ್ಕುದುವುಗಳಂತಂದು||

ಕಂ| ಎಳೆಮಾವಂಗಭವಂವಿಚ| ಕಿಳತೆರತಿಯೆಂದುಮಾಡಿನಿಜಭಕ್ತಿ
ಪಿಗ ಲ್ತರ್ಪ ಟ್ಟೆಪರಿಮಳದ| ಗನೆನರ್ಚಿಸಿದರ್ಲತಾಂಗಿಯರ್ನ
ಲಿದಾಗಳ್|| ||೫೬||

ವ| ಅಂತರ್ಚಿಸಿಗಲತಾಂಗಿಯರ್ಮತ್ತಮಾಗಳ್|

ಮ|| ತುದಿಗಾಲಂಥಕೆಗೂರ್ಚಿಚಾರುಭುಜಮಂಸ್ಯೆತ್ತಿಶಾಖಾತ್ಯಮಂ
ಪದಪಿಂ ವಾಮಕರಾಗ್ರದಿಂಪಿಡಿದುತಗ್ಗಿಸ್ಕುತ್ತಿ ಕಂಕೆಲ್ಲಿಭುಜದಪ್ಪ
ಸ್ತಬಕಂಗಳಂಸಿಜನೆ ಖಪ್ರದ್ಯೋತಿವಿಭ್ರಾಜಿಸ ಲ್ಸದತೀರತ್ನಮಯೂ
ರ್ವಳಥಿವಿಗೆತಾಂಕುಯ್ವಳ್ಮಹಾಲಿಲೆಯಿಂ|| ||೫೭||

ವ. ತ್ತಮೊವಳ್||

ಕಂ|| ಶಿರಪಿದ್ವಿರದದನಂಗಜ| ಹರಿಸೀಳಲ್ಕುದಿರ್ದ ತೋರಮುತ್ತ
ಗಳಂಸಾ| ದರದಿಂಡಮಾಯ್ದ ರತಿಯುಂ| ತಿರೆ ಬಕುಳದಕುಟ್ಮಳಂಗಳಂ
ಸತಿಕೊಯ್ವಳ್|| ||೫೮||

ಪರಿಮಳವಿರಹಿತವಕ್ಕ್ರಂ| ಸಿರುತಂಲವಣಾಬ್ಧಿಜಂಗಳೆನೆ ತಂಮುಕ್ಕೆ
ತ್ತುರಗುಂಪಳವೃತ್ತಿಪಾ| ಸುರಹೊನ್ನೆಯುಕುಟ್ಮಳಂಗಳಂಸತಿಶಿರಿಪಳ್

ವ|| ಮತ್ತಮೊರ್ವಳ್ಚದುರೆ

ಕಂ|| ತರುವಡದಿರ್ದೀಕ್ಷಸಲಲ್ಲಿ ದುರಗಂಗಳ್ಕುಡಿಯುನುಗ್ರಸಿಖಿಪೆ
ನುತಂಬಿದ್ದಿರದೊಡೆನಗುತಂ| ಪರವಘುಚಂದನವತಳಿಗರ್ಳಂ| ನೆರ
ಕೊಯ್ದುದೇ|| ||೫೯||

ಮ|| ಮತ್ತಮೊರ್ವಳ್



ಕಂ|| ಬಿಳಿಯಮಲ್ಲಿ ಶ್ರೀಯಂನೆ| ಬಿರಯಿಸುತಂಕಂಪನೀಕ್ಷಿತ

ಲರ್ದಸೆದಿಪಾಗ| ಸುರಗಿರಿಯ ಕುಸುಮೋತ್ಕರಮಂ, ಸರಸಿಜದಳನಯನೆಕೊಯ್ದಳುತ್ಸವದಿಂದಂ||

ಮತ್ತಮೊರ್ವಳ್

ಮಲಿನಾಂಗಂ ಮಧುಪಂಚಂ | ಚಲನಳಿಯೆಂದಟ್ಟಿಲೀಯದಮಳತೆ ಯಿಂತಾ ನಲರ್ದಸೆವ ಚಂಪಕೋತ್ಕರ| ದಲರಂ ಲಲಿತಾಂಗಿ ನಲಿದುಕೊಯ್ದಳದೊರ್ವಳ್| |೭೧||

ಘನಮಘರಾಜನಬರವಿಂ| ಗನುರಕ್ತತೆವೆತ್ತುತೆಂಬವೊಲ್ಕೆಂಪಿತಂ| ಪಿನೊಳತಿವಿಭ್ರಾಜಿತನೂ || ತನಪಾಟನದಲಗಳಂ ತನೂದರಿಕೊಯ್ದಳ್|

ವ|| ಮತ್ತಮೊರ್ವಳ್

ಕಂ|| ತರುಣಿಯಶೋಕೆಯನುಣ್ದಳಿ| ರರಳ್ಗಳಿಯೆಡೆಯೊಳ್ಬಿಳಾಂಶು ವಿಂಕೆಂಪಳದಿಂ| ಪರಿಕಿಪೊಡೆಬಿಳಿದು ಕೆಂಪಾಗಿರೆ ವಾಯದವರಸೆನುತ್ತೆ ಬೆರಗಾಗಿರ್ದಳ್|| ||೭೨||

ವ| ಮತ್ತಮೊರ್ವಳ್|

ಕಂ|| ಕುಸುಮೇಷು ಕುಸುಮಚಾಪಂ | ಕುಸುಮಾಯುಧನೆರೆಬಪೆಸರ ಸತನುಗೆಕೊಟ್ಟಾ| ಮಿಸುಗುವ ಪೊಸಪುಲ್ಲಿಗೆಗಳ | ನೊಸಗೆಮಿಗಲ್ಪಿಸಜ ವದನೆಕೊಯ್ದಳದೊರ್ವಳ್ |೭೩|

ಜಾತಿಯೆನಿಸುತ್ತಮುತ್ತಮ | ಜಾತಿಯನಿಪ್ಪದು ವಸಂತಋತುವಿನೊಳೆನುತಾ| ಜಾತಿಯ ನಗುವಂತಲರ್ದವಿ | ನೂತನಸೇವಂತಿಯ ಕುರಲನಂಗನೆಕೊಯ್ದಳ್ |೭೪||

ಮತ್ತಮೊರ್ವಳ್

ಚಂ|| ಬಗೆಮಿಗೆಬಂದು ಪೂಗೊಳನ ನಾರ್ತದೆಪೊಕ್ಕು ನಿರೀಕ್ಷಿಪಾಗಳಾಸೊಗಯಿಪಮುಗ್ಧೆ ತನ್ನ ಮುಖಚಂದ್ರಮನಿಂಪಲರಿರ್ದಪಂಕಜಂ ಮುಗಿದುದ ಪಸ್ಪಿನಿಂ ಮುದದೆಕೈರವಮುಂ ತಲರಿರ್ದುತೋರೆ ನೆಟ್ಟನೆ ಬೆರಗಾಗಿ ಭಾಪಿಸುತೆ ಮಾಯದ ಪೂಗಳೆಂದು ಬೆಚ್ಚಿದಳ್||

ಕಂ| ಪದ್ಮಮುಖಿ ಪದ್ಮಲೋಚನೆ ಪದ್ಮಪರಾಗಾಂಗಿ ಪದ್ಮಗಂಧಿಯೆನಿಪ್ಪಾ ಪದ್ಮಿನಿ ಪದ್ಮವ್ರಜಮಂ ಪದ್ಮಾಕರದಲ್ಲಿ ಕೊಯ್ದಳುತ್ಸವದಿಂದಂ|

ಕುವಲಯಬಂಧುನಿಭಾನನೆ| ಕುವಲಯದಳನೇತ್ರೆಯೆನಿಪಕಾಮಿಯರ್ವರ್| ಲ್ಕುವಳಯದಲಕಂಕೊಯ್ದಳ್ | ಕುವಲಯಪತಿಗೆಂದು ಹರುಷದೊಳಾಗಳ್

ವು| ಮತ್ತೆವಿನೋದರಿಯೆ..ಕ್ಯಾಂತಾಸಂತಾನಂಲತಾಂತಾಪಚಯಮಂ ಶೀರ್ಚಿಯನಂತರಂ ಲತಾಮಂಟಪದೊಳಪೊಕ್ಕುಸಂತೋಷದಿಂದಾಗಳ್|

ಕಂ|| ತನಿಗಂಪಿಂಗೆಬೆನುಂಗುವ| ಘನತರದಳಿಯಿಂದಪೊಸೆವ್ವಕುಸುಮವ್ರಜಮಂ| ವನಿತೆಯರೊಲವಿಂದಂಭೋಂ| ಕನೆಕಡಳ್ಳೀಪತ್ರದಿ ದೆಕಟ್ಟಿದರಾಗಳ್| |೬೯|

ವ| ವತ್ತುರಿಸುರಗಿಯಗರ್ಘರೆಗಳಂ ಸುರಹೊನ್ನೆಯನೂಪುರಂಗಳಂ ಮುಚಕುಂದದವಾಯವಟ್ಟಂಗಳಿಂ ಸರಸಿರುಹಪತ್ರಾಂಶುಕಂಗಳಂ ಪಾಟಳಿಯಕಾಂಚೀದಾಮರಿಗಳಂ ಕುಮುದಕುಟ್ಮಳಕಿಂಕಿಣಿಗಳಂಕರ್ಣಿಕಾರದಕಂಚುಕಂಗಳಂ ತೊಳಪಿರವಂತಿಯಶುದ್ಧಸರಂಗಳಂ ವಿಸುಪದಿರ್ಗಂತಿಯ ಕೇಯೂರಂಗಳಂ ಸಿಂಧುವಾರದಬಾಹುಪೂರಂಗಳಂ ಕೇತಕಿಯಕರ್ಣಪೂರಂಗಳಂ ದುಂಡುಮಲ್ಲಿಗೆಯಮೂಕುತಿಗಳಂತಮಾಲದಮಕರಿಕಾ ಪತ್ರಂಗಳಂತಿಳಕದತಿಳಕಂಗಳಿಂ ಪೊಂಬಾಳೆಯಶ್ರಸಕಂಗಳಂ ಸೇವಂತಿಯಸೇಖರಂಗಳಂ ಮನೋಹರಮೆನಿಪ್ಪಿರಚಿಸಿತಮತಮಗೆ ಮಸದನಂಗೊಂಡುಪೆಂಡವಾಸದೆಳೆವೆಂಡಿರ ತಂಡಂ ವಿಳಾಸದಿಂದಿರ್ದಾಗಳ್

ಕಂ|| ಲಲನಾಜನವೊಲವಿಂದಂ| ಸುಲಲಿತಹಿಂದೋಳರಾಗಮಂಪಾಡುತ್ತಂ| ತಳಿರುಯ್ಯಲ್ಗಳನಾಡಿದ| ರಳಿಕುಲವರ್ದೋಡವಿಗೋತುಖೂಡನಾಡುವಿನಂ| ೭೦

ಅಂತವರೊಳೋರ್ವಳ್ವಿಳಾಸವತಿ

ಚಂ| ಸುರಗೆಯನೂಪುರಂಕವುಳ ಸೂತ್ರದಮೇಖಳೆಚಾರುಚಂಪಕೋತ್ಕರದಲಗರ್ಂಕಣಂ ಬಕುಳಕುಟ್ಮಲದಿಂ ಸಮೆದಿರ್ದಹಾರವಲ್ಲರಿಪೊಸದುಂಡು ಮಲ್ಲಿಗೆಯ ಮೂಕುತಿ ಕೇದಗೆ ಯೋಲೆಯೊಪ್ಪೆಸಾಗಂ| ದೊವನಲಕ್ಷ್ಮಿಯಂತೆಸೊಬಗಿನ ...ಶಾಖೆಯೋಳ್

ವ॥ ಅಂತೀಪರಿಯೊಳ್ತಿಳಿರುಯ್ಯಾಲನರ್ಥಿಯಿಂದಾಡಿ ಕೆಲಕಾಮಿನೀಜನಂಸಲ್ಲೀಲೆಯಿಂ ಪುಗುಲ್ದಾಗಳ್॥

ಕಂ॥ ಕಿರುಬೆಮರಿಡುತಂಪಬ್ಬಿದ, ಸಿರಿಯಂಸಾವಗಿಸುತಳಕವುಂತಿರ್ದತ್ತಂ। ಸರುಗಂಪಿನಲರತೊಡವಿಂ। ಮೆರೆವುತ್ತಬಲಾಳಿದೇಶಿವೆತ್ತೀಲ್ಡಂದರ್॥ ।೭೬।

ವ॥ ಅಂತುನೃಪನೆಡೆಗಲ್ತಂಪು ತಮತಮಗೆಪುಷ್ಪಂಗಳಂಕುಡುವಕಾಂತಾಜನದೊಳಗೊರ್ವಳ್॥

ಕಂ॥ ಅಲಗಣೆಗಳವುಡಿಗೆಯಂ। ನಲವಿಂರತಿಚಿತ್ತಜಂಗೆನೀಡುವತೆರದಿಂ। ಜಲಜಲಿಸುವಪೊಸಕೇದಗೆ।ಯಲರಂತಂಪಬಲೆತನ್ನೃಪಾಲಂಗಿತ್ತಳ್॥ ।೭೭॥

ವ॥ ಅಂತೀಪರಿಯೊಳ್ಬೇರೆಬೇರೆ ಸೌಂದರೀಯಸಂದೋಹಂತಂದಿತ್ತಪರಿಮಳಕುಸುಮವೃಂದವುಂ ಷಗಲ್ಪೊಳರಾಜಂಸಾನಂದದಿಂತಾಳ್ದಾಗಳ್॥

ಕಂ॥ ತನುಗಳಘರ್ಮದಿನೊಪ್ಪುವ। ವನಿತಾಸಂತತಿಯುವನವಿಹಾರಶ್ರಮುಮಂ। ಜನನಾಥಂಪರಿಹರಿಸ। ಲ್ಕನುನಯದಿಂವಾರಿಕೇಳಿಗದ್ದನದಾಗಳ್॥

ಚಂ॥ ವನಲತೆಕಾಮಿನೀನಿಕರಮಾದು ದೊಕ್ಕೈರವಮಿತ್ರಲೀಷ್ಯವ।ನಿನಿಯರತಂಪವಾದು ದೊತಟದ್ಭ್ಯತಿಭಾಮಿನಿಯರ್ಕಳಾದುದೋ। ಮನಸಿಜಮೋಹನಾಸ್ತ್ರಮಬಲಾವಳಿಯಾದುದೊತಾನೆನಲ್ವಘೂಜನಮಿರದಂಬುಕೇಳಿಗೊಲವಿಂ ನಡೆದತ್ತವನೀಶನಾಜ್ಞೆಯಿಂ॥ ೭೯॥

ಅಸಮಯದೊಳ್

ಮ॥ ಧೃತಚಕ್ರಾಂಕವುಳಾಂಕಿತಂಕುವಳಯಾ ನಂದಸ್ಯದಂಹಂಸಕೋ। ಭಿತನುದ್ಯದ್ಭವನಾತ್ಮಕಂ ಕವಿನುತಂಗೋಪಾಲಕಂ ಕರ್ದಮಾನ್ವಿತಮುಬ್ಜಾಕರಮೊಕ್ಷಿಸಲ್ಕ ಮುದುಸಪ್ರಕ್ಷೀಕೃತತ್ವಂಮಹೋನ್ನತಿಯಿಂ ತನ್ನೊಳರಲ್ಕಿದೈತ್ಯಹರನಂ ಮಿಕ್ಕಿರ್ಪುದಾಶ್ಚರ್ಯದಿಂ॥

ವ॥ ಮತ್ತಮಾಸರಸಿಯೊಳ್

ಮ॥ ಅಳಿವೃಂದಧ್ವನಿಜೃಂಭಿತಂ ಬಿಸಜಪರ್ಣಂಕರ್ಣತಾಳಂಪುಕೋತ್ಪಳಸಂಜೋಹಿಪರಾಗಮೋಮುಘ ಜಲಂತಾನಾಗಿಕಾಸಾರವೊ

ಛ|| ಸಲಿಲನಿರಾಟಮನಾಡಿಕಂಜಲ ತೆಯೆಂಬಾಕುಂಡಮಂ ತೀವು
ತಂ| ನಲವಿಂದರ್ಘಕದುಂಬಿಯುಂತೆ ಸುಳಿದಂಸಲ್ಲೀಲೆಯಿಂಪಾರುತಂ|
ವ|| ಅಂತಾಸರೋವರಮುರಂತನಂ| ಭೂಪಾಳಂಮನದೆಗೊಂಡು
ಳ್

ಕಂ|| ಕ್ಷಿತಿಪತಿಸೋಮಪ್ರಭೆಪೆರ| ಸತುಂಳೋತ್ಸವದಿಂದೆವಳುಕಿ
ದಂಸಮೆಡೂ| ರ್ಜಿತಸೌಪಾನಂಗಳನಿಳ | ದತಿಂಜಿಪಸರಸಿಯು
ಮುಬಂಮಿಗೆಪೊಕ್ಕಂ|| ||೭೪||
ವ| ಅಂತಾಪಗಲ್ಚೋಳರಾಜಂ ಸರಸಿಯಂಪುಗಲ್ಪಿಂದೆಬರುತಿರ್ಪ
ಪೆಂಡವಾಸದತಂಡದೊಳ್ಕೆಲಂಬರ್
ಕಂ| ಪಳುಕಿನಸೋಪಾನಂಗಳ | ನಿಳಿವೆಡೆಯೊಳ್ತಮ್ಮನೆಳಲಸಿತರು
ಪತ್ನೀ | ಕುಳಮುರೆತುಳಿವುದೆನುತ್ತ | ಗ್ಗಳಿಕೆಯುವನಿತಾಳಗುಜ್ಜು
ಟ್ಟುತೆನಪೆದರ್|| |೭೫|
ವ|| ಅಂತೀಪರಿಯೊಳ್ನಡೆ ದುಗಾವಿಕಾತಿಯರಪ್ಪ ಕಾಂತಾಜನ
ರೋವರಮಂಪೊಕ್ಕುತಡಿಯೊಳ್ನಿಂದಿರ್ದಾಗಳ್
ಕಂ|| ಸರಸಿಯುಪರಿಸರದೊಳ್ಸುರು| ಚಿರಹಿಮವೃಗನಾಭಿಘುಸೃಣ
ದನರಸದಪಿರಿದೆಸೆವಮಿಸುಪ್ಪಮಿಸುನಿಯುಪರಜಲಯಂತ್ರಂಗಳಿಂದ
ಲೆಯುರೆಸೆದರ್
ವ|| ಅಂತುಜಲಕೇಳಿಗುತ್ಸುಕರಾಗಿರ್ದ ಕಾಂತಾಸಮೇತಂ
ಕಾಂತಕೊಳನಂಪುಗುವಾಗಳ್
ಕಂ|| ಸಡಗರದಿಂಪಿಭುವೆರಸಾ| ಮಡದಿಯರಂಬರದಸೆರಗಸೋ
ಕುತ್ತಂ| ಗಡಣದಿಕಣಕಾಲ್ಮೋಣಕ್ಕಾ| ಲ್ತೊಡೆಕಟಿನಡುಮಟ್ಟ
ದೆಕೊಳನಂಪೊಕ್ಕರ್
ವ|| ಅಂತಾಕೊಳನಂಪೊಕ್ಕು
ಚಂ|| ಗತಿಕೆಳಹಂಸೆನಾಭಿಸುಳಿತೋಳ್ತೆರೆಪೆರ್ಮೊಲೆಚಕ್ರವಾಕ
ನ್ನತಜಘನಂಲಸತ್ಪುಳಿನವಾನನವಂಬುಜ ಪಕ್ಷಿಕೈರವಂನುತಕಬರೀ
ಭರಂಭ್ರಮರಿಹರ್ಷರಸಂಜಲಮಾಗಲಂಗನಾ ತತಿಜಲಕೇಳಿಯುಲ್ಲಿಕೊ
ನೊಳ್ಕೊಳನಿಪವೊಲೊಪ್ಪಿತೋರಿದರ್ |೭೬|
ಅಂತಾಸಮುದ್ರದೊಳ್

ಕಂ॥ ಕ್ಷಿತಿಪತಿಸೋಮಪ್ರಭಿಪಂ। ಮತಿಮಿಗೆಜಳಯಂತ್ರದಿಂದ ಪೊ
ಯ್ವಲ್ಕಂಡಾ! ದರ್ತಿರಭಸದೆಕವಿದೆಲ್ಲಾ । ಸತಿಯ ಘನಜಲಮಂರ
ದೆಚೆಲ್ಲಿದರಾಗಳ್ ॥೮೨॥
ಗತಿಗಂಚೆದನಿಗೆಕೊಗಿಲೆ । ಮತಿಗೆಶುಕಂಮುಚ್ಚರಿಸುವುವೆನುತಂ
ಪಿಡಿದರ್ಸತಿಯರೆ ನೆಕೆರದಮುತ್ತಿನ । ಸುತನೀಲದಪಚ್ಚೆಯಂತ್ರಮ
ವುಕಣ್ಗೆ ಸೆಗುಂ॥ ॥೮೪॥
ಮತ್ತಂ
ಕರವಳಯಂಗಳನುಣ್ಣದ ನಿಪಿರಿದೊಗೆಯಲ್ವಾರಿಯಂತ್ರಸಂತತಿಯಿಂ
ನಿ ರ್ಭರದಿಂಪೊಯ್ದಾಡುವನಾಂ । ದರಿಯರಮೂಲಾಂಬುಕೇಳಿಕತ
ಪೆಸೆದಿರ್ಕುಂ। ॥೮೫॥
ಅದಲ್ಲದೆಯುಂ
ನರಪತಿಜೀಕರ್ಗಳವೆಗಳಿಂ। ದಿರದೊತ್ತುಪಪಾರಧಾರೆಕಾಂತೆಯ
ರಪಿಯೋ। ಧರದೆಡೆಯೊಳ್ಬಿದ್ದರ್ಮನೋ। ಬರುಹಂಗಳನಾಳಕೊ
ಣದಂತೆಸೆದಿರ್ಕುಂ॥ ೮೬॥
ವ॥ ಅಂತುಜಲಪಂ ತುಳ್ಕಿಪರಸನಮೇಲಿಭರದಿಂ ತರುಣೀಜನಂಕ
ವಿದಾಗಳ್
ಚಂ॥ ನಗೆಪ್ರೋರಸೊಸೆಕಣ್ಣ್ವೆಳಗು ಸೊಸೆಕರಾರುಣರೋಚಿ ಸೊಸೆ
ಕುರುಗುರ್ಗಳಕಾಂತಿಸೊಸೆಮಣಿಹಾರವ ಸದ್ರುಚಿಸೊಸೆಕುಂತಲಾ
ಳಿಗಳಸಿತಪ್ರಕಾಶಮದು ಸೊಸೆಮನೋಮುದದೇಳ್ಗೆ ಸೊಸೆದೊಟ್ಟಗ
ಳಜಲಂಗಳಂ ನೃಪನಮೇಲಿಲತಾಂಗಿಯರುರ್ವಿಸೂಸಿದರ್
ವ॥ ಅಂತುಜಲವಂಸೊಸುಪಬಲಿಯ ರಂನೋಡಿರಾಜೇಂದ್ರಂತಾಂಜೀ
ಕರ್ಗಳವಿಗಳಿಂ ಪರಿಮಳೋದಕಮಂತುಂಬಿಪೊಯ್ವುತಿಪಾರ್ಗಳ್
ಕಂ॥ ಕತ್ತುರಿನೀರಂಜಂತ್ರದಿ । ನೊತ್ತಲ್ಕೆಯ್ನೊಂದುಕಪುರ್ಪತ್ತಂ
ಗನೆಭೂ॥ ಪೋತ್ತುಮನಕಣ್ಗೆನೀಲದ । ಪುತ್ತಳಿಯಂತೆಪ್ಪುತಿರ್ದಳಂ
ತಾಕೊಳದೊಳ್ ॥೮೮॥
ವೃತ್ತಂ
ಘುಸೃಣದನೀರಂಚಿನ ಪರ . . . ಸದಳಧಿಂತುಳುಕಲ್ಬಲಿಸಿಯೊಸಿಂ

ದಾಗಳ್। ಮಿಸುಗುವರತ್ನದಪುತ್ತಳಿ। [ಸಸಿಯುನೆ] ಕಣ್ಗೆಸೆವೃತಿರ್ದ ಳಾಪೂಗೊಳದೊಳ್ ॥೪೯॥

ವ॥ ಅಂತೀಪರಿಯೊಳರಸಂಪೊಯ್ವುದಂ ಕಂಡುಸೋಮಪ್ರಭಾಮುಖ್ಯರಮಣಿಪುರ್ಕಂದನ ಮೃಗಮದಘುಸೃಣಂಗಳಂ ತುಂಬಿರ್ದಜ್ಜಿಕೊಳವಿಗಳಂಕೊಂಡಾಗಳ್॥

ಕಂ॥ ಮಳಯಜಮೃಗಮದಕುಂಕುಮ। ಜಳಮಂನೆಲವಿಂದೆರಮಣಿಯನೆರೆಪೊಯ್ಯೆ। ಲ್ಕಿಳೆಯರಸಂನಂದೀಶ್ವರ। ಜಳಜಾಕ್ಷವಿರಿಂಚಿಯಂಬರವೊಲೊಪ್ಪಿರ್ದಂ॥ ॥೯೦॥

ಬಿನದದಿರತಿಸತಿಕಾಮ। ರ್ಮನವೊಸೆದಾಡುತ್ತಮಿರ್ಪ। ನನಗಣೆಗಳ್। ನೆನೆಸೋಮಪ್ರಭೆಯುಂಭೂ। ಪನುಮೊತ್ತುವವಾರಿಧಾರೆಗಳ್ಕರಮೆಸೆಗುಂ॥ ॥೯೧॥

ಮತ್ತಮೊರ್ವಳ್

ತಳೆದಿರ್ದತೊಟ್ಟಿಯಾವಡಿ। ನೆಳಲಂಜೇರೆಂದು ತೊಟ್ಟಗೆತ್ತಂಡುಗಯೊಳ್ಪಿಡುವಕುಮುಗ್ಧೆಯು। ನಿಳೆಯರಸಂಕಂಡುಮುದದಿಕೊಳನೀಳ್ವಲ್ಲೆಕ್ಕಂ। ॥೯೨॥

ಮತ್ತಂ

ಪಿಡಿದುಂತೆರೆಗಳಪೊಯ್ಲಿಂ। ದರವಿಂದಪ್ರತತಿಮುಳುಗಿಮೂಡುವ ಪೋಲ್ತು। ತ್ಕರಪೊಳ್ಮಡುವಮುಳುಗುವ ತರುಣಿಯರಮುಖಾಂಬುಜಂಗಳೊಪ್ಪಿದುವಾಗಳ್ ॥೯೩॥

ಆಸಮಯದೊಳ್

ಭರದಿಂಸೋಮಪ್ರಭೆತ! ತ್ವರದೊಳ್ಮುಳುಗಲ್ಕೆ। ನೃಪತಿತಾಂಮುಳುಗಿಪಯೋ। ಧರವನಿರಪ್ಪಿಮುದದಿಂ। ಕರಪಂಪಿಡಿದಿಪ್ರರತಿಯುಪತಿಯುಂತಿರ ೦ ॥೯೪॥

ವರಗತಿಗಾಸ್ಪೃಕ್ಕಷಿಗೆ। ಗುರುಕುಚಕೆಸವಾ ಸವಾಗಲರಿಯದೆನಾಣ್ವ ತ್ರಿರದಂಬಕೆಮಲವನಿದಿಷ ಮುಸುತರಚಕ್ರಾಳತಡಿಗೆಸಾರ್ದವಪಾಗಳ್॥ ॥೯೫॥

ತತ್ಸಮಯ ದೊಳ್

ತೊಳಗುವಕಣ್ಣಾಳ್ಕಿಂಪಂ। ತ್ತಳಿಪದರುಚೆಳ್ಳನಾಂತಕುಡುಲ್ಗಳ್ವೆಸೆ

ಸ್ಥಳದೊಳ್ನಿಮಿರ್ದೆಸೆದಿರ್ದುವು |ಸಲಿಲಕ್ರೀಡೆಗಳಯುವತಿಯರ್ಗಂತಾ
ಗಳ್" ||೯೮||

ವ|| ಆಸಮಯದೊಳ್ನಿವರ್ತಿತಜಳ ಕ್ರೀಡನಾಗಿಪಗಲ್ಪೋಳರಾಜಂ ಸೋಮಪ್ರಭಾಮುಖ್ಯ ಕಾಂತಾಕದಂಬಂಬೆರಸು ಸರಸಿಯಿಂ ಪೊರ ಮಟ್ಟುತೀರದೊಳೆಸೆವಪುಳಿನ ಸ್ಥಳವೊಳ್ನಿಂದಿರ್ದಾಗಳ್

ಚಂ|| ಘನತರವೈಕಿಲಿಂಪುಳುಕಸಂಕುಳಮುಣ್ಮೆದುಕೂಲವಂಬುವಿಂ ನಿತಂಬವುಂ ಬಿಡದೆ ಪತ್ತಿ ಕುಚಂಗಳನಪ್ಪುಗೆಯ್ಗಳಿಂ ಮನವೊ ಸೆದೊತ್ತೆಚೇತ್ಕರಿಸುವಾನನದಿಂನಡಗುತ್ತ ಮಂಗನಾಜನಮುದುಪಂಕ ಜಾಕರದ ತೀರದೊಳಿರ್ದುದತಿಪ್ರಮೋದದಿಂ| |೯೯||

ಅಂತವರೊಳೊರ್ವಳ್

ಚಂ| ಪರವಧುಪತ್ತಿ ಪೊಳ್ತುಡೆ ಗದೃಶ್ಯಮದಾಗಿರೆನಗ್ನಭಾವವೊಪ್ಪಿ ರೆ ಬಿಡುಗೂದಲಿಂದಲಿವ ನಾಳದಿನೊಪ್ಪವರಲ್ದ ಕಂಜಕುಂಕರಯುಗ ದಲ್ಲಿ ತಾಳ್ದುನಿಲೆಸರ್ಪನನಾಂತು ಜಲಾಂತರದಿಂದೆಬಂದುರುತರಮು ಕ್ತಕೇಶಿಬರುತಿರ್ದಪಳೆಂದೆನೆ ಲೊಪ್ಪಿತೋರಿದಳ್

ಮತ್ತವೊರ್ವಳ್

ವ.| ಸಲಿಲಕ್ರೀಡೆಯೊಳೆಯ್ದಿನಾ ಂದುದುಗುಲಂಸ್ಸೈತಂಬಮುಂಪತ್ತೆ ಕೇ ಮಳೆಮುಗ್ಧತ್ವದಿನಗ್ನೆಯಾದೆನೆನುತಂ ಕ್ರೀಡಾರಸಂಮುಕ್ಕ ಭೂ ತಳಕಂಜೋಲ್ವತದೀಯ ಕೇಶಭರದಿಂಪೆಯ್ಯಂಮುಸುಂಕಿಟ್ಟ ದಂ ಲಲನಾಸಂತತಿತೋರೆ ಕಂಡು ಪಿರಿದ ಂನಕ್ಕಂಮುಖೀವಲ್ಲಭಂ||

ಮತ್ತಂ

ಕಂ| ಪಿರಿಯಗಳಮೋಲಿಮುಳಿದ್ಯೆ ಸಕಲಂನಿಜನಿಶಿತಖಡ್ಗಲ ತೆಯಿಂ ಜಡಿನಂತಿರೆಸಲಿಲ ಕ್ಷೇಳಸುಬಲೆಯು ಪೀತನಲತೆಕಂಪಿಸಂದವಿಂತ್ತ ದಸೊಗಸಂ| |೧೦೦|

ಮತ್ತಂ

ಕಿರಿಗಳ ಮುತ್ತಾವಿಗಳಿಂ ಧಾರಿಣಿಗುಗುಳ್ದಪ್ಪವೆನಿಪತೆರದಿಂನಾಂದಾ ಸಾರಿಯುರಾಕೇಶಾಗ್ರದಿ | ವಾರಿಕಣಪ್ರತತಿಬೀಳುಪ್ಪಿದುದಾಗಳ್| ೧೦೧ ಲಲನೆಯುಮುಖಶಿವ್ರೋಜದಿ | ಜಲಬಿಂದುಗಳುಗುತ್ತಿಲ್ದಕ್ಕಾಮುರ್

ಗಿಲವಸೀ। ತಳಕನೆರೆಕರೆವವ-ಳಿಗೆತ್ತು ತ್ತೆಳಸಿರ್ದುವ್ರಬಾಯ್ಗೞ್ದಿ
ಚಾತಕಪೋತಂ। ।೧೦೧।

ತರುಣಿನಿಕಾಯಂಕರದಿಂಸರೋಜ ಮಂಪಿಳಿಯಲುಗುವವಾರಿಬಿಂದು
ಗಳಂ।ಪರಮೇಘಜಮೌಕ್ತಿಕವೆಂ। ದಿರದಾಯಲ್ಕಾಗುದೆಪರಿಯೆಘೋಷ
ತಿನಕ್ಕಂ ।೧೦೨।

ವ॥ ಅಂತಾಸಮಯದೊಳ್ಪಂಡಾಲಿ ಗಳ್ಬರದಿಂತಂದುವಂದಿಸಿದ
ದಿವ್ಯವಸ್ತ್ರಂಗಳಂ ರತ್ನಭೂಷಣಂಗಳಂ ಚಂದನಪಂಕಮಂಕುಸುಮ
ಮಾಲಿಗಳಂರಾಜೇಂದ್ರಂತಾಳ್ದು ಸೋಮಪ್ರಭಾ ಮುಖ್ಯರಮಣೀಸಮು
ಪಯಕ್ಕನಿರುಪಿಸಲ್ಕ ವರ್ಸದನಂಗೊಂಡುವಿಳಾಸದಿಂಕೈಗೈಯ್ದುಕಾ
ಯ್ದಿರ್ಪಾಗಳ್।

ಮ॥ ಸ್ರ॥ ದ್ರುಮದೊಳ್ಪಾಯ್ದಲ್ಲಿ ಪುಷ್ಪಾಪಚಯದೊಳೆಸೆವಂಭೋಜ
ಷಂಡಾಂತ ದೊಳ್ಸಂಭ್ರಮದಂಬುಕ್ರೀಡೆಯಂ ತಾಳ್ದಿಲಿಲತೆಗಳೊಳಾ
ನತ್ತಮುರ್ವೀಶನೊಳ್ಬು ಭ್ರಮದೂರಂಮಂಡಪಚಾರಂ ರತಿಸುಖಸ
ಕಾರಂ ತ್ರಿಲೋಕೋಪಕಾರಂ ಹಿಮಸಾರಂಗಂಧಪೂರಂಸುಭಿಕ್ಷಸು
ಪಮಾನಂದ ಕಾರಂಸಮೀರಂ॥ ।೧೦೩।

ವ॥ ಅಂತಾವಗಾಗುತನಸಮುಗುಣ ಪ ಣಯುದಿಂಮನದೆಗೊಂಡುರಾ
ಜೇಂದ್ರಂ ಮಾನಿನೀಸಮೇತಂ ಸರಸಿಯಂಪೊರಮಟ್ಟಾಗಳ್॥

ಚಂ॥ ಒಲವಿನೊಳಕ್ಕುತಿರ್ಪ ಮುಡಿವಾಳದಚಾಮರಜಾಳ ಪೆತ್ತಿ
ತೋರ್ಪಲ ಗೊಡೆಯೊಳ್ವಿರಾಜಿಸುತೆ ಮಾಘವನಂದದಿನುರ್ವರೇ
ಶ್ವರ ಸುಲಲಿತನೂಪುರಧ್ವನಿಗಳಿಂದ ಒಳಾವಳಿಬೆಂಗೊಳಿಸ್ತಿರಲ್ಕಡಿ
ರದೆಟ್ಟಿ ಸತ್ಕೃತಕಶೈಲಮನೇರಿದನೊಂದುಲೀಲೆಯಿಂ ।೧೦೪।

ವ॥ ಅಂತುಸೋಮಪ್ರಭಾದೇವೀ ಮುಖ್ಯಕಾಂತಾಜನಸಮೇತಂ
ಕೃತಕಾದ್ರಿಯನೇರಿ ಜನದಶೃಂಗಾರವನೆನೋಡಿಹಾರೈಸಿಪೆರ್ಚಿಪನ
ಲ್ವೋಲಿರಾಜಂ ಪನಸುಹತ್ತುಸನಂಕರೇಳಾಗಳ್

ಕಂ॥ ಒಲವಿಂತಿಳಿಗೊಳಕಿದುವಿಚ। ಕಿಳಕಿದುಚಕೋತಕ್ಕಿವೇದ್ರಸನ
ಪಾಲಂಗು।ಜ್ವಳನಸ್ತ್ರ ... ತೆಪೆಸಗೆ..

ವಿತ್ರಂ। |೧೦೭|

ವ॥ ಅಂತುವನವಾಲಂಗುಡಲಿತ್ತು ವನವಿಹಾರದೊಳಾದಪರಮಾನಂದರಸಮಂ ಶಿವಂಗರ್ಪಿಸುತ್ತು ತಿಷರುಷದಿಂ ಕ್ಮತಕಾದ್ರಿಯುನಿಳಿದಂತುಪುರಕಾಂತಾಸಂತತಿಯಂ ನಿಮ್ಮನಿಮ್ಮವಾಹನಂಗಳನೇರಿಮೆಂದು ಬೆಸಸಿಪಗಲ ಕ್ಷೋಳರಾಜಂ ಸೋಮಪ್ರಭಾಕಮೇತಂ ಸಿಂಧುರಸ್ಕಂಧಾರೂಢನಾಗಿ ಸಕಲಪರಿಜನಂ ಬೆರಸುವನಮಂ ಪೊರಮಟ್ಟು

ಚಂ। ಕರವಲಯಪ್ರಜಂಗಳುಲಿಯಲ್ಕೆ ವಧೂಜನಮಿಕ್ಕುತಿರ್ಪ ಚಾಮರಕುಳವೆತ್ತಿ ಬರ್ಪ ಪೊಸಬೆಳ್ಗೊಡೆಗಳ್ಗಳ ತೂರ್ಯನಿಸ್ವನಂ! ಪಿರಿದೆಸೆಯಲ್ಕೆ ಪೌರಜನಮುತ್ಸವದಿಂದ ಮಿದಿಗರ್ಗೊಳಲ್ಕೆ ತ॥ ತ್ಪುರಮನನೇಕಸಂಭ್ರಮದಿ ಪೊಕ್ಕನುದಾತ್ತನರೇಂದ್ರಪುಂಗವಂ।

ಕಂ॥ ಜನಪತಿಯಂತಃಪುರಕಾ। ಮಿನಿಯರ್ವೆರಸಾತ್ಮರಾಜಮಂದಿರಮಂ ಪೊಕ್ಕನುರಾಗಂಮಿಗೆಸರಸವ। ಚನರಚನೆಗಳಂದಿರುತ್ತಮಿರ್ಪನ್ನೆವರಂ। |೧೦೮|

ಚಂ। ತಿರುಗುವಕಾಲಚಕ್ರದಪದಕ್ರಮಮಂ ಕಳೆಯಲ್ಕೆ ವೇಳೆಯೊಳ್ಪಿರಿದುತಳರ್ತ ನಂದನವಿನೊಪ್ಪುವಪಶ್ಚಿಮ ವಾರ್ಧಿಯೆಂಬತ। ತ್ಸರಸಿಗೊರಲ್ದು ದಿಗ್ವನಿತೆ ಯುಕ್ತಹಿತಂ ಜಲಕೇಳಿಗೆಯ್ದುವಂ। ತಿರಮಿಸುಪಂಬರಾಚಳವ ನಾಂತಿನನೊಪ್ಪಿದನಸ್ತಶೈಲದೊಳ್ |೧೦೯||

ಮತ್ತಂ

ಚಂ। ಪಿರಿದೊಲವಿಂ ಮಹೀಪತಿಗೆ ಕಂಜಜನೆಂಬ ಸುವರ್ಣಕಾರಕಂ ಸುರುಚಿರಭೂಷಣಾವಳಿಗಳಂ ಸಮೆಯಲ್ಕುರೆಕಾಸಿನೀರೊಳಾಸುರತರಮಪ್ಪಕಾಂಚನದ ಘಟ್ಟಿಯನದ್ದಿದನೆಂಬಮಾಳ್ಕೆಯಿಂ। ದರುಣತೆವೆತ್ತಡಂಗಿದುದುಪಶ್ಚಿಮವಾರ್ಧಿಯೊಳರ್ಕಮಂಡಳಂ॥ |೧೧೦||

ಆಸಮಯದೊಳ್।

ಕಂ। ಪಡುಗಡಲವಿದ್ರುಮದ್ಯುತಿ। ಯುಷರ್ದ್ದ ವಾಣಿಕದತೇಜದೊದವಿಷತೆರದಿಂ। ಪಡುವಣದಿಗ್ವಧುರಾಗಂ। ಒಡೆದಲೆನಲ್ಪಂಜೆಗೆಂಪುರಂಜಿಸುತಿರ್ಕ್ಕುಂ॥ |೧೧೧||

ಇನನಸ್ತಮಯಿಸಲಂತಾ। ದಿನಲಕ್ಷ್ಮೀಕಾಂತೆಸಹಗಮನಮಂ ಪೂ

ಡ| ಲ್ಕಿನೆಸೆಗಳ್ದೊಟ್ಟಿರ್ದರ್ಪನೆಗ್ರ್ |ಕ್ಷ್ವೆನೆಕೇಂಬೆಳಗೆನ್ಸಿಸಿತೆಸೆವಸಂಧ್ಯಾರಾ ಗಂ|| |೧೧೨|

ವ|| ಆಸಮಯದೊಳ್

ಕಂ|| ಭರದಿಂ ಪ್ರಪತಿಯರೊಳ್| ಬೆರಸಿ ಮಾತಂಗದಾನಕ್ಕೆಳಸು ವಮುಧುಪಂ| ಪಿರಿದಂಬುವನೆಂದತ್ಯಾ| ಸುರದಿಂ ಪದ್ಮಿನಿ ಬಿಗುರ್ತರ್ಗಸಂ ವೆತೆಯಾದಲ್|| |೧೧೩|

ಪಿರಿದುಂ ದ್ವಿಜಾಪಹರಣಂ| ಡೊರಕಿತ್ತೆಂಬರವನುಳಿದು ಕರವಳ್ವಿ ದಿವಾ| ಕರನಂನೋಡದೆನೆರೆವೋಗ| ದಿರುಹಿದುದೆನೆಮುಗಿದುದಬ್ಜ ಮುಬ್ಬಾಕರದೊಳ್| |೧೧೪|

ವೃತ್ತಂ

ಘನರಾಜತೇಜದಿಂದಿ |ರ್ಪನಗಂಮುದವಂನ್ನನಕಟಕುಮುದಾಪ್ತ ದುನಿ| ಟ್ಟನಜಂತಾನೆನುತಂನೆ |ಟ್ಟನೆನಗುವಂತಲದರ್ದುದುತ್ಪಲಂತಿ ಗೊಳದೊಳ್

ವ|| ಮತ್ತಮಾಸಮಯದೊಳ್|

ವೃ|| ಸ್ರ| ಕೊಳನೊಳ್ಛಾಯಾರಿನೋಡುತ್ತಿರಿವರತುನಿಜಚ್ಛಾಯೆಯಂ ಕಂಡು ನೀರೊ| ಳ್ಮುಳುಗಿರ್ದರ್ಕ್ಳಲ್ಲಲೆಂದೆಯ್ದು ಕಸುತೆ ಮುಗಿದಂಭೋ ಜವುಂಬಿರ್ದನೋಡ| ಲ್ಕಳಿಕುಮ್ಮಂದೆದುರ್ಬೇಗಂಪೊರಮಡೆಮದನಾ ಸ್ತ್ರಂದಿಟಂತಾನಿದೆಂದ ವ್ಯಾಳಿಸುತ್ತಂನೊಂದುಬಿರ್ದತ್ತುತುಳವಿರಹತಾ ಪೋದ್ಭತಾಂಗಂರಥಾಂಗಂ| |೧೧೫|

ಪಿರಿದುಪತಿಗಾಣದಳಲಿಂ| ಮರೆವಟ್ಟರೆಮುಗಿದಕಣ್ಣೆಳಲ್ವಾರಕೆಗಳ ಸ್ಮರನೆಸೆಯುಲಂಬಗುಡಾ| ಗಿರೆಬಿದರ್ಗತಿರ್ದುದದರೊಳೊಂದುರಥಾಂ ಗಂ| |೧೧೬|

ಆಸಮಯದೊಳ್

ಶಿವಭಕ್ತಮೂರ್ಜಗದೊ| ಳ್ಶಿವನಲ್ಲದೆಮತ್ತೆದೈವವಿಲ್ಲೆಂದುರೆಸಾ ರುವಪಂಗುರುವೆಂಬಂತಿರೆ| ಶಿವಗೃಹದೊಳ್ಸಂಜೆವರೆಗಳುಣ್ಮಿದುವಾಗ ಳ್|| |೧೧೭|

ಮತ್ತಮನಂತರಂ|

ಪರಸಿತ್ತಭಕ್ತೋರತವಿಸಿ| ... ಕಾಗಿತಳಿಪಬೆಳ್ದಂಗ

ಬಂ| ಘುಳಬೀಜರಾಜಿಯೆಂಬಂ | ತಿರಳಿಸೆವುಳಿರ್ದುದವುವುತಾರಾನಿಕರಂ| ||೧೧೯||

ಸವವುಳಚಂದ್ರನಬರವಿಗೆ| ಪದಪಿಂದಾಕಾಳವರ್ಗದೊಳ್ಪನರಜನೀ| ಸುದತಿನಲವಿಂಡೆಪೂವಲಿ ! ಗೆದರುವವೊಲ್ಸ್ಮೊಳಗಿಬೆಳಗಿದುವುತಾರಗೆಗಳ್|| ೧೨೦

ಆಸಮಯದೊಳ್||

ಹರನೀಕ್ಷಿಸೆಜಳನಿಳಯಂ | ಹರಿಮೇಖಳೆಯಿಂಪೆಬೇತುದಲ್ದ ಶದಿಶೆಗಳ್|ಸಿರಿದಪಗಿಪೋದುವೆಂಬಂ |ತಿರೆಕತ್ತಲೆಸುತ್ತಿಮುತ್ತಿಪರ್ಬಿತ್ತಾಗಳ್|| |೧೨೧||

ಧರೆಯುಂಜಗುನಿಯುಮುಡುವಾ | ವರಿಸಿತೋಸವಿಭಯ.ದಿನೆಣ್ದೆಸೆಗಳೊಳಗಂತಾ| ಸುರತರಡನೀಲಗಿರಿಪೆ| ಯ್ಗರೆದುದೆನಲ್ಪಬಿಂದತ್ತುಬಹುಳತಮೂಂಧಂ| ||೧೨೨||

ಅಂತಾಬಹುಳತಮಾಂಧದೊಳ್

ಚಂ|| ನೆರೆಮನೆಗೂಸನೆತ್ತಿರದೆ ಚೈಗುಡುವಂದದೆನಲ್ಮೆದೋರ್ಪಸು| ಣ್ಗುರುಳ್ಗಳನೋವುತ್ತಂತಿರೆ ಕರಾಂಗುಲಿಯಂನೆರೆಸನ್ನೆಗೆಯ್ವಬಂ|ಧುರದರಹಾಸಮುಣ್ಮೆ ತಲೆಗುತ್ತಿ ಕಟಾಕ್ಷದಿನೋಳ್ಪಜಾರೆಯತ್ಯಂತಿತಪೊಳಾತ್ಮಜಾರರೆಡೆಗಾನಿ ಶಿಯೊಳ್ಸ್ವರಮಟ್ಟುದಾತರ್ದಿಂ|

ಕಂ|| ಮುಡಿಬಾರವೆನುತೆಕರುಗಳ್| ತಡೆಡವೆನುತ್ತೆಣ್ಣೆಗಿರದೆಪೋಪೆನೆನುತ್ತಂ| ಮಿಡಚೆನೆವಪಿಕ್ಕಿತವಕದಿ| ನಿಬಿದತಮಾಂಧದೊಳೆಜಾರೆಯುರ್ಪೊರಮಟ್ಟರ್| |೧೨೪||

ಅಂತುಪೊರಮಟ್ಟಾಗಳ್

ಅಡೆಗುಣಿಪಾಗರಮರೆಮರ | ದಡಿಗಳೊಳುಪಪತಿಗಳೂಡೆನೆನಿರಿಯುರ್ಜಡೆಸ್ತೈ! ಗಡೆದುರುಳಿಪೆನ್ನಪುಡಿಮಂ, ತೊಡೆವುತ್ತಂಬೀದಿಹುಡಿಗಜಾರೆಯುರೆಸೆದರ್|| ೧೨೫||

ವತ್ತವೊರ್ವಳ್

ಕಂ| ಒಳಿಗಳನೇರೆಂತ್ತುತ್ತಂ | ಪಳಂಚೆನುಂಗುರಮನುಲಿವುವೆನುತ್ತಂ ಹಸ್ತಾಂ | ಗುಳಿಗಳೊಳಕ್ಕಿಕ್ಕೆಳುತ್ತಂ | ಕ್ಕುಲಟೆಮುನಕ್ಕಿಪ್ಪೀಯನಪೊರಗೆಪೋಗುತ್ತಿರ್ದಳ್ ||೧೨೬||

ಚಂ|| ಅಳಿಕುಳಕುಂತಲಾಳಿಮೃಗನಾಭಿಜವಣ್ಪಿಳಿನೀಂದ್ರೋಳಿಕ್ಕೋ
ಮಳತರಪಾಟಲೀಕುಸುಮ ಮಾಲೆಮುಸುಂಕಿದನೀಲಚೇಲವ ಗ್ಗಳಿಕೆ
ಯುಕಪ್ಪಿನಿಕ್ಕೆಯಿನೆಜಾಣ್ಮೆ ಯುಸಿಂಗರವೊಪ್ಪಿಜಾರೆಕ| ಣ್ಗೊಳಿಸುವ
ಕಾಳರಾತ್ರಿಬರುತಿರ್ದಳೆ ನಲ್ಕೆಸದಳ್ತಮಾಂಧದೋಳ್ ||೧೭೬||

ವ| ಮತ್ತೊಂದೆಡೆಯೊಳೊರ್ವಳ್

ಕಂ|| ಮುಳಿಸಿಂದೆಪೋಗಿಕಾಣ | ಲ್ತಿಳಿದಾಗಲ್ತಡೆಯುದಪ್ಪಿಬೈಗುಳ್ಳೊ
ಯ್ಗುಳ್| ಗಳರುರೆಮೆಯ್ದೋರದೆಪುಂ | ಶ್ಚಳಿಯುಪಪತಿಯೊಡನೆನೆರವ
ಪೋಗುತ್ತಿರ್ದಳ್| ||೧೭೭||

ಮತ್ತೊಂದೆಡೆಯೊಳ್

ತನ್ನಪಳಂಪಾರುತ್ತೋ | ರ್ವನ್ನಿಶಿಯೊಳ್ಸುಜಿಗೃಹದೊಳಿರ್ದ
ತ್ತೋ| ವಳ್ಗನ್ನದಿಬರೆನೆರೆದುಬಳಿ | ಕ್ಕಂನೆರೆತಿಳಿದರಿದುನಗುತಮಿ
ರ್ಬರ್ಪೋದರ್| ||೧೭೮||

ಮತ್ತೊಂದೆಡೆಯೊಳೊರ್ವಳ್

ಪವೆಡಯ್ದಿಜಾರಸಂಕೇ | ತದಗೃಹದೊಳ್ಪ್ರಿಯನನಲ್ಲಿಕಾಣದೆಮು
ನದೊ | ಳ್ಪಿದರುತ್ತಂಕಲ್ಲಂತಾ | ಗಿದನಿಂಟೆಯುತೆರವಿಸಿದೆಮುಪೋ
ತ್ತಿರ್ದಳ್ ||೧೭೯||

ಮತ್ತಮೊರ್ವಳ್

ಚಂ|| ಬಿಡುಮುಡಿಯುಂತೊಡರ್ಚೆ| ಕಳೆದಿರ್ದಳಕಂಗಳನೊತ್ತುತು
ಸಡಿ| ಲ್ದಡಿಗೆಯನೆತ್ತುತಂಜೆರಕೆಡಂ ಬಲವುಂಬಿಸಡುತ್ತೆನಾಡಕೂ
ಪಿಡುವಹಿಮಾಸ್ಯಮಂ ಸೆರಗಿನಿಂತೊಡೆಯುತ್ತೆಕಡಂಗಿ ಜಾರಿನೊತ್ತದೆ
ಯುದೆಜಾರೆಗೂಡಿತ ವಕ್ಷಮಿಗಲೆಯ್ದಿದಳಾತ್ಮಗೇಹಮಂ ||೧೮೦||

ಮತ್ತಂ

ಕಂ|| ತಮವೆಂಬರಾಹುಭಯದಿಂ | ದ್ಯುಮಣಿಸೂಳತೆಯನುಳಿದು
ತಿರುಮೂರ್ತಿಗಳಿಂ| ಸಮುಚಿತದಿತಾಳ್ದನೆನೆಗೃಹ| ಸಮಿತಿಗಳೊಳ್ಪೊ
ಳಗಿ ಬೆಳಗಿದವುದೀಪಿಕೆಗಳ್ ||೧೮೧||

ವ|| ಮತ್ತಮಾಸಮಯದೊಳ್

ಚಂ|| ಬಿನದದಿರೋಹಿಣೀವನಿತೆಸಿಂಪಿಣಿಮಾಡಿದಕುಂಕುಮೋದಕಂ
ತನುವಿನೊಳ್ ... ಪೋ ಗನ

ತರಭೂಷಣಾವಳಿಯ ರತ್ನಮರೀಚಿಪ್ರೋದ್ದಳ್ದು ಪರ್ಬಿತೋ । ಯೆನೆಸಿಸೆ ದತ್ತುರಕ್ತರುಚಿಯಿಂದುದ ಯಾದ್ರಿಯೊಳಿಂದುಮಂಡಳಂ॥

ವ॥ ಸ॥ ಧರಣೀಭಾಗಕ್ಕೆತಂಪಂಕುಮುದತತಿಗೆಪೆಂಪಂಚಕೋರಾಳಿಗಿಂಪಂ। ವಿರಹಿವ್ರಾತಕ್ಕೆಕಿಚ್ಚಂಶರಧಿ ಗೆ ಬಗೆಪೆಚ್ಚಂರಥಾಂಗಕ್ಕೆಹುಚ್ಚಂ। ಪಿಡಿವತ್ತುದ್ಭಾಸಿಸಿತ್ತುಪ್ರ ಬಳತರಸುಖಂಬೆತ್ತು ನೋಡಲ್ಕೆಳುಂಬಂ। ನಿರುತಂಜಾರಾವಿಡಂಬಂನುತಗುಣ ನಿಕುರುಂಬಂಸುಧಾಸೂತಿಬೀಜಂ॥ ॥೧೩೪॥

ಅನಂತರಂ

ಕಂ॥ ವಿನುತವಸಂತನಬಿಳೊಡೆ । ಬಿನದವರೆತಿಪಿಡಿವಮುತ್ತಿಕವಸೆಂಡನವೊ। ಸ್ತ್ರನಕರದಕುಸುಮುಕುಳೇಟಕ। ಮನಲೆಸೆದುದುಬೆಳ್ಪಿನಿಂ ಸುಧಾಕರಬಿಂಬಂ॥ ॥೧೩೫॥

ಚಂ॥ ಪುರಹರನಟ್ಟಹಾಸದವೊಲಾ ಪ್ರಭೆಯಾವರಿಸಲ್ಕೆಕಾಣಿಸಲ್ಕರಿದೆನಲಿಂದ್ರನೀಲಮಣಿ ಭೂಷಣಮಂಕುರುಪಿಕ್ಕೆರೋಹಿಣೀ ತರುಣಿನಿವೇಶನಂಕುರುಪು ವಿಟ್ಟೆಳೆಗಪ್ಪನವಂ ನೆಗಲ್ದಪ್ಪತೆರಳಿಪಟಂಗಳೇದು ತಿಳಿವಿಲ್ಲದವನ್ನಾಡಿ ವರ್ಧ ರಿತ್ರಿಯೊಳ್ ॥ ॥೩೬॥

ಕಂ॥ ಸರಭಸದಿಂರತಿಬಂದೈ । ಸರಳನಕರತಳಕನಲಿದುನೀಡುವಪೊಸಕ। ತ್ತುರಿಯುಂತುಂಬಿದಪಲ್ಕಿನ। ಕರಡಿಗೆಯನಿಸಿತ್ತುಚೆನ್ನತಿಂಕಶಿಬಿಂಬಂ॥ ॥೩೭॥

ಮ॥ ಸಿತಿಸಿವನಿಸೆವಿಂನಕರ್ಕಟಕಪ್ರಂಪಂವಾಕ್ಷರಂತಾರಕ ಪ್ರಸರಂವ್ರಾಕ್ತಿಕರತ್ನಸಂಕುಳನಘಪ್ರ ಜ್ಯೋತನಾಂರಾಯಣಂಶಶಿಯೋ ಕಂಬಿವೆ. ನಲ್ಸುಧಾಜಳನಿಧಿಸ್ವರ್ಗಂಗೆಮುಂಕ್ರೂಡಲೆಂದೆಸೆವಳ್ತಂದ. ದೊತಾನೆನಿಪ್ಪ ಬಗೆವಿ. ಂಪವಿ ತ್ತುಚಂದ್ರಾತಪಂ।

ಚಂ॥ ಅಲರ್ದಲಗೋರ್ಂಚಲೆಂದು ತಿಳಿಯಲುವಳಾಂಬರಮೊಂದುಡಪ್ಪಿಕೋಮಳತರಮೌಕ್ತಿಕಾಭರಣಮೊಂದಿದ ಲಾವಗೆಯೊಂಮಪಿಯುಲು। ಜ್ವಗಿಸುವಸೌಧಮೊಂದುತರಲಾಡಿಪ ಮುಗ್ಧವಧೂಜನಂಗಳಂ। ಸರಿವರ. ಲಾಷುತೆಣ್ದೆಸೆಗಳೊಳ್ಪಿರಿ ದೊಪ್ಪಿದವಿಂದುರಶ್ಮಿಗಳ್॥

ಕಂ ತಂಪಂಗುಡುತ್ತೆತಣ್ಗದಿ ರಿಂಪಂಪಿವುತ್ತೆಕೊನರ್ವಶಶಿಕಾಂತವನೀ। ರಂಪ್ರೋಕ್ಕೀನ ಷುತ್ತ ಪ್ರೋಪ್ಪಿವರಡಾಡಿದುವುಚಕೋರ

ಚಯಂಗಳ್‌| ||೪೦||

ವಸುಧೆಗೆ ಚೋಳನೃಪಾಳನ| ಜನಪದಸಕಮನಿಂತುಟೆಂದುತೋ
ರ್ಪಂಪದಿನೆ| ಣ್ದೆಸೆಗಳನಲ್ಲಪನ ರೆಢವ| ಳಿಸುತಂಕಣ್ಗೆಸೆದುದಚ್ಚಪೊ
ಸಬೆಳ್ದಿಂಗಳ್‌| ||೪೦||

ವ|| ಅಂತಾಚಂದ್ರೋದಯವಿಳಾಸಮಂನೋಡಿಹಾರ್ಕೈಸಿನರೇಂದ್ರಚಂ
ದ್ರಂಚಂದ್ರಿಕಾವಿಹರಣಲೀಲೆಗೆ ಮನಂದಂದುನಾಗರಿಕವಿಟವಿದೂಷಕ
ಪೀಠಮರ್ದಕರೆಂಬ ನಾಯಕರುಂ ದಕ್ಷಿಣಾನುಕೂಲಶಠದುಷ್ಟರೆಂಬ
ನಾನಾಯಕರುಂ ಬೆರಸಾಗಳ್‌|

ಚಂ|| ಮಿಸುಗುವಮುತ್ತಿನಾರವನು ರಾಗವೊಳಾಂತುಸುಗಂಧಚಂ
ದನಂ| ನಸುಬಿರಿವಚ್ಚಮಲ್ಲಿಗೆಯ ಚೊಲ್ಲಿಯುಮುಟ್ಟಸಿತಾಂಬರಂವಿರಾ
ಜಿಸಲಭವಾಂಘ್ರಿಭಕ್ತನೆ ನಿಪಗ್ಗದಚೋಳನೃಪಾಳನಾಗಳಾ ವಸಥದೆ
ಚಂದ್ರಿಕಾವಿಹರಣಕ್ಕೊಲವಿಂ ಪೊರಮಟ್ಟನರ್ಥಿಯಿಂ| ||೪೨||

ವ|| ಅಂತುಪೊರಮಟ್ಟುವಿಪಣಿಪಥಮಂನಿಜಪದನಖಮಯೂಖಚಂ
ದ್ರಿಕೆಯಿಂಧವಳಿಸುತ್ತಂ ವೇಶ್ಯಾವಾಟಸಮೀಪಕ್ಕೆ ಬರುತ್ತಿರ್ಪಾಗ
ಳ್‌

ಮ|| ವರಕಾಳಾಗುರುಧೂಪಧೂಮ ವಿಜಿತಾಮೋದಾರ್ಪಿತಾಳಿವ್ರ
ಜಂ ತರುಣೀಬಂಧುರಕಂಧರೋಲ್ಲಸಿತ ಮಲ್ಲಿಮಾಲಿಕಾಂಪೋಳಿತಂ|
ಸುರತಸ್ವೇದಪಯಃಕಣ ಪ್ರಕರವಿಚ್ಛೇದೈಕಶೀಲಂಮಹಾ| ಭರದಿಂಸಂ
ಚರಿಸುತ್ತೆ ಸತ್ಪಣಪಥೂಘಂಟಾರುತಂ ಮಾರುತಂ

ವ|| ಅಂತಾಮಂದಮಾರುತನಂ ಮನವೆಗೊಂಡುಲೋಚನಚಂಚ
ರೀಕಪ್ರಸೂನವಾಟಮೆಂಪೆನಿಪವೇಶ್ಯಾ ವಾಟಮಂಪೊಕ್ಕುಬರುತ್ತಿ
ರ್ಪಾಗಳ್‌

ಮ|| ಸ್ರ|| ಸುರತಂಮೆಯ್ದೋಂತನಂಭೋರುಹಭ ವನತಿವೃದ್ಧಂಕ
ಳಾಭೃತ್ಕಳಂಕಂ| ಹರಿಣಾದಂಮಾರುತಂಚಂಚಳನ ಸಮಶರಂಕಾಮ
ಹೀನಂಪಸಂತಂ| ಪಿರಿದುನ್ಮತ್ತಂಕುಜೇ ರಂಭೆಗೆಕೃಪಣನೆನಂ ನೇ
ಳ್ವಪ್ಪದತ್ಸ್ವಪ್ನನೆಂದಾ| ಸುರದಿಂನಿಂಪುಷ್ಪಲಾವಣ್ಯದಿ ಪಳಿವುದಜಸ್ರಂ ||೪೪||
ವಾರಸ್ತ್ರೀಸಹಸ್ರಂ

ಚಂ। ಪುರುಡಿಸಿಬ್ಬಿವಸೊಕ್ಕಿಬಿಗೆ ಮೋಹಿಸಿಮುದ್ದಿಸಿಲಲ್ಲಿಗೆಯ್ವ
ಸಿಂ। ಗರವನೆಮಾಳ್ಪಕಂಡುದನೆ ಬೇಳ್ಪಮುಗುಳ್ನಗೆದೋರ್ಪಸೋಲ್ದ
ರಂ। ಸರಸದಿಪೊಯ್ವಮೆಯ್ಯುಗ್ಗಡದೆ ಕಾಡುವ್ಯೆಸಿಕದೊಲ್ಮೆಯಂಪರಂ।
ಪರಸುವಸರ್ಪವಲ್ಲಭೆಯುರೊಪ್ಪಿ ತಿರಲ್ಪ್ನೃಪನೊಲ್ದುನೋಡಿದಂ॥

ವ॥ ಅಂತಾನರೇಂದ್ರಂ ನೋಡುತ್ತಂನಡೆಯೆನಡೆಯೆ ಮುಂದೊಂದೆ
ಡೆಯೊಳ್॥

ಕಂ। ನವವಜ್ರಸ್ತಂಭಗಳ್ । ಪವಳದಮಣಿಗಟ್ಟನೊಲವಿಳಮೌಕ್ತಿ
ಕದಿಂ। ದವೆಸವೆದಸೊಸಕದಿನೊ । ಪ್ಪುವನವಿಲುಯ್ಯಲೆಯನೇರಿತರು
ಣಿಯರಸೆದರ್। ॥೧೮೫॥

ಚಂ॥ ಒದವಿದತಮ್ಮಚಾರುಮುಖಬಿಂಬಮನೀಕ್ಷಿಸಿಪಾಟಿಯಾಗಲಾ
ರದನೆರಕಂಡಿಕುಂದಿ ಬಡವಾಗುತಿರಲ್ಕೃಪೆಯಿಂದೆಪೋಗಿಪುದ್ವಡನ
ಡೆಳ್ದರ್ದುರ್ಘೂರ್ಣತೆಯ ನೆಯ್ದಿನುತಂಕರೆಯಲ್ಕೆಪೋಪವೋ। ಲ್ಸು
ದತಿನಭೋಂಗಣಕ್ಕೊ ಗೆದುಸಾದರದಿಂದೊಲೆದುಯ್ಯಲಾಡಿದಳ್॥

ಒಲವುಬೆಡಂಗುಭಾವಕರಕಣ್ಮರಂ ಸೆಲೆಗೆಯ್ಯೆತನ್ನಚಂ। ಚಳನ
ಘನಾಂಶುಹಾರಲತೆ ಮೇಲುದುಸೋರ್ಮುಡಿಕುಂತಲಾಳಿಕುಂ। ಡ
ಲಮೆಸೆವಂಘ್ರಿಪಾಣನಖರೋಚಿ ಗಳೆಯ್ದೆಪವಡಲೋರ್ಪಕೋ।
ಮಳೆಗಗನಕ್ಕೆ ಪಾರಿಖಚರಾಂಗನೆಯಂ ತೊಲೆದುಯ್ಯಲಾಡಿದಳ್॥

ವ॥ ಅಂತಾಗಾಡಿಕಾತಿರ್ಯರವಿಲಾಸಮಂನೋಡುತ್ತನಡೆಯುಮುಂ
ದೊಂದೆಡೆಯೊಳಂದು ಕಾಂತಮಂದಿರಾಜರದೊಳ್‌ಚಂದನ ದ್ರವ ರ
ಲೊಳ್ರಸಮುತ್ತಿನಕ್ಕಿಯುಂ ಪೊಯ್ದುಪೂಸವಿಸುನಿಯೊನಕೆಗಳಂ ಪಿಡಿ
ದುಸಸಿವದನೆಯು ರೊಸಗೆಯಂಗಾಗವೆಸೆಯಲ್ ಪಾಡುತ್ತಂನಳಿತೋ
ಗ್ಗಳನೆತ್ತಿ॥

ತ್ರಿಪದಿ॥ ಜನನುತವಸಂತಂಗೆಘನಭೋಗ ದೊಡವಕ್ಕೆ। ಮನಸಿಜ
ನಭುಜಕೆಸಿರಿಯಕ್ಕೆ ರತಿಯುಮನದನುನಯಂಪಿಂಗದಿರುತಿರ್ಕೆ।
ತರುಣಿಯರಚೆಲ್ವಪು। ರ್ವಿರಲಿಕ್ಷುಧನುವೇಕೆಸುರುಚಿರತೆವೆತ್ತಕ
ಡೆಣ್ಣಕೋರೆಗಳಿರಲ್ಕ ರಲಸೆರಲೇಕೆಮದನಂಗೆ॥ ॥೧೮೭॥
ಸಸಿಗೆನೀರೆರೆವಂತೆರಸಿಕರಾಗಿರ್ದಪ। ಗರ್ಗಳೊಸೆದುಬೆಲೆವೆಣ್ಗೆದಿ
ನದಲ್ಲಿಸ್ವಸವಿಲಾಯು। ಲಸದಳವಚ್ಚೇಂಟದೊದವಿಕ್ಕು॥ ॥೧೮೮॥

ಪರಿಮಳಂಬೋದಬಳಿಕ ರಲ್ಗಳಂಮುಡಿದಿರ್ಪುದೆ। ಪರಿಕಿಪ್ಪುದೆನಾಪಟ್ಟ
ನವಿಲ್ಲದ ಪರೊಪನೆನೆರೆದಿರ್ಪುದಲ್ತೆ ಬೆಲೆವೆಣ್ಣೆ ೧೫೩

ವ। ಎಂದೆಂಬರ್ ನಕೆವಾಡಿನೊಳ್ನು ದಿವಸೂಳಿಸಿಂದಾಂತಮನ
ರೇಂದ್ರಂಕೇಳ್ದು ನಸುನಗುತ್ತಂಪ್ರೇಗವೋಗೆಮುಂ ದೊಂದಮು
ಕತದವುಂದಿರಾಜಿರಪೊಳ್ । ಗಣಿಕಾಕವಂಬಂನೆರೆದುಫಳತಘಟಗ
ಳೊಳ್ನೆಘಪಂತುಂಬಿಪುಂ ದಿಟ್ಟಕೊಂಡುರಜತಕನಕಚಷಕಂಗಳಂ
ಪಿಡಿದುತಗೆತೆಗೆದಿಂ। ಟಹಾಸ್ಯಸುತ್ತಾಗಳ್।

ಕಂ॥ ಬೇಗುತ್ತೆಬಿಕ್ಕಿಪರ್ನೆ! ತೇಗುತ್ತಂಗರ್ಣನ್ನೊಳಕ್ಷಿಸುತ್ತೆದ
ಘುತಂ ಗುತ್ತೆತೊದಳಜೋಗಂ। ಬೋಗುತ್ತಂನೊಕ್ಕಿದಬಲೆಯರ್ಕ
ಣ್ಗೆಸೆದರ್। ।೧೫೪।

ಮತ್ತಮವರೊಳ್ಕೆಲಂಬರ್

ಚಂ ಕುರುಳೊಲೆದಿಂಪೆಹಾರವಲು ಗಾಡೆಕುಚಂಕುಚಿಪಿಂದೆಣಾರು
ನೂ। ಪುರಮುಲಿದಾಪೆಕಾಂಚಿಪ್ರೊಳೆದಾಪೆ ಬಳಲ್ತು ದಿಪಾಣದಾಪೆ ಭಾ
ಸುರತರನೀಡೊಲೆ ನಲಿದಾಡೆಲಸನ್ಮಣಿಕಂಕಣಂಪಳಂ ಬೆರುದನಿ
ದಾರ್ಪೆ ಪರ್ತಿಸಿದರಂಗನೆಯುಮರ್ಘುಪಾನ ಗೋಷ್ಠಿಯೊಳ್॥

ಮತ್ತಮೊರ್ವಳ್

ಕಂ। ಹರಿನೀಲದಮೊಪ್ಪಣದ ಪರಮಧುಮಧುದಿಂಟದಿತೆಚಪಕ
ಮನುರದಂ। ಧ್ರಿಯಿಸಿಶಶಿಬಿಂಬಮನಾ। ಪರದಿಂಪಿರ್ದರಜನಿಯ
ರಪ್ರೋಲ್ತಳ್॥ ೧೫೬।

ಮತ್ತಮೊರ್ವಳ್।

ನಸುಗುವಪಳುಕಿನಚಷಕದ। ಪಸರದಪ್ರತಿಬಿಂಬಿಪಿಂದುಮಂಡಲ
ಮಂ ನಿ। ಟ್ಟಿಸಿಕ್ಕೆಗೊಳಗಾದನೆನು । ತ್ತುಸವಳದಿಂನೊಕ್ಕಿದಬಳಿಮ
ಧಿರ್ತೆಯಾದಳ್॥ ।೧೫೭।

ವ। ಅಂತುನ್ಮತ್ತೆಯುದಪ್ಪ ವಿಲಾಸನೀಜನಮಂನೋಡಿನಗುತ್ತಂಸದ
ಯನಪೆಯುಮುಂದೊಂದೆಡೆಯೊಳ್ನಿ ಜಮಂದಿರದಚಂಚಲೋಪಯೊ
ಳೊತ್ತೆಗಸಿದಿರ್ದಪಳಂ ಭೂಪಾಳಂನೊಳಸ್ಸಾಗಳ್

ಚಂ। ತೊಳಗ ಪಕಂಖದೊಳೆ ಪ್ರೊಸಳ್ಪಿಡಿಯೊಳ್ಪಿತ್ತಪಾದ ಚೊ

ಲ್ಲಿಯುಂ ಮಳಯಜದಣ್ಪಿ ಕರ್ಪೂರದ ಮೊಗುತಿ ಕತ್ತುರಿ ಬೊಟ್ಟು ಕೈಯ ನಿರ್ಮಳ ಮುಕುರಂದು ಕೋಲದಡೆ ಕಂಠದ ಮುತ್ತಿನ ಹಾರವೊಪ್ಪಲ್ ಗ್ಗಳಿಕೆಯ ದೇಶಿಕಾರ್ತಿ ನಮುಂನೆರೆ ಬೀರುತ ಪೊರ್ದಳೊಪ್ಪಿದಳ್ ||

ವ|| ಅಂತಮಳ ವಿಲಾಸಮುಂ ನೋಡಿ ಮೆಚ್ಚಿ ಪಪಗಲೊಳ್ ರಾಜಂಗೆ ನಾಗರಿಕನಿಂತೆಂದಂ

ಚಂ|| ಎಳೆವೆಳರ ಗ್ರಪೊಳ್ಳದಳಿ ಕತ್ಪಳಿನಂ ನಳಿನಾಕರಂ ನಿವಿರ್ದೇಳಿ ತಚಕ್ರಮೂರ್ಜಿತ ಮೃಣಾಳ ಮಶೋಕೆ ಸುಪಕ್ಷದಾಡಿಯುಂ ಸುಲಲಿತ ಚಂಪಕಂ ಕುವಳಯಂ ಕಮಳಂ ಭ್ರಮರಂಗಳಿರ್ಪ ಕೋಮಳ ವನಮಿಂ ಮುಕಾಂತಮಣಿ ಪುರ್ಪೋಳಿ ಪುರ್ದಿದೇವಿ ಚಿತ್ರಮೋ ೧೫೮

ವ|| ಎಂಬ ವ್ಯಂಗ್ಯದ ಮಾತಂ ಭೂಪಾಳಂ ಕೇಳ್ದು ಮೆಚ್ಚುತ್ತಂ ನಡೆ ಯೆನಡೆಯೆ ಮುಂಪೊಂಪಡೆಯೊಳ್

ಚಂ|| ಪರಘನಸಾರದಿಂ ಸಮೆದ ಬೊಟ್ಟು ಪೊಗೆತ್ತಿಯ ಮುತ್ತಿನೋಲೆ ಬಲ್ಘುರಘವಳ ಬಂಟರಂ ಪುದಿದ ಮಲ್ಲಿಗೆ ಚಂದನ ದಣ್ಪನೇತ್ರ ಕೇ| ಕ ರುಚಿ ಯೊಂಬಿ ಮೆಯ್ದೆ ಬೆಳಗಂ ತರೆವುತ್ತಿರೆ ಚಂದ್ರಲಕ್ಷ್ಮಿಯುಂ| ತಿರೆಪೊಸ ಜೊನ್ನದಿಂದೆಸೆವ ಸೌಧದೊಳೊರ್ವ ಲತಾಂಗಿಯೊಪ್ಪಿದಳ್ |೧೫೯|

ವ|| ಅಂತಾ ಕಾಂತೆಯ ರೂಪಾತಿಶಯ ಮುಂ ಭೂಪಾಳಂ ನೋಡಿ ಹಾ ಸೈಸುತ್ತಿರ್ಪಾಗಳ್ ವಿಟನಿಂತೆಂದಂ

ಕಂ|| ತಣ್ಣದಿರನುಗುಳ್ವ ಬೆಳತಿಗೆ ಗಣ್ಗಳನಗೆ ಮೊಗದ ಬಟ್ಟವೊಲೆಗಳ ಪಲವುಂ| ನುಣ್ಣುರುಳೆಸವಂ ಬೀರುವ| ಪೆಣ್ಗಳ ಚೆಲ್ವಿಕೆಗೆ ಸೋಲದಿರ್ಪ ವನಾವಂ| |೧೬೦||

ವ|| ಎಂದಾ ಮಾತಂ ಕೇಳ್ದು ದಿಟಮೆನುತ್ತಂ ಭೂಪಾಳಂ ಪೊಗೆ ಪೋಗೆ ಮುಂದೊಂದೆಡೆಯೊಳ್

ಚಂ|| ಪರನಖಕಾಂತಿಯೊಳ್ ಪೊಳೆವ ಚಂದ್ರನನೀಕ್ಷಿಸಿ ಸದಿಮ| ಚ್ಚ ರಣದೊಳೇಕೆ ಬಿರ್ದೆಯೆನುತಂ ಪದಮಂ ತೆಗೆಯಲ್ಕೆ ನೀಲದಿಂ ವಿರಚಿತ ಪಾದಕಟ್ಟಮ ದೋಳುಂ ಪೊರಳುತ್ತಿರೆ ಬರ್ಪನೇಳೆನು| ತ್ತಿರಪೆ ಕರಂಗ ಳಂತೆಗೆಯೆ ಬಾರದಿರಲ್ಕೃಷಾ ಮುಗ್ಧೆ ನಾಣ್ಚಿದಳ್ |೧೬೧|

ವ॥ ಅಂತವಳಮುಗ್ಧತ್ವಮಂ ಭೂಪಾಳಂನೋಡಿನಗುತ್ತಿರ್ಪಾಗಳ್
ವಿದೂಷಕನಿಂತೆಂದಂ

ಚಂ॥ ಅರಸನೆನಿಪ್ಪನನ್ನಗೆತಿಗಂಡೊಡೆಕಣ್ಣೆಡದಿರ್ಪನೇನಿರಂತರಕ
ರಪೀಡನಕ್ಕಿರದೆ ಜಾರಿಮನೋಜನವಂ ದಿರಕ್ಕೆಪೊಪ್ಪುರವಣಿಗಂಡು
ನಾಭಿಯುಗುನಿಲ್ಲತಿದಂಡದ ಬಾಧೆಯುಲ್ಲಿನಿರ್ಭರಮೆನೆನಾಣ್ಚಿಬಳ್ಕಿನವು
ವಿದರ್ಭವುಲಂಬಕುಚಂವಧೂಟಿಯಾ॥ ॥೬೨॥

ವ॥ ಎಂದುವಿದೂಷಕನರಳಂ ನಗಿಸುತ್ತಂಪೋಪಾಗಳ್ವೀರವರ್ಧಕ
ನಿಂತೆಂದಂ॥

ಕಂ॥ ನುಡಿರೂಪಧರಂಪೊಸಮುಡಿ॥ ಯೊಡಲುಂತಾಂಕಣ್ಗೆಕಿವಿಗರ
ಸನೆಗೆಮೂಗಿಂ॥ ಗೊಡಲಂಗಿಂಪೆನೆಪೆಂಡರ ॥ ಗಡಣಂಪಂಚೇಂದ್ರಿಯ
ಕ್ಕೆನೆಲೆವನೆಯಲ್ತೆ॥ ॥೧೬೪॥

ವ॥ ಎಂದುನುಡಿಯುತ್ತಂಪೋಗೆವೋಗೆ ಮುಂದೊಬೆಡೆಯೊಳ್

ಚಂ॥ ಪಿರಿದುಪಿನೋದದಿಂಬಿಡದೆಕಂತುಕಮಂ ಪೊಡೆವುತ್ತಿರಲ್ಕೆತ
ತ್ಕರನರುಣಾಂಶು ವಿಂದೆನಪವಿದ್ರುಮಕಂತುಕದಂತೆ ನೇತ್ರಕೇಶರ
ಧವಳತ್ವದಿಂಮಿಸುಪವ್ರಾಕ್ತಿಕಕಂತುಂಕದಂತೆತೋರೆಕಂಡಿರಿದತಿಮು
ಗ್ಧೆವಿಸ್ಮಯದಕಂತುಕಮಂ ದುಬಿಸುಟ್ಟಳುರ್ವಿಯೊಳ್॥

ವ॥ ಅಂತವಳವಿನೋದಮಂ ಭೂಪಾಳಂನೋ ಡುತ್ತಂನಡೆಯೆನಡೆ
ಯೆಮುಂದೊಂದುತಾಣವೆಳ್ಕಂಚುಕಿ ತಮಾದಪಚ್ಚೆಯುಚುಂಚುಲೀ
ವೆಯೊಳ್

ಕಂ॥ ವರರುದ್ರವೀಣೆಯನುವಿದ॥ ಸರಮಂಡಲಕೂರ್ಮವೀಣೆವಲ್ಲಕಿ
ಯೆಂಬಾ॥ ಪಿರಿದಪ್ಪವೀಣೆಗಳನಾ॥ ದರದಿಂಬಾಜಿಸುತಮಿರ್ದುದಬಲಾ
ನಿಚಯಂ ೧೬೬

ವ॥ ಅಂತದಂಕೇಳ್ದು ಹಾರೈಸುತ್ತಂ ಭೂಪಾಳಂನಡೆಯೆನಡೆಯೆಮುಂ
ದೊಂದುತಾಣದೊಳ್

ಚಂ॥ ತರಳತವೆತ್ತಲೋಚನಚಕೋರಿಚಕೋರಿಯನಂಗರಾತಿಬಂ
ಧುರಪದನಾಬ್ಜವಬ್ಜವನಿತಂಜಡವೃತ್ತಿಯೊಳಿರ್ಪುದೀಕ್ಷಿಸ॥ ಲ್ಸುರುಚಿರ
ಕುಂತಲಾಳಿಋಳಿಸಾಂಕಿದ ವಳ್ಳುರೆನೋವನೀವುವೆಂ॥ ದುರುತರದಂ
ಗಶೋಭೆನೆರೆಉತ್ತಮಪ್ರಾಭವಜಗಪಾಲತಾಂಗಿಯು॥ ೧೬೭

ವ॥ ಅಂತಾಲತಾಂಗಿಯುಂಗ ಶೋಭಿಗೆಭೂಪಾಲಂ ಮೆಚ್ಚುತ್ತಂನ ಡೆಯೆನಡೆಯೆ ಮುಂಪೊಂದೆಡೆಯೊಳ್॥

ಕಂ॥ ನೆಗೆನೆಗೆದುಪಾರಿವರ್ತಿಸಪ । ಮಗಳಂತಾಯ್ತು ಡಿಯುಲಾಗಲೋ ಡಾಡಲ್ಕೆ। ಟ್ಟಗೆವಿಪರೀತರತಕ್ಕಿದು । ಮಿಗೆಸಾಧನೆಮುಂದೆವಿಟರೊಳೆಂ ದಳದೊರ್ವಳ್।

ಮತ್ತವೊಂದೆಡೆಯೊಳ್ ॥೧೬೭॥

ಪಂಕಜಮುಖಿಬಾಯೆನೆತಾ । ಯಂಕಾಮಿನಿಜಡಿಯೆಮಧುಪಸಂಗ ದಸಿಚ್ಚಲ್। ಸಂಕೋಚದಜಡಜೀವದ। ಪಂಕೋದ್ಭವದಂತೆವೋಕ ನಿನಗೇಕೆಂದಳ್॥ ।೧೬೮॥

ವ॥ ಆವಲ್ಲದೆಯುಂಮುಂದೊಂದೆಡೆ ಯೊಳ್ಮಹಾಘ್ರಾಣತನ್ನ ತಂಗಿ ಗಿಂತೆಂದಳ್

ಕಂ॥ ಸುದತಿಕೆಲಬಗೆರ್ಗಟುಗ । ಳುದಯಿಸಿದೊಡೆತಮಗೆನೋ ವನಿಃಗೆಮಾಳ್ಪುವುನಿ। ಸ್ನೆರ್ದೆಯೊಳ್ಗಂಟುಗಳೊಗೆದಿದ। ಕೆರ್ದೆಗಳ್ಗಂ ನೋವನೀವುದಿಂತಿದುಚಿತ್ರಂ। ॥೧೬೯॥

ವ॥ ಮತ್ತೆಮುಂದೊಂದೆಡೆ ಯೊಳೊರ್ವಳ್

ಕಂ॥ ಮನುಜರಸತ್ವಂಧೈರ್ಯಂ । ಧನಪೆಸ್ನಬರುಂಟುಮಿಾಲತಾಂಗಿ ಯುಕಡೆಗ। ಣ್ಣಿನಪೊಳೆವಧಾರೆಸಪದಿ। ರ್ಪಸಿತುವರಂನಟ್ಟಬಳಿಕವೆಲ್ಲಂ ತೀರ್ಗುಂ॥ ॥೧೭೦॥

ವ॥ ಅಂತುದಿಟವೆನುತಿರ್ಪರ ಸಂಗೆದಕ್ಷಿಣನಿಂತೆಂದಂ॥

ಕಂ॥ ನೋಟಂನುಡಿಸರಸಂಮು । ದ್ದಾಟಂಸೋಂಕಪ್ಪುಮುನಿಸು ಬೈಗುಳ್ಪೊಯ್ಗುಳ್। ಕೂಟಂಸೊಗಸೆನೆಪಂಡರ। ಬೇಟದಿಪೆಸತುಂಟೆ ಮತ್ತೆಧರಣೀತಳದೊಳ್॥ ।೧೭೧॥

ವ॥ ಎಂದಾಮಾತಿಂಗೆಭೂಪಾಲಕಂಮೆಚ್ಚುತ್ತಂಪೋಗೆಪೋಗೆಮುಂ ದೊಂದುಮಣಿಮಯ ಮಂಟಪದಮತ್ತವಾರಣದೊಳ್ಮಲಂಗಿತನ್ನೋ ಪಂಗೆಜಾಣಿಂಪ್ರಹೇಳಿಕೆಯುಂ ಪೇಳ್ದುದಿಂತೆಂದಳ್॥

ಕಂ॥ ಬಡವಂಬಯುಸುಖದರತಂ । ಬಿಡದಿರಸುವುದರ್ಥಿದಾನಿಯೊ ಳ್ಬಗೆವುದುನೋ। ಳ್ಪೊಡೆತಾನೆನೆಚದುರಂತಾಂ। ನುಡಿದಂಕೇಳ್ಕಾಂತೆ

ಗಿಳಿಗೆನೆಲೆನಾಕಂಪಂ॥ ॥೧೭॥

ವ॥ ಎಂದುಪೇಳ್ದವಂಪಾ ಗುಳ್ದು ಮತ್ತಮಿಳ್ಗಿಂತೆಂದಂ

ಕಂ॥ ಪೊಸಮಿಲ್ಲಂತೊಳ್ಸಲದಿಂ। ಪಕರಿಪುಪಾಳಲ್ಲಸುತ್ತಿ ಬಳಸುತೆಬೆಸ್ನೊ ಳ್। ಮಿಸುಗುವಸಿಂಪುಗಳಂತಾ। ಳ್ದಿಸೆಪುದುಪುಳುವಲ್ಲತಿಳಿದುಪೇಳ್ ಲಲಿತಾಂಗಿ॥ ॥೨೮॥

ವ॥ ಅಂತಲಾರ್ಪಿಬಹಿಲರ್ಪಿಗಳ ಚತುರೋಕ್ತಿಯುಂಕೇಳ್ದು ಭೂಪಾಲಂ ಮೆಚ್ಚುತ್ತಂಪೋಗಲ್ಮುಂದೊಂದೆಡೆಯೊಳ್

ಚಂ॥ ನೆರೆವಭುಜಂಗನೋಳ್ಕುಲವ ನೀಕ್ಷಿಸದಿರ್ಕಮುವೃದ್ಧನೆನ್ನದಿ। ತರುಣವಲಿಯೆನ್ನದಿ ರ್ಪುಸಿಗೆಪೇಸದಿರಾವರ್ಣರೆಸ್ತಳೆ ಜಾತಿಯೊ। ಳ್ಕರುಳೆವಿಚಾರವಂ ಪಿಡಿಯದಾವನೊಳಾದೊಡೆ ಕೂಡುವಸ್ತುವಂ। ತ್ವರಿತದಿಕೊಂಬುದೆಂದು ನಿಜಪುತ್ರಿಗೆಕುಂಟಣಿದೀಕ್ಷೆಯಿಕ್ಕಿದಳ್ ಗುಣಿತಾಕ್ಷರಿ॥ ಚಂ। ಕಳೆಗನಾಂತಕಾಮಿಜನ ದೊಳ್ಕಳಕಿಂಚಿತ ಯಾಗಾಕೀರ್ತಿಯುಂ ತಳೆಕಡುಕೂರ್ಮೆಯಿಂಬರಿದೆ ಕೇಳ್ಸತಕ್ಕೆಗೊ ಳಗಾದನಘವುಂ। ಕೊಳಲರಿಕೌಳಿಕಂಬಿಡಿದು ಕಣ್ಮಲರಿಂಸೊಗಸಿ ಕ್ಕಿಕಸ್ತ್ರಿಯೆ। ಳ್ಮಳಿತಿಳಿಯೆಂಬಪೂದವಿಯು ಜಾಣ್ಮೆಗೆಮೆಚ್ಚಿದನುರ್ವ ರೇಶ್ವರಂ॥ ॥೧೭॥

ಮತ್ತೊಮೊರ್ವಳ್ಪದುರೆ

ನಾಮುಗೋಪಕಂ, ಚಂ॥ ಸುರಸಕೆರವ್ಯವೃತ್ತಿಗರುಪಾಯಿಕೆಪಸ್ತು ವಿನಾಶೆಗೊಲ್ದುತೋ। ರ್ಪುರವುರಸಜ್ಞರ್ಕೊಳ್ಗಡಣದೇಳ್ಗೆದರಸ್ಮಿತದೊಳ್ಪುಸೋಮಶೇ। ಖರಪದಭಕ್ತಿಮೆಯ್ಸಿರಿಯ ಪೆರ್ಚುಗಶಾಶ್ವತಕೀರ್ತಿವೆತ್ತುಬಾಳ್। ತರುಣಿಯೆನಿಪ್ಪದೂದವಿಯುಗೋಸ್ವ ದವಾತಿಗೆ ಮೆಚ್ಚಿದಂನೃಪಂ॥ ॥೧೭॥

ವ॥ ಅಂತುನೃಪಂಮೆಚ್ಚುತ್ತಂ ಬರೆವರೆಮುಂದೊಂದೆಡೆಯೊಳ್

ಉ॥ ನೋಡಿದವರ್ಮಗುಳ್ದು ಪೆರತೋರ್ವರನೀಕ್ಷಿಸದೆಂಬಪೂತುನಾ। ಡಾಡಿಯಕಾಮಿ ನೀಜನದೊಳೆನ್ನ ತನೂಜೆಯನಾವನೀಕ್ಷೆಪಂ ಬೇಡಿತನಾಗಳತ್ತು ನೆರೆವಂ ಬಳಿಕೋರ್ಮೆಯೊಳಿರ್ಪನೆಂದು ಕೊಂ, ಡಾಡುತಮಿರ್ದಳುರ್ಬಿಸೊಬಗಂ ಪಳೆಗಂಟಣೆಯೊಂದುತಾಣ

ದೊಳ್] ||೧೭೬||

ವ|| ಪುತ್ತ್ರಮದಲ್ಲದೊರ್ವಳ್ವ ಟಸವೇತಂಕುಳ್ಳಿರ್ದಾಗಳವರಕ್ಕಂ ಬಂದುಪದಿರಿಂಬಿಸಗೊಳಳ್ಕಿಂತೆಂದಳ್

ಚಂ|| ಹರಿಜನರೂಪುಕೌಶಿಕನ ಸತ್ವಗುಣಂಸುಮನೋನಿಕಾಯ ದೊಳ್ | ಪೊರಳ್ವಶಿಳೀಮುಖಪ್ರಕೃತಿಗೋಪನ ವಿದ್ಯೆಗಳೆಯ್ದಿತಮ್ಮೊ ಳಂ| ಚಿರತೆಯೊಳಿರ್ದ ನಿಚ್ಚನಭುಜಂಗನಗಲ್ಕೆಯೊಳಕ್ಕತಕ್ಷಣಂ ಪರ ವಶೆಯಪ್ಪೆನೆಂದು ಕುಪಿಟಂಸೊಗಸಲ್ವಧುಧೂರ್ತನಾದಿದಳ್ | ೧೭೮||

ವ|| ಅದಲ್ಲದೆಮುಂದೊಂದೆಡೆಯೊಳೊರ್ವ ಳ್ಸಜ್ಜೆವನೆಯೊಳ್ಪೊಜಗ ನೊಳ್ಪೊದಿಪ್ಪೊರಪುಟ್ಟುಚುಂಬು ಲೋವೆಯೊಳ್ಸರತಶ್ರಮಮಂಪು ಪ್ಪಿನವಿಜ್ಜಣಿಗೆಯಿಂದಾ ಬಿಸಿಕೋಳುತಿರ್ದಗಣಿಕೆಯ ಪೊಸರಸಭಾವ ದೆಸೆಯಂಕಂಡೊರ್ವ ಚತುರವಿಟಂಬಂದಿತೆಂದಂ

ಉ|| ಕೈರವನೇತ್ರ ಚಕ್ರಮಿಥು ನಸ್ತನೆವೇರವಚಃಪ್ರಮುಕ್ತರಂ| ಭೋರುವಿಳಾಸಿಪೇಳ್ | ಪದಪಿನೊತ್ತಿಯ ದೇನನೆನೆಸೋಕ ಮಿತ್ರ ತಾ | ರಾರಮಣಪ್ರಕಾಶಮಯಸ್ವೈರವಿಹಂಗ ಮಸೇನವೃತ್ತದಿ ಗ್ವಾ ರಣಸತ್ವಯೆಂಬಿನೆನಲ್ಕಗುಳ್ದಂತ ಲೆದೂಗಿಸಪ್ಪಿಚಂ|| |೧೭೯||

ವ|| ಅಂತಾವಿಟನಚತುರೋಕ್ತಿಗೆ ಭೂಪಾಲಂಪುಚ್ಚುತ್ತಂ ಪೋ ಗಪೋಗೆಮುಂದೊಂದುಜಲಜಲಿಪ ಮಿಸುನಿಯಸೆಜ್ಜೆವನೆಯೊಳ್||

ಮ|| ಪುರುಡಂಪೋರಟಿವೆತ್ತುಜೊತ್ತುಗತಕಂಗನ್ನಂಕಚಾಕರ್ಷ ಣಂ| ಸರಸಂಚಾರುನಖಕ್ಷತಂಗಳರವಂಸತ್ರಾಡನಂಮಿಕ್ಕಪನ್ನೆರದಾ ಲಿಂಗನಮೊಂಟು ಚುಂಬನದಬೆಂಪೆಂಪೊತ್ತು ನಾಲ್ಕಾಸನಂ ಪಿರಿದುಣ್ಮಾ ಲ್ ವಧುನಲ್ಲನೊಳ್ಸಿರವ್ರುತಿರ್ದ ಳ್ಕಾಮಸಾರಂಭದಿ|| |೧೮೦|

ಮ|| ಪರಿಯಂಕೂಜಿತಚೀತ್ಕೃತಂಪದಲಸನ್ಮಂಜೀರ ಕಾಮೋಲ್ಕೃ ತಂ| ಕರಘಾತೋದ್ಧಟಿತತ್ಕೃತಂ ವಲಯಚಂಚದ್ರುಷ್ಟಿತ್ಕೃತಂಜಾ ರುಕಂ| ಧರಸಂಭೂತಗಹೀತ್ಕೃತಂಸರುಚಿರೋಪಸ್ಥದ್ವಂದ್ವತತ್ಸೀ ತ್ಕೃತಂ| ಕರವೇ ಪ್ಪುಳ್ಗಣಿಕಾಜನಂಗ ಳೋಲಪಿಸಂಭೋಗಮಂತಾ ಳ್ದಿದಂ |೧೮೧||

ವ|| ಅಲ್ಲದೆಮುಂದೊಂದುಸೆಜ್ಜೆವನೆಯ ಮುಂದೆಭೂಪಾಲನಿಂದು

ನೊಳ್ಪಾಗಳ್॥

ಚಂ॥ ಪ್ರಿಯುದೊದವಿಂದಮುಪ್ಪಿ ಪಿರಿದಾಳನೆಪಲ್ಲಟದೇಳ್ಗೆದೋಱಿತ್ತ
ನ್ನ ಯುತನುವಿತ್ತುಲಲ್ಲಿ ಮಿಗೆಕೊಲ್ಲೆನು ತಂವೊರೆಗೆಟ್ಟುವಾಕ್ಯಸಂಚ
ಯವನೆಬೀರುತಂ ನವನಖಕ್ಷತಲೇಖೆಗಳಂ ಕವಿಕ್ಕುತಂ। ಪ್ರಿಯನೊಳ
ದೋರ್ವಕಾಂತೆ ಭರದಿಂನೆರೆದಳ್ಪರಮಾನುರಾಗದಿಂ॥ ॥೧೮೨॥

ಮತ್ತಂ

ಚಂ॥ ಸುರುಚಿರಹಾರಮಾಡೆವರಕಿಂಕಿಣಿ ಯೊಳ್ನಲಿದಾಡೆಕರ್ಣಕುಂ
ಡಲನೊಲದಾಡೆಬಟ್ಟಮಲೆಗಳ್ನ ಲಿದಾಡೆಲಲಾಮದೊಳ್ನುರು। ಳ್ವಲೆನಿ
ಮಿರ್ದಾಡೆ ಬೆನ್ನದೆಸೆಯೊಳ್ಕಬರಂ ತೂನೆದಾಡಲೀಱಿಯಿಂ। ಜಲರು
ಹಪಕ್ತ್ರೆಯುರ್ಬಿಪುರುಷಾಯಿತ ದೊಳ್ವಿಟನಂಮುಗುಳ್ಚಿದಳ್
ಗಳಪದೇಳ್ಗೆ ಪಿಂಗೆಘನಘರ್ಮಜಲಂ ಪೊರಪೊಣ್ಮೆನಾಡೆಚ । ಪ್ಪಲ
ತಕುಚಂಕುರುಳ್ಪರೆಯೆಕರ್ಣ್ಣರೆ ಮುಚ್ಚಿಕಡಂಗಿಕೇಳ್ವರಂ ಗಳಯಿಪಬ
ಲ್ಮ್ರದಂಗೆತನುತೂಗೆಬಳಲ್ದುಟ ಪೊಂಗೆಕಾಂತೆಕಾ। ದಲನಿನೊಳಲ್ದು
ಸೌಖ್ಯಮನೆತಾಳ್ದಿಸೆದಳ್ಸುರ ತಾವಸಾನದೊಳ್। ॥೧೮೩॥

ವ॥ ಅದಲ್ಲದೆಮುಂದೊಂದೆಡೆಯೊಳೊರ್ವ ಚಾರುವಿಟಂತನ್ನಸಖ
ಗಿಂತೆಂದಂ॥

ಮ॥ ಸ್ಮರನಾರ್ತೆಜಪ್ಪೊಡೆಲಜ್ಜೆಗೆಟ್ಟರದಪೃಕ್ಷಾರೋಹಣಂಗೆಯ್ದು
ಪೀವರಸೈತಂಬಮೆನಿಪ್ಪವುತ್ತವ ಡದಾಂಬಿಂಬೋಷ್ಠಮೆಂಬಾತ್ರಿಣೋ
ತ್ಕರಮಂ ಕರ್ಚಿಕಡಂಗಿಬಾಯ್ಪಿಡುತು ರುಸ್ವೇದಾಂಬುವೆಂಬಂಬು
ಜಾ। ಕರಮಂಪೊಕ್ಕುರೆಬಾಳ್ದೆನೆಂದು ವಿಟನೋರ್ವಂಪೇಳ್ದಂಸಖ್ಯಿ
ಯಿಂ। ।೧೮೪॥

ವ। ಅಂತುಪೇಳ್ದವಿಟಂಗೆಮಂ ಕೇಳ್ದವಿಟಂಮುಗುಳ್ದಂತೆಂದಂ

ಮ। ಮುಳಿಸಿಂದಂಮಿಗೆನಿದ್ರೆಗೆಯ್ದುತೆರದಿಂ ಕಣ್ಮುಚ್ಚಿ ಕೊಂಡಿದೋ
ದಾಂ ತಿಳಿದಾನೊಯ್ಯನೆ ಸೀರೆಯಂಬಿಡುತಿರಲ್ತತ್ಕ ಕ್ಷೆಯಂಮೆಲ್ಲ
ನ। ಕ್ಕುಳಿಸಲ್ಸೀರೆಸಡಿಲ್ದು ಬೀಳಲೊಲವಂ ಕಂಡಂಪ್ರಿ ಯೊಳ್ಪೆರ್ಮ
ಕೋಪಮುಳಿಯಂ ತಳ್ತಮರ್ದಪ್ಪಿಸೌಖ್ಯದೊಳವಂ ಶಯನಾಗ್ರದೊಳ್ತಾ ।೧೮೫॥
ಳ್ದಿದೆಂ॥

ಷಮತ್ತಮೊರ್ವಂಮನಂಮುತ್ತಿಮುಂಪೇಳ್ದವಿಟಂಗೆಮುಗುಳ್ದಿಂತೆಂದಂ

ಚಂ॥ ಪಲವುದಿನಕ್ಕೆ ಸಿಲ್ಕದಿರದಾಂಪಿಡಿದೇವರಿಗೊಯ್ದು ಬಾಲೆಯು ಳ್ಕಲವೆಲನ್ನೈದಮೆಯ್ದೆಗೆಯಲಪ್ಪಿಕರಾಗ್ರದಿನೀವಿಯಂಕಳಲ್ವಲುಮುರ ನಾಣ್ಚಿದೀಪಿಗೆಯನಂಚಳದಿಂದವೆಬೀಸಿನಂದಿಸಲ್| ನಲ್ಲನೊಳೊತ್ತಿ ಕೂಡಿಪಡೆದೆಂಸಖಮನ್ಮನಸೌಖ್ಯದೇಳ್ಗೆಯಂ॥ |೧೮೭||

ವ॥ ಅಂತಾವಿಟಂಪರಾಕ್ರಮದ ಕೂಟದಚಾಟೂಕ್ತಿಗಳಂ ಕೇಳುತ್ತಂ ಭೂಪಾಳಂನಡೆಯೆ. ನಡೆಯೆಮುಂದೊಂದೆಡೆಯೊಳ್

ಕಂ॥ ಪಳುಕಿನಗೃಹದೊಳ್ವಧುವಿಟ | ನೊಳುಮೊಡಗೂಡುವವಿಕಾರಮುದುಪ್ರೇರಪ್ರೊಣ್ಮಲ್| ನೆಳಲಂಚೆಯುಪೆಲ್ಲಿಯುದೆನೆ| ಗಳಪವಿದೂಷಕನನುಡಿಗೆನಕ್ಕಂಭೂಪಂ| |೧೮೮|

ವ॥ ಮತ್ತಂ ಮುಂಪೊಂದೆಡೆಯೊಳೊರ್ವಂ ಚೌರಿಗೆಯುಂಪೊಕ್ಕುಗಣಿಕೆಯಂ ಬಿಡದೆಪೊರಮಡದಿರ್ಪನಂ ಕಂಡುನಾಡೆಕುಂಟಣಿಯೊರ್ವಳ್ಕಿಡಿಕಿಡಿಯಾಗಿ|

ಮ॥ ನಿರುತಂಶೃಂಗಾರಮುಂ ಬಿಟ್ಟಳಲುತೆಕರುಣಂಬೊತ್ತು ಭೀಭತ್ಸವಾದಳ್| ಪಿರಿದುಂಬೇಡೆಂಬರೊಳ್ವೀರಮನೆತಳೆದುತಂದಾಸ್ಯದಿಂದದ್ಭುತಂಮಿ| ಕ್ಕುರುಶಾಂತಂಪೋಗಿಪೊಯ್ವಳ್ಭಯಮನುಳದುಹಾಸ್ಯಕ್ಕೆಪಕ್ಕಾದಳೀಸೌಂ| ದರಿಯಂದಂತಲ್ಲಿಜಾಣಿಂನವರಸ ದೊಡವಂತಾಯ್ಕರಂಬೀರುತಿರ್ದಳ್

ವ॥ ಎಂದುನುಡಿವದೂದವಿಯ ಚತುರೋಕ್ತಿಗಳಂಸಾಹಿತ್ಯರತ್ನಾಕರಂಕೇಳ್ದು ಪೋಗೆಪೋಗೆನಿಶಾಲಾಂಗಣದ ಲತಾಮಂಟಪದೊಳ್ಸಮೆದಿರ್ದಸಿಂಧುರದ ಜಗುಲಿಯಮಧ್ಯಪ್ರದೇಶದೊಳೊರ್ವಳ್|

ಚಂ॥ ಪೊರಗೆಭುಜಂಗರಿರ್ದಪರಿವೇಂಸನಿಹತ್ತಿತೆನಿನ್ನ ನೀಕ್ಷಣಂ ಪೊರಮಡಿಗೇಗುವೆಂಬಣ ಗಣಹೇಳಿಗೆಯುಂಪಿಡಿದಂ ತಿರೊತ್ತಿಕೊಂಡುರೆಬಿಡದಪ್ಪಿ ಪೇಸರಿಸುತಿರ್ಪವನಂಬಿಸುಟೆದ್ದು ಬಾಯನುತ್ತರಚಿತನೂಜಿಯುಂ ಜರಿದುಕುಂಟಣಿಗರ್ಜಿಸುತಿರ್ದಳ್ಕರಂ| |೧೯೦|

ವ॥ ಅಂತವಳಂಕಂಡುವಿದೂಷಕ ಪಗಲ್ಪೊಳರಾಜಂಗಿಂತೆಂದಂ|

ಚಂ॥ ನೆರೆಪಲಿಪೆತ್ತರಕ್ಕಸಿ ಯೆರಂಕೆಗಳಿಲ್ಲದ ಪಾಳುಗೂಗೆ| ಕ

ರತಿಪಮುಂಡುಗಾಣಿಸದ ಪೆಬ್ಬುಲಿಜಕ್ಕುಲಿಸುತ್ತೆ ಕ್ರೋಧ್ವಸೀಲ್ಕರಡಿಯ ನಿಪ್ಪವುತ್ತುಮುದಿಗುಂಟಣಿಯಂ ಸಿದಿಲೆಯ್ದಿ ಪೊಯ್ಗೆ ಚೆಜ್ಜರನೇಕದು ಗಿವಾರಿಮುರಿದಿಕ್ಕುಗೆಭಾವಿಪ್ರೊಡೀಧರಿತ್ರಿಯೊಳ್‌| ೧೯೦

ವ|| ಎಂಬವಾತಂಕೇಳ್ದು ಪಗಲೊಳ್ದುೞಲ್ದರಾಜಂ ನಗುತ್ತೆನಡೆಯುತ್ತ ಯಿಮುಂದೊಂದೆಡೆಯೊಳೊಜ್ಜೆಳ್ಮದಿಸೂಳೆಯಿರಲ್ಕಾವಿದೂಷಕಂ ಡುಪತ್ತಿಗೆಪೋಗಿ

ಪ|| ಕವಿಗಳ್‌ಪೊಗಳ್ವರೆಂದು ವಕ್ರತೆಯುಕಪ್ಪಂ ಬಿಟ್ಟುನೈರ್ಮಲ್ಯ ಭಾ ಪವನಾಂತಿರ್ದುದು ಮೆಂಡೆಕರ್ಕಶತೆ ಯುಂಬಿಟ್ಟೋತುಸ್ಪ ಮೃದುತ್ವ ವನಾಂತಿರ್ದುವುಸತ್ತು ಚಂಚಲಘೌತೆಯುಂತಾಂಬಿಟ್ಟುಪು ಗುರು |ತ್ವವನಾಂತಿರ್ದುದುಯೋಷಿನಿನ್ನತೇದಿಂದಾರ್ಕಲ್ಲಿದರ್ಥಾ [illegible] ಯೊಳ್" ೧೯೧

ವ|| ಎಂದುವಿಡಂಬಿಸುವವಿದೂಷಕನನುಡಿಗನುಕೂಲನಿಂತೆಂದು ಯುಮುಕಂ|| ಕಂ|| ಹರಿಮಧ್ಯೆದಿಹರಿದೇಹವಿ | ಹರಿವದನದಿನೆಸೆವ ಘುವನುಳಿವನೆಜದುರಂ| ಹರಿಮಧ್ಯೆವಿಹರದೇಹದಿ ಹರಿವದನದಿನೆಸೆವವಘುವನುಳಿವನೆಜದುರಂ|| ೧೯೨

ವ|| ಅಂತಾಚತುರೋಕ್ತಿಗೆ ಭೂಪಾಲಂಮೆಚ್ಚುತ್ತಂ ಪೋಗೆಪೋ ಗೆ ಮುಂದೊಂದೆಡೆಯೊಳೊರ್ವಂ ಸಜ್ಜೆವನೆಯುಂಪ್ರೇಕ್ಷೆಗೆಸಿ ವೋಹವರನಂ ಬಿಟ್ಟನೆಂದಾಣೆಯಿಟ್ಟಲ್ಲ ದೊಲ್ಲೆನೆನಲ್ಕವಳ್ಸಮ್ಮ ಲ್ಕಪಂ ಪೊರಮಟ್ಟುಪೋಪುದಂ ಕಂಡುರಕ್ಕಸಿಗುಂಟಣಿಯೋ ಕ್ಕಾಗಳರ್ಘದಾತ್ರದಿನಿಂತೆಂದಳ್‌.

ಕಂ|| ಸಿರಿಯುಕ್ಕಿದಾಂಟುಬಳಿನೀ | ರೆರೆಯುಲದಿಪುತ್ತನೂಮುಪೋ ದನವಿತ್ತೆ| ಬಾರೆಪುಸಿಯಂಜದೆಪಣವುಂ| ನೆರೆಕ್ಕೊಳಲಿರಿಯೊಂದುಸು ತೆಗೆಕಲಿಸಿದಳೊರ್ವಳ್‌ |೧೯೩

ವ|| ಎಂಬಕುಂಟಣಿಯನುಡಿಯುಂ ಭೂಪಾಲಂಕೇಳುತ್ತಂಪೋಗೆ ಮುಂದೊಂದೆಡೆಯೊಳ್‌

ಉ|| ತಡೆದಿನಿಯಂಬರಕ್ಕೆ ಪುರುಡಿಂದಿದಿರಾಗಿರೆಯಾಕೆಕೇಶಮಂ ಪಿ ಡುಕಪಂಗಿ ನೀಸಿನಿತುಪೊಳ್ತುಮುಡಾವಳಪತ್ತಿರಿರ್ದೆಪೇಳ್‌ಸುಡುಸುಡು ನಿನ್ನನಾಯ್ಕಕತನ [illegible] ದಿಂಕಡೆದಿವು

ತ್ತಮಿರ್ಪವೆಘೂವಂ ಪರಿಭಾವಿಸಿನಕ್ಕನಾನೃಪಂ
ವ॥ ಅಂತುನಗುತಿರ್ಪಾಗಳ್ವಿದೂಷಕ ನವಂಗೆತಕ್ಕವೆನುತ್ತ್ರರಸನಂ ನೆಗಿಸುತ್ತ್ರಂ ನಡೆಯುಲೊಂದೆಡೆಯೊಳೊರ್ವ ಸ್ತ್ರೀನ್ನ ಕನ್ನೆ ವೇಟದವನೊಳ್ನೆರೆದುಬಂದುನಿಜಗೃಹಾಂಗಣದೊಳ್ನಿವೆಸಾಡುತಿರ್ಪುದ ದನೊಡನಾತಿಯುಸಖನಂ ಕಂಡಿಂತೆಂದಳ್
ಕಂ॥ ಪಿರಿದೀಂಟತಣಿಸುತಾಂಮಿ। ಕ್ಕರಸಕ್ಕನ್ಯತುರ್ನಡುಂಕದಂತಿವೆಸೊತ್ತಿ। ದರ್ಶಗಿನವಮುದ್ರೆಯುವೊಪ್ಪತಿ। ಯರುಣಾಧರವಧ್ಯದಂಕಮತಿರಂಜಿಸುಗುಂ ೧೯೬॥
ವ॥ ಎನವಲವಳ್ಕಾಂಬನಂ ಕರಂಜೆನ್ನಾದುವೆನುತ್ತ್ರರಸಂಕಠನೊಳ್ನಡಿವುತ್ತ್ರಂ ನಡೆಯೆಮುಂದೊಂದೆಡೆಯೊಳೊರ್ವ ದೂದವಿತನ್ನಪುಗಳ್ಗಿಪ್ಪೆರ್ವ ಬೊಜಗನಂತವರಲ್ಕೆ ಪದರಿಂದಿಂತೆಂದಳ್
ಚಂ॥ ತಳಿದಲರಂಬಿಸುಟ್ಟಪೊಸತಪ್ಪಲರಂ ಮುಡಿಪೊಸಿದಂಬರಂಗಳಿದುವಿನೂತನಾಂಬರಮನೊಲ್ದುಡು ಪಿಂದಣಜೀರ್ಣಭೂಷಣಂ ಗಳನುಳಿದಿನ್ನವನ್ನಮಣಿಭೂಷಣಮಂ ಕುಡುನೀನೆನುತ್ತೆತ ನ್ನಳುಪಿನಸಂಜ್ಞೆಯುಂಸುತೆಗೆ ತುಂಟಣಿಸೂಚಿಸುತಿರ್ದಳತ್ಕರಿಂ ॥ ೯೭।
ವ॥ ಎಂಬುಳುವಿನಸಂಜ್ಞೆಯಂ ಕೇಳ್ದರಿಮುಚದುರವಿಟಂ ನಾಣ್ಚಿಪೋಗಲ್ಕವಂಗಸೋಲ್ತವಳ್ವರಹ ವಿಧುರೆಯಾಗಿತನ್ನ ಮನದನ್ನಳಪ ಕೆಳದಿಗಿಂತೆಂದಳ್
ಚ॥ ಎಳೆಗೊನೆದಿಂಬಸದ್ರಸಮನೀಂಟುವಗಂಧ ಮನುಂಬಕಂಜತಂಡುಲಮನೆಕೊಂಬಕೋಗಿಲೆಗೆ ಕೀರಕೆತುಂಬಿಗೆರಾಜಹಂಸಗಂ ಪಳಿಸಾರಪೆಣ್ಣೆಪಿಪೋಗೆವರಳ್ಗಳಿ ನಿಪ್ಪವನಿಕ್ಕೆಬಾಳ್ವವೇ ತಿಳಿಯೆಮದೀಶನಲ್ಲದುಳಿದಸೊರ್ಗಸನ್ನಿರುತಂತಲೋದರೀ। ೧೯೮॥
ವ॥ ಎಂದುತನ್ನದೇಹದ ವನಬೆಳವಿಗೆಯುಂಪ್ರಕಟಸುತ್ತಮಿರ್ಪುದಂ ಕೇಳ್ದಪಳತಾಯಿಕೋಪದಿಂ ಪರಿತಂದಿಂತೆಂದಳ್॥ ।೧೯೯॥
ದಾಸೀಸಂಜ್ಞೆ। ಚಂ॥ ಘನಮುಕರಾಂಕಚಾಪವೆನೆರಂಜಿಪಪುರ್ಬಿನಕನ್ನೆವಿರೊನಲೊ। ಚನೆಹರಿಮಧ್ಯಕುಂಭಕುಚೇನೀಂ। ವೃಷಭಾಸ್ಯವಂಗೆಮೆಚ್ಚಿಭೋಂ ಕನೆವಿಘುನತ್ವಮಂಬಗೆದು ನೆಟ್ಟನೆಕೇಳ್ತುಲಿಕ

ಕಿರ್ಗಿವೋಷಮಂ ಬಿನಿ ತ್ತರಸಾಜಮುಂ ಪಿಡಿಪೆಯೆಂದು ಬೆಡಂಗಿನೊಳಬ್ಬೆಬ್ಬ
ರಿದಳ್‌॥ ।೧೯೯।

ಚಂ॥ ಪರೆದಳಕಾಳಿಯಂತೆಗೆಯುದಕು/ ಜಳಂಸುರಿವುತ್ತೆಗಲ್ಲದೊಳ್
ರತಳವಿಕ್ಕಿಸುಯ್ದು ಮಕರಧ್ವಜನಂಬಿಡೆಬೈದು ಚಂದ್ರನೊಳ್ಕರಕ
ರಿಸುತ್ತೆತೆಂಬೆಲರ್ಗೆ ಕಾಯ್ವುವತೆ ಪೂವಿನಪಾಸಿನೊಳ್ಮಹಾ। ಸುರಪ
ಹಾನಳವ್ಯಥೆಯೊಳಂಗನೆಬಾಯ್ವಿಡು ತಿರ್ದಳಳ್ಕರಿಂ॥ ॥೨೦೦॥

ವ॥ ಅಂತಾವಿರಹಾನಳವ್ಯಥೆಯಂ ಸೈರಿಸಲಾರದಾಲತಾಂಗಿತನ್ನಯ
ಸಖಿಗಿಂತೆಂದಳ್‌।

ಚಂ। ಒಲಿಯದವುನ್ನವೇ ಪೆರಗೆಸಾರ್ದಿರುತಿರ್ಪುದು ಲೇಸುಮೊ
ಲ್ದೊಡಂ। ಸಲೆಬಿಡದೋಪನೊಳ್ಸುಖದಿ ನಿರ್ಪುದುಲೇಸುಮುಗುಳ
ಕಾಮನೆ। ಚ್ಚಲರ್ಗಣೆಯಿಂದೆ ನೊಂದಳಲುತಿರ್ಪು ದರಿಂನೆರೆಸಾವುಲೇ
ಸುಕೇ। ಳೆಲೆಸಖಿಮನ್ನವೋಲಕಟ ಬಾಳ್ವೆನಾಗಿರಲಾಗ ದುರ್ವಿಯೊ
ಳ್‌

ವ। ಎಂದವಳ್ಪಲುಂಬುತ್ತಿರ್ಪಸಮಯದೊಳ್ಕಳುಂಪಿದಸಖಿಬಂದು
ಮುಂದೆನಿಂದಿರಲ್ಕಾಗಳ್‌।

ಮ। ಇನಿಯಂಬಾರನಿದೇಕೆ ತಾಂಮುನಿಸಿನಿಂದಿರ್ದ ಪ್ಪನೆನ್ನಾಣೆನೆ
ಟ್ಟನೆ ನಿನ್ನಾಣೆಮನೋಜತಾಪದಿರವಂಬೇಸತ್ತಲಾನಿರ್ದೆನೆಂದೆನೆಪೇ
ಡಾಸಖಿಯೆಂದೆನಂ ಘಿ/ಯೊಳೆನೀಂ ಬೀಳ್ಕೇಕೆಬಿರ್ದಿರ್ದೆನೆಂ। ನಿನಿತು
ಕಾಡುವನಕ್ಕಟಾ ಯೆನುತವಳ್ಬಾಷ್ಪಾಂಬುವಂತೀವಿದಳ್‌ ೨೦೧

ವ॥ ಅಂತುಬಾಷ್ಪಾಂಬುವಂಸುರಿವುತ್ತಂವಿರಹದಿಂಬಾಯ್ವಿಡುತ್ತಿ
ರ್ಪುದಂ ಕಂಡೋರ್ಪಪ್ರೌಢೆಯುಪ್ಪ ಸಖಿನಾಂಪೋಗಿನಿನ್ನಿನಿಯನಂ
ತಂದಪೆನೆನುತಂಪೊರಮಡಲ್ಕವನಂ ಕಂಡಿತೆಂದಳ್‌।

ಸ್ಮರಸಮರೂಪಕೇಳ್ಮನೆಯ ಮುಂದೆಮುಸುಂಕಿನೊಳಿಲ್ಲಿಪಾರಿಸು
ತ್ತಿರೆಪಿಡಿದೋರ್ವನಂ ಬಿಡದೆನೀನೆನುತಾಸುಳಿ ಗೊಂಡುಬಾರೆನಲ್‌।
ತಿರಿಗಿನಗುತ್ತವಂ ಮುಸುಡುದೋರಿದೊಡಂಗನೆನಾಣ್ಚಿ ಕೈಯ್ಯನ। ಚ್ಚ
ರಿಮಿಗೆಬಿಟ್ಟುಪಿಂಗಿದಳೆನು ತ್ತೊಲವಂಸಖಿಮಾಡಿತೋರಿದಳ್‌॥ ೨೦೨

ವ॥ ಎಂದುಸಖಿಯೊಲವನಾಡಿ ಮುನಿಸಂತತಿಳುಪಲ್ಕವಂ ಮನೆಗಬರ
ಲ್ಕಾಂತೆಯಿಂತೆಂದಳ್‌॥

ಚಂ॥ ನಿನಗುರೆಸೋಲ್ತು ಚೇಟಿಯರ ಕಾಲ್ವಿಡಿವಂತುಟದಾಯ್ತು ತಾ
ಯ್ಗನೆ ಟ್ಟನೆಪಗೆಯಾದೆನನ್ಯಗಣಿಕಾವಳಿಗೇಳಿಕೆ ಯಾದೆನಂಗಜಾ। ತನ
ಶರವೆಯ್ದು ಕೆಯ್ದು ಗುರಿಯಾದೆ ನಧೀಶ್ವರನಾಡೆಬೇಟಕಂ ಗನೆವಶೆಯಾ
ದೆನಕ್ಕಟೆನುತಂಗನೆಸುಯ್ದು ಕರಂಪಲುಂಬಿದಳ್॥

ವ॥ ಅಂತುಪಲುಂಬುತ್ತುಮವಳ್ಪಂಗಿಂತೆಂದಳ್।

ಚಂ। ಇನಿಯನೆ ನಿನ್ನ ಚಾರುತರಮೂರ್ತಿಗೆ ನಿನ್ನ ರತಕ್ಕೆ ನಿನ್ನ ಸೋಂ
ಕಿನಸೊಗಸಿಂಗೆ ನಿನ್ನ ಮುಡಿಗಂಪಿಗೆ ನಿನ್ನ ಧರಕ್ಕೆ ಮುದ್ವಿಲೋ। ಚನ
ಮುರುಕರ್ಣಮಂಗಲತೆ ನಾಸಿಕಬಾಷ್ಪಯುಪಂತಿರೊಲ್ದು। ವಿಕ್ಕಿನ
ವಿಟರತ್ತಲೊಲ್ಲೆನೆನು ತಿಂದ್ರಿಯಮೆಯ್ದು ರನಲ್ಮೆದೋರಿದಳ್। ೨೦೫॥

ವ॥ ಮತ್ತಮಿಂತೆಂದಳ್

ಕಂ॥ ಘನಮಾಕಂದಂಕಂದಂ। ಮನಕಿತ್ತುದುವಿರುಪಸಂಪಗೆಯೆ
ಪಗೆಯಿಂ। ದೆನಿಸಿತಶೋಕಂ ಶೋಕಮ। ನೆನಗಂಮಾಡಿತ್ತು ನಲ್ಲ
ನಿನಗಲ್ಲಡೊಡಂ। ।೨೦೬॥

ವ। ಎಂಬವಳಮಹಾಪ್ರೇಮಾತಿಶಯದ ನುಡಿಗಳಂಕೇಳು ಭೂಪಾ
ಳಂಮೆಚ್ಚುತ್ತಂ ವೇಶ್ಯಾವಾಟಮಂಪೊರಮಟ್ಟು ಯಾಮಭೇರೀನಾದಂ
ಕೇಳ್ದು ತಿರುಂಗಿ ನಿಜರಾಜಮಂದಿರಮಂಪೊಕ್ಕು ನಾಗರಿಕಂ ಮೊದಲಾದ
ಪರಿಜನಮಂ ಕಳುಪಿಸೆಜ್ಜೆವನೆಯೊಳ್ಸುಖನಿದ್ರಾ ಮುದ್ರಿತಲೋಚನ
ನಾಗಿರ್ಪಾಗಲ್ನಿಶೀಥಿನೀವಿರಾಮ ಸಮಯದೊಳ್

ಕಂ। ಪೆರೆಯೆಂಬಲುಬ್ಧಕಂಬಾಂ। ದೊರೆಯೊಳ್ಪೊಳೆಪೊನ್ನಮೆಂಬ
ಜಾಲದಿತೆಗೆದಿಂ। ದುರೆತೆಗೆಪವಿಾನರಾಸಿಯು। ತೆರದಿಂಪಡುಗಡೆಗೆಸಾ
ರ್ದುವಂದುಡುನಿಕರಂ॥ ।೨೦೭।

ಅಲ್ಲಿಂಬಳಿಯಂ

ಕಂ॥ ಸುರನದಿಯೊಳ್ದುರ್ಪಶ್ಚಿಮ। ಶರನಿಧಿಯಂಕಂಡುಕಡೆಯೊ
ಳಾಡುವಬಗೆಯಂ। ಧರೆಗವತರಿಸಿದರ್ಜರ। ನ್ಮರಾಳದಂತೆಸೆವುತಿರ್ದು
ದಿಂದುವಬಿಂಬಂ॥ ೨೦೮।

ವರಮಿತ್ರನಬರವಿಂಗಂ। ನಿರುತಂಸ್ಥೈರಿಸದೆದೋರಿಕಂದಿದದೋಷಾ
ಕರನವಗುಣಮಂನೋಡದೆ। ಪಿರಿದುಂಕಣ್ಮುಚ್ಚುವಂತೆಮುಗಿದುದು
ಕುಮುದಂ। ॥೨೦೯।

ವ|| ಮತ್ತಮಿನಿತಾನುಂ ಬೇಗದೊಳ್
ಕಂ|| ಪಿರಿದೆನ್ನ ತೇಜವಡಗಿ| ತ್ತುರುಕುಮುದಚಕೋರಗಳ್ಗೆ ದುಃಖ ಮದಾಯ್ತು| ಖರಕರನಿಗೆನುತೆ ಚಿಂತಿಸಿ | ಧರೆಗಳಿವಂತಿಂದುವಶ್ವಿಮಾದ್ರಿಗೆಸಾರ್ದಂ|

ಪದಪಿಂ ಬೆಳಗಾಯ್ತೆಲ್ಲಿಂ | ಬುದನೆಯ್ದನೆನಿಲ್ಲ ನೋಡಿನಿಲ್ಲದೆ ಬೞಸೀ ಸುದತಿ ತಲೆದೆಗದಳೆಂಬಂ | ದದಿಮುಗುಳ್ದಾಮರ್ದೋರಿಯಮಗಿತ್ತಾಗಳ್| |೨೧೧|

ಮತ್ತಮಾಸಮಯದೊಳ್
ಚಂ| ತ್ವರಿತದಿನೆಯ್ದಿ ತತ್ಪ್ರಿಯರನಪ್ಪಿರತಾಂತ ಲತಾಂತಮಾಲೆಯಂ ಧರೆಗೆ ಬಿಸುಟ್ಟು ಬಿರ್ಚಿ ಮುಡಿಯಂ ಮರಳ್ದಿಕ್ಕಿಕೊಳುತ್ತೆ ನೀವಿಯಂ ಬೆರಲ್ಗಳನೋವುತಂ ತಿರುಗಿತಮ್ಮಯ ಮೆಯ್ಗಳಲಿಂಗೆ ಬೆರ್ಚಿತಾಸುರದಭಯಂಮಿಗಲ್ಕುಲಟೆಯರ್ಕೆರದೆಯ್ದಿದರಾತ್ಮಗೇಹಮಂ ||೨೧೨|
ವ|| ಅಂತಾಸಮಯದೊಳ್
ಕಂ|| ಲಸಿತಸ್ನೇಹಮನುರಗುಣ| ವಿಸರಮನಸರೆನುಂಗಿಕೊಂಡು ಮೊಗದಿಂದೀಪ| ಪ್ರಗರಂದುರ್ಜನರಂದದಿ| ನೆಸೆವುತ್ತಿರ್ದುವಿನಾವಸಾನದೊಳಾಗಳ್|| ೨೧೩|

ಅನಂತರಂ||
ಚಂ| ವನತರುಪಲ್ಲರೀವ್ರಜದಪೀರದ ವಿಪ್ಕರಪತ್ರ? ದಲ್ಲಿಮೆ| ಲ್ಲನೆ ನಸುಳಿದ್ದಿ ಬಿಸುತ್ತ ತನುಕೇಳಿಯೊಳ್ ಸತೀಸವಾಜಕ ತ್ವೆಸುಪಮಶೈತ್ಯಮಂ ಕುಡುತಮಬ್ಜಪರಾಗಮನೆತ್ತಿ ಸೂಸುತಂ ಬೆನದಿತೀಲಿಮತ್ತಿರದೆ ತಣ್ಣೆಲರೊಪ್ಪಿತು ಸುಪ್ರಭಾತದೊಳ್ ೨೧೪|

ಸರಮದುವಚ್ಚ ಮಬ್ಜದೆಲೆಗಳ್ವೊಸ ಪಾಸೆನಲುಲ್ದುವಕ್ಕದಿಂ ದಿರದಮರ್ದಪ್ಪಿನೆತ್ತಿ ಯನೆಕರ್ಚಿಮುದಶ್ರುಜಲಂ ಗಳಣ್ತೆಕಂ| ಘನಮನೆಸೆದಿಚಂಚುಪುಟದೀವಿಗೆಚುಂಬಿಸಿ ಕೂಡಿರಾಗಮಂ| ಧರಿಯಿಸಿ ಚಕ್ರವಾಕಮಿಥುನಂ ಬಿಡವಿರ್ಪುವು ಸುಪ್ರಭಾತದೊಳ್|| ||೨೧೫|
ಕಂ|| ಪರಿಗಷ್ಷಿಸಿರಿಗೆನೆಲೆವನೆ | ವಿರಂಚಿಗಂಬಿಕೆಯೆನಿಪ್ಪನಾಂತನ್ನವಸರ್ | ನಿರುತಂ ಕುಮುದವೆನುತ್ತಂ | ಪಿರಿದುಂ ನಗುವಂತೆ ಮುದದಿನಲರ್ದುದು ಕಮಲಂ| |೨೧೬|

ಸರಸಿಜತತಿಬಲ್ಪಿಂದಂ। ತರಣಿಗೆಕಲ್ತಲೆಯುವರಿಗಳಂಸೇಗೆಯುದ್ದ। ಸುರದಿಂಪಿಡಿವೋಪ್ಪಿಸುವಂ। ಕಿರೆತುಂಬಿಯುಪಿಂಡುಮೆ ರೆದುವಬ್ಜಾಕರದೊಳ್। ।೨೧೭॥

ಮತ್ತಂ

ಮ॥ ಶಿರಮಂತಗ್ಗಿಸಿಗೂಡಿನಿಂದೆ ಪೊರಮಟ್ಟಾಲಸ್ಯಮಂನಿದ್ರೆಯುಂ ಭರದಿಂರೂಡಿಸುವಂತೆ ಪಕ್ಷಯುಗಮಂಬಿರ್ಚುತ್ತೆಕೊಟ್ಟಲ್ಗೆಕೇ। ಸರಮುಬ್ಬಲ್ಕೊರಲೆತ್ತಿಬಾಯ್ದೆರೆದು ಕಕ್ಕೊಕೂ ಎನುತ್ತೆಪ್ಪಿದೋ। ಪರಜಿತ್ತಂಬೆದರಲ್ಕೆಕೋಳಿನೇವಿಂ ಕೂಗಿತ್ತುಷಃಕಾಲದೊಳ್॥

ಮತ್ತಂ

ಚಂ। ಶರನಿಧಿಯುಲ್ಲಿಸಂಭವಿಸಿದಂ ಕಮಳೋದರನೆಮ್ಮಭಾವನಿಂ। ದಿರವೊಡವುಟ್ಟಿದಲ್ಲಿ ಜಲಲಾ ಮದಚಂದ್ರಮನಣ್ಣನೆಂಬುದಂ। ಪರಿಕಿಸದಂದವೊತ್ತಿಪಿಡಿದಾಸ್ಯ ದಿಕರ್ಚುವನೆಂದುಕೂಗುತಾ। ಸುರದಿಶಿವಂಗೆಪುಯ್ಯಲಿಡುವಂದದಿನಿರ್ದುದುಶಂಖನಿಸ್ವನಂ॥ ।೨೧೯.

ಕಂ। ಚಿಲುಕುಲಿಯೆಂಬಖಗವ್ರಜದುಲಿಯುಂ ಕೇಳ್ದಿರ್ದು ಕಲಸುಗೂಳಟ್ಟನುಹಾ। ಚಳಕದಿಸಜ್ಜಕನಂಗಳ। ನೋಲವಿಂನಡೆದತ್ತುಪಾಂಥರರುಣೋದಯದೊಳ್॥ ।೨೨೦।

ಆಸಮಯದೊಳ್॥

ಘರಮಿತ್ರನಒರವಿಗೆಪುರು। ತರಮಂಗಳತೂರ್ಯ ರವಮನೊ ದವಿಸಿದಳೆನಲ್ । ಪಿರಿದುಂದುಂಭಡವನುತೀ। ಸ್ವರಮಂದಿರದಲ್ಲಿಭೇರಿಮೊಳಗಿದುವಾಗಳ್। ।೨೨೧॥

ಮತ್ತಂ

ಅರಮನೆಗಳಲ್ಲಿಗಾಣರ್ । ಸುರುಚಿರಭೈರವಿಕುರಂಜಿವೇಳಾವಳಿಗುರ್ಜರಿಮಲಹರಿಯಿಂಒವನಾ। ದರದಿಂಪಾಡುತ್ತಮಿರ್ದರರುಣೋದಯದೊಳ್॥ ।೨೨೨

ಆಸಮಯದೊಳ್

ದಿನಲಕ್ಷ್ಮೀಸತಿರವಿಯಿಂ। ಜನವಿದೀಪ್ತಿಂಗಳಕಜ್ಜಳವನುರೆಪಿದು। ಕ್ಕನಯದಿಂವೇಲಿಕ್ಕಿದ। ಘನತರಖರ್ಪರದತೆರದಿನಿರ್ದುಗಗನಂ॥ ॥೨೨೩॥

ಕಂ|| ಇನನಪರದಿಂಗೆಸಂಧ್ಯಾ| ವನಿತೆಪೊದಳ್ದಿತ್ತುಸಿದರ್ಗಕಾಂಚನಮುಮನೂ| ತನರತ್ನತೋರಣಗ್ಯುತಿ| ಯೆನಲೆಸೆದುದುಪೂರ್ವದಿಗೆಯಸಂಧ್ಯಾರಾಗಂ| ೨೨೪|

ಸುರರಿಪುಗಳೆನಿಪ ಮಂದೇ | ಹರನಿನನಸಿಯಿಂದೆ ತರಿಯಲಂಬರವಿವರ್ಗ| ಪರಿಸಿದರುಣಾಂಬುರುಚಿಯೆನೆ| ಪಿರಿದೆಸೆದುದುಮೂಡದೆಸೆಯಸಂಧ್ಯಾರಾಗಂ|| |೨೨೫|

ಚಂ| ಪಿರಿದರಿರಾಜನಂತೆವರಿತಾರೆಗಳಂ ಸೆರೆಯಿಕ್ಕಿನೆಯ್ದಿಲಂ| ಬುರುತರಕೋಶಮಂ ಬಿಡದೆಮುದ್ರಿಸಿರಾಗದಿ ಮಂಡಲಾಗ್ರವೆ| ತ್ತಿರದನಿಜಪ್ರಕಾಶಮನೆಬೀರಿಖಗಧ್ವನಿ ವೇದಮಂತ್ರಮಾ| ಗಿರಲುದಯಾದ್ರಿಪೀಠದೊಳಿನಂ ಧರಣೀಶ್ವರನಂತಿರೂಪ್ಪಿದಂ| ||೨೨೬|

ಮ| ಸ್ರ| ಕ್ಷಣದೊಳ್ಮಂದೇಹರೆಂಬ ಸುರರಿಪುರೆಸೀಳ್ದಿಕ್ಕಿಸುತೋಷಮಂಧಾ |ರುಣಿಗೀವೃತ್ತಂತೆಮಂಥಾ ಚಳಪವಿಯೆನಿಸುತ್ತೊಪ್ಪಿದಂಶಕ್ರಚೂಡಾ| ಮಣಿತಾನೆಂಬಂತಭಂಗಂಘನತರರು ಚಿರಾಂಗನಾಶ್ರೀಭುಜಂಗಂ| ಗುಣತುಂಗಂಪುಣ್ಯಸಂಗಂವಿಕಸಿತ ವನಜಾತಾಂತರಂಗಂಪತಂಗಂ || ೨೨೭|

ಕಂ| ಗಿರಿಶಿಖರಸೌಧಶಿವಪುಂ| ಡಿರಭೂರುಪವೆಂಬಿವಕ್ಕೆಮೆಯ್ದೊಡವಂವಾ| ಸರಮಣಿಮಾಡಿಸಿಕೊಟ್ಟಂ | ತಿರೆಕೆಂಬಿಸಿಲಲ್ಲಿಗಲ್ಲಿಕಣ್ಗೆಸೆದಿರ್ಕ್ಕುಗಂ| |೨೨೮|

ಚಂ| ಯುವತಿಯರೆತ್ತುವಾ ರತಿಗಳುತ್ಸವವದೊಳ್ವರಪುಣ್ಯಪಾಠಕಸ್ತವತತಿಯೊಳ್ದ್ವಿಜವ್ರಜಡವೇದದೊಳಗ್ಗದಗಾಣರೊಳ್ದ್ರವಾ ಮಪಶುಭಗೀತದೊಳ್ಮುದಮನಾಂತು ಮಹೇಶಯೆನುತ್ತಮಾಗಳು| ಪ್ಪವಡಿಸಿದಂಗುಣಾಂಬುನಿಧಿಚೋಳನೃಪಾಳನತೀವಲೀಲೆಯಿಂ||

ವ| ಅನಂತರಂಶಯ್ಯಾತಳದಿಂಪೆದ್ದು||

ಕಂ| ಅನುರಾಗದಿಕಪಿಲಾದರು| ಶನವಾದ್ಯಪರೀಕ್ಷಣಾದಿಶಂಧ್ಯಾಕ್ರಿಯೆಯುಂ| ಮನವೊಸೆದುಮಾಡಿಭಕ್ತಾ| ಘನಳಿನವನದಿನಪನೆನಿಸುತೆಸೆದಂಭೂಪಂ|| |೨೩೦|

ವ| ಅಲ್ಲಿಂಬಳಿಯಂದೇವಪೂಜಾ ನಿಕಾಂತವಂಪೊಕ್ಕುಸದ್ಭಕ್ತಿಯಿಂದಲಿಂಗಾರ್ಚನೆಯುಂ ಮಾಡಿದನಂತರಂ|

ಕಂ॥ ವರವಸ್ತ್ರಾಭರಣವ್ರಜ। ದರದಿಂದಂತಾಳ್ದು ದೇವಪೂಜಾಗೃಹ
ಮಂ॥ ಧರಣಿಪನಾಗಳ್ಪುರಮ ಟ್ಟರದೊಲವಿಂಬಂದುಪೊಕ್ಕನಾಸ್ಥಾಯಿ
ಕೆಯೊಳ್॥
೨೯೧॥

ಅಂತುಪೊಕ್ಕು

ಚಂ॥ ಕರಿರಿಪುವಿಷ್ಟರಸ್ಥಿತನಮಾತ್ಯಯುತಂ ರಮಣೀವಿರಾಜಿತಂ
ಸುರುಚಿರಚಾಮರೋಲ್ಲಸಿತಮುದ್ಧ ಕವಿಪ್ರಕರಾನ್ವಿತಂಮಹಾ। ಸುರ
ಬಳಮಂಡಳೀಕಪರಿಸೇವ್ಯನುದಂ ಚಿತಗಾಯಕೋರ್ಜಿತಂ ಚಿರತರ
ಭಾಗ್ಯನೆಂದೆನಿಸುತೊಪ್ಪಿದ ನೋಲಗದೊಳ್ಮಹೀಶ್ವರಂ॥

ವ॥ ಅಂತೊಡ್ಡೋಲಗಂಗೊಟ್ಟು ಕುಳ್ಳಿರ್ದಸಮಯದೊಳ್

ಚಂ॥ ವಿಲುಠತ್ಕಾಂಚನಘಂಟಿಕಾವಳಿಲಸತ್ಕೌಪೀನಯುಕ್ತೋರು
ಸ॥ ಲ್ಲಲಿತೋದಂಚಿತ ನವ್ಯ ಚೀನ ವಸನೋತ್ಕ್ಷೇಪಂ ಜರತ್ವಾಂಯು
ತೋಜ್ವಲಕೂರ್ಚಂಧೃತವೇತ್ರ ದಂಡನಿರದೇಳ್ತಂದಂಪ್ರತಿಹಾರನಂ
ದೊಲವಿಂದುರ್ವೀಪನೋಲಗಕ್ಕೆ ಪಿರಿದುಂವಿಜ್ಞಾಪನೋತ್ಕಂಠೆಯಿಂ॥

ವ॥ ಅಂತೆಳ್ತಂದು ದೌವಾರಿಕ ನವನಿತಲೋತ್ತಮಾಂಗನಾಗಿ ಪೊಡ
ಮಟ್ಟುಕೈಗಳಂ ಮುಗಿದೆಲೆದೇವನಿಜಕಿಂಕರರಪ್ಪನೃಪರೊಳ್ಕಪ್ಪಮಂ
ಕೊಂಡುಬಾಗಿಲೊಳ್ಬಂದಿರ್ದಪರೆಂದು ಬಿನ್ನೈಸಲ್ಬಗಲ್ಬೋಳರಾಜಂ
ಕೇಳ್ದು ಬರವೇಳೆಂದೆನಲ್ಕವಂ ಪೋಗಿಪುಗಿಸಲ್ಕವರ್ಬಂದು ದೂರದೊ
ಳ್ಮೈಯಿಕ್ಕಿನಿಟಿಲತಟಲುಟಿ ತಕರಪುಟರಾಗಿ॥

ಚಂ॥ ಇವುಮಗಧೇಶನಿತ್ತಗಜ ಮಿಂತಿವುಘೂರ್ಜರನಿತ್ತ ವಾಜಿಯಿಂ
ತಿವುಮರುರಾಜನಿತ್ತರಥಮಿಂತಿ ನೃಸಿಹ್ಮಳನಿತ್ತರತ್ನಮಿಂ। ತಿವುದಹ
ಳೀಂದ್ರನಿತ್ತದುಗುಲಂಗಳು ಮಿಂತಿವುಗೌಳನಿತ್ತಪೊ। ನ್ನಿವನವನೀಶ
ಚಿತ್ತವಿವುದೆಂದುಚರರರ್ಪದ ಪಿಂದೆತೋರಿದರ್

ಕಂ॥ ನರಪತಿಬಿನ್ನಪವೆಲ್ಲಾ। ಧರಣಿಪರೊಲವಿಂದೆಕಪ್ಪಮಂ ಕೊಟ್ಟೆ
ರ್ನಿಭರದಿಂದವರೊಳಪ್ಪಂದ್ಯಂ। ಪಿರಿದಾಜಿಯೊಳಲ್ಲದೀಯೆನೆಂದಂಮು
ಳಿಸಿಂ॥

ವ॥ ಎಂದುನಿಜಚರರರ್ಪೇಳಲ್ಕೇಳ್ದು ಪಗಲ್ಬೋಳರಾಜಂಕೊಪಾಟೋಪ
ನಾಗಿಪುದೋರ್ದ್ದಂಡ ಪ್ರಚಂಡತೆಯುಂ ತೋರಿಕಪ್ಪಮಂಕೊಂಬೆನೆನು
ತಿರ್ದನಸಮಯದೊಳೊರ್ವ ದೂತಮುಖ್ಯಂದೌವಾರಿಕನಿವೇದಿತನೊ

ಳಗಂ ಪೊಕ್ಕಾಗಳ್

ಕಂ|| ವಿತತಾನ್ವಾಯಗತಂ ವಿ| ಶ್ರುತಾರ್ಥನಾಕಾರವಂತನತಿಚತು ರವಚೋ|| ನ್ವಿತನಧಿಕನೀತಿಪರನೆನಿ | ಪತುಳಗುಣಂದೂತನರಸನೆಸ ಗೆಳ್ತೆಂದಂ||

ವ|| ಅಂತೆಲ್ಲಿಂದಾದೂತಮುಖ್ಯಂ ವಿನಯವಿನಮಿತೋತ್ತಮಾಂಗ ನಾಗಿವುಚಿತಾಸನದೊಳ್ಕುಳ್ಳಿರ್ದುದುಮಾಗಲಾಪಗಲ್ಪೋಳರಾಜನುಮು ನಪಲ್ಲವಪ್ರೇರಿತಂಗಾಂಗೇಯಾಮಾತ್ಯ ನಾತನಮೊಗಮಂನೋಡಿ

ಕಂ|| ಆರಟ್ಟಿದರಿಲ್ಲಿಗದೇಂ | ಕಾರಣವೇಳ್ತೆಂದೆಮೆಂದಮಾತ್ಯಂನುಡಿ ಯಲ್ | ಭೂರಮಣಂಕೇಳುತ್ತಿರೆ, ಧೀರತೆಯಿಂದೂತಮುಖ್ಯನಂದಿಂ ತೆಂದಂ|| |೨೩೪||

ಚಂ|| ಇಳೆಯಧಿನಾಥನಿನ್ನ ಘನಸತ್ವದ ವಾರ್ತೆಗೆಕಾಯ್ದು ಪಾಂಡ್ಯ ರೊಳ್| ಬಲಯುತನಪ್ಪಕೀರ್ತಿಯುತನಪ್ಪಮಹಾಕಲಿಕೂನಪಾಂಡ್ಯ ನ| ಗ್ಗಳಿಕೆಯೊಳಾಜಗಂದು ೬ ರುತಿರ್ದನಗಂದುಪೊಡರ್ಪಿನೇಳ್ಗೆಯಂ ತಳುವದೆಪೋಗಿಪೇಳ್ದ್ದು ಪೊರವಂಡಿ ವುದೆಂದಿರಪೆನ್ನನಟ್ಟಿದಂ||

ವ|| ಎಂದುದೂತಮುಖ್ಯಂತನ್ನೊಡೆಯನಪೊಡರ್ಪಿನೆಸಕಮಂನು ಡಿಯಲ್ಕಾಗಳ್|

ಕಂ|| ಜನಪತಿಸರೋಷಹಸಿತಾ | ನನದಿಂಪುದ್ಭುಜದತೀಂಟೆಗಾಂಪ ವರಿಲ್ಲಂ|| ಡನುತಿರ್ಪನನ್ನೆಗಂನೆ | ಟ್ಟನೆಬಯಸಿದಕಾರ್ಯವಿಂದುಸಿದ್ಧಿಸಿ ತೆಂದಂ| |೨೩೫|

ವ|| ಎಂದುಪಗಲ್ಪೋಳರಾಜಂಕೋಪಾಟೋಪದಿಂದೆಲವೋನಿನ್ನು ದ್ದಂಡಪಾಂಡ್ಯ ನೆಲ್ಲಿರ್ದಪನಲ್ಲಿಗಾಂಬಂದುಮದೋದ್ದಂಡಪ್ರಚಂಡತೆ ಯಂತೋರ್ಪೆನೆಂಬುದಂ ಪೇಳ್ಪೋಗೆಂದಾಕ್ಷೇಪದಿಂದೂತನಂಕಳುಪಿ ಸಮಯೋಚಿತಕಾರ್ಯ ಪರ್ಯಾಲೋಚಿತಾಸಕ್ತಚಿತ್ತನಾಗಿನಿಜಾಸ್ಥಾನ ಮಂಪಿಸರ್ಜಿಸಿಗಾಂಗೇಯಾಮಾತ್ಯ ಭೇಸಲ್ಲಿಂದೆರ್ದು

ಕಂ|| ಪರಿಹರಕೀರಂಜಾಲಾಂ |ಧರಪಾನಾ ರಾವದಿಂಪೆರ್ದೋರ್ಕೃತ ಮು| ಸ್ಫುರಿತತರವೇಕಾಂತಗೃಹಾಂ|| ತರವಂಭೂಪತಿಯಮಾತ್ಯಸಹಿ ತಂಪೊಕ್ಕಂ| |೨೩೬|

ವ|| ಅಂತುಪೊಕ್ಕುಮಣಿ... ಗಾಂಗೇಯಾಮಾತ್ಯನ

ಪದನವುಂನೋಡಿ

ಕಂ॥ ನೃಪನೀತಿತಪ್ಪದಂತಿರೆ। ವಿಪುಳವಚಶ್ರೀಪೊದಳ್ದು ನಾರ್ದಂತಿರೆ ನಿ। ನ್ನುಪಮೆಯೊಳುಸುರುವುದೆನಲವ ನಿಪಂಗೆತನ್ಮಂತ್ರಿವರ್ಯ ನಂದಿಂತೆಂದಂ॥

ಜನಪತಿನಿಮ್ಮಂದವಿರಾ। ಜನೀತಿಯುಂಬಲ್ಲನಾವನಾದೊ ಪದೇಂನೆಟ್ಟನೆಕಾರ್ಯ್ಯದಿನೀವಿ। ತ್ತನುನಯದಿಂ ಬಿನ್ನವಿಪ್ಪೆನೆನ್ನರಿವನಿತಂ॥ ಪರಷಾಡ್ಗುಣ್ಯಂ ಸಪ್ತಾಂ। ಗರಾಜ್ಯದೊಡವಂತ್ರಿಶಕ್ತಿಚತುರಂಗಬಲಂ॥ ನಿರುತವುಪಾಯಚತುಷ್ಕಂ, ಧರಣಿಪಪಂಚಾಂಗಮಂತ್ರ ಮಿರ್ಪುದು ನಿನ್ನೊಳ್

ವ॥ ಇಂತಪ್ಪ ನಿಮ್ಮೊಡನೆ ತೊಡರ್ದಪೆನೆಂದು ಪಂದಿಯಂತೆರಾಜ್ಯದುನ್ನತಿಯ ಗರ್ಬವುಪೆಂತೆಂದೊಡೆ

ಚಂ॥ ಘನತರದೇಶ ಮತ್ಯಧಿಕ ಷಡ್ಬಲಮುನ್ನತದುರ್ಗ ಪಂಚಕಂ ತನಗಿನಿತುಂಟೆನಿಪ್ಪ ತುಳಗರ್ಬದಿ ನಿನ್ನೊಡನಾಜಿಗೆಂದುದ್ರ। ತನನಿರದಟ್ಟಿದಂ ಪ್ರಬಳನಲ್ಲದನೆಯ್ದುವನೇ ಸವರ್ಧನ ।ತ್ಯನುಪವುಕೂನ ಪಾಂಡ್ಯನೆನೆ ಕೋಪಿಸಿದಂ ಕಲಿಚೋಳಭೂಭುಜಂ

ವ॥ ಅಂತುಕೋಪಿಸಿಮಂತ್ರಿಯೊಡನಿಂತೆಂದಂ

ಚಂ॥ ನೆರಪಿದನೇಕ ಮತ್ತಕರಿಯಂ ಹರಿಯಂ ಸಿರಿಯಿಂದೆಸೊರ್ಕಿಬಂದರಿನೃಪನಪ್ಪ ಪಾಂಡ್ಯಕುಲಮಂ ಛಲಮಂ ಬಲಮಂ ಕಲಂಕಿಭೀ।ಕರತರವಾರಿಯಿಂದ ಮುರಮಂ ಕರಮಂ ಶಿರಮಂ ತೆಳಲ್ಕೆನೆ। ತ್ತರ ಪೊನಲೊಳ್ವತೂಥದಿನರಳ್ಚಿ ತೆರಳ್ಚಿ ಪೊರಳ್ಚಿ ತೋರುವೆಂ ॥೨೮೫॥

ವ॥ ಎಂದು ಕೋಪಾಟೋಪದಿಂ ನುಡಿವಪಗಲ್ತ್ತೋಳ ರಾಯ ನಿಚ್ಚೈಯರಿದು ಮಂತ್ರಿವರ್ಯನಿಂತೆಂದಂ

ಕಂ॥ ಭೇದದಿನುಪಪ್ರದಾನದಿ। ನಾದಂಥನಹಾನಿ ಸಾಮದಿಂ ಬಲಮಿಗುಂ॥ ಶೋಧಿಸಿದಂಡದಿಗೆಲ್ವುದು। ಮೇದಿನಿಯೊಳಿ ರಾಜನೀತಿತಪ್ಪದುನೃಪತೀ। ।೨೮೬॥

ಇದುಕಜ್ಜಮಪ್ಪದಿರ್ದಡೆ। ಗಧಟಂದಾರಿಟ್ಟು ಕಾದಿರಿಪುವಂಗೆಲಿಯಲ್ಕಾದಿತರಿಪು ವೆಂದುನಿಶ್ಚೈ ।ಸಿದಮಂತ್ರಿಯಮತಿಗೆಮೆಚ್ಚಿದಂಭೂಪಾಳಂ।

ವ ಅಂತು ಕಾರ್ಯಮಂ ನಿಶ್ಚಯಿಸಿ ಮಂತ್ರಿ ಸಮೇತಂ ಮಂತ್ರಾಗಾರದಿಂ ಪೆರ್ಗುರ್ ಭೂಕಾಂತಂಗಮನೋದ್ಯೋಗಕ್ಕೆಂದು ತಂತ್ರಾಧ್ಯಕ್ಷನಪ್ಪ ಸಿಹ್ಮನಾದನಂ ಬರಿಸಿ ಬೆಸೆಸುವುದುಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಲ್ಕಾಗಳ್

ಉ ತುಳ್ಕೆ ಸಮುದ್ರವಾರಿ ನಭಮಂಬಿಡದೊಯ್ಯೆ ಫಣೀಂದ್ರ ಕಂಧರಂ
ಬಳ್ಕೆ ಧರಿತ್ರಿ ತಳ್ಗೆ ದೆಸೆಗೆಟ್ಟು ದಿಶಾಧಿಪ ರೋಡೆ ದಿಗ್ಗಜಂ। ಗಳ್ಕಡುಬೆರ್ಚಿ
ಬೀಳೆ ಭಯಮುತ್ತು ಸಮಸ್ತ ರಿಪುಕ್ಷಿತೀಶರೆ। ಯ್ದಳ್ಕೆ ವಿಗುರ್ವಿಸಿತ್ತು ಜ
ಯಭೇರಿಯ ಭೂರಿಗಭೀರ ನಿಸ್ವನಂ॥

ಅಂತಾ ತ್ರಿಭುವನ ಭಯಂಕರಮಪ್ಪ ಭೇರೀನಿನಾದಮಂ ಕೇಳ್ದು ಮಾವಂತರ್ಪರಿದು ಗಂಧಸಿಂಧುರಂಗಳ್ಪಣ್ಣಿ ಕೈಗೆಯ್ಯಲ್

ಮ॥ ವರಕುಂಭಪ್ರತಿಮಾನ ದಕ್ಷಿರದನಂ ಗಾತ್ರಾಪರಂ ಪೇಚಕಂ।
ಸ್ಫುರದಗ್ರಾಂಗುಳಿ ಕರ್ಣತಾಳಮುರಃ ಪಾರ್ಶ್ವಂ ಕಂಧರಂ ಸನ್ನಮದಂ।
ಕರಟಂ ಬಂಧುರವಂಶಲೇಖೆ ವಿಚಳದ್ವಾಲಂ ನಖಂ ಪಾದ ಮೊಪ್ಪಿರಲೆತ್ತಂ
ದುದು ಜಂಗಮಾದ್ರಿಗಳವೋಲ್ಮತ್ತೇಭಸೈನ್ಯೋತ್ಕರಂ

ವ। ಮತ್ತಂ ಮಾನೆಯಾಂಡಂ ಮೊದಲಾದಾರೋಹಕರ್ಪರಿದು ಜಾತ್ಯಶ್ವಂಗಳಂ ಪಲ್ಲಣಿಸಿ ಕೈಗೆಯ್ಯಲ್

ಮ। ಧೃತಕಾಠಿನ್ಯಖುರಂ ಸುವೃತ್ತನಯನಂ ನಿರ್ಮಾಂಸಪಾದಂ ಮ
ಹೋನ್ನತನೈತಂ ಬಘರಂ ವಿಶಾಲನಿಟಲಂ ಸದ್ಗ್ರೀವ ಮಾಷಚ್ಛ್ರುತಿ
ದ್ವಿತಿವಿಸ್ತಾರಿತ ರೋಮರಾಜಿ ವಿಚಳದ್ವಾಲಾಗ್ರಮೊಪ್ಪಲ್ಸದಾ ಗತಿ
ವೇಗಂ ಮಿಗೆ ಹೇಷಿತಧ್ವನಿಗುಡುತ್ತೆಳ್ತಂದು ದಶ್ವವ್ರಜಂ

ವ। ಮತ್ತಂ ಸಾರಥಿಗಳ್ಪರಿದು ಮಣಿರಥಂಗಳಪ್ಪಡಿ ಕೈಗೆಯ್ಯಲ್

ಚಂ ಸುರುಚಿರಚಕ್ರಮುದ್ಧತರ ನೇಮಿಲಸದ್ವಳಯಂ ವಿನೂತ್ನಕೀ
ಲ್ವರಯುಗಮುನ್ನತಾಕ್ಷ ಮುರುಕೂಬರಮೂರ್ಜಿತ ಮತ್ತವಾರಣಂ
ಸ್ಫುರಿತ ಪತಾಕ ಮುದ್ಘಟಿತಶಸ್ತ್ರಚಯಂ ಪಿರಿದೊಪ್ಪೆ ಚೇತ್ಕೃತಸ್ವ
ರಮಿರದುಣ್ಮೆ ಬಂದುವತಿವೇಗದಿರತ್ನ ವರೂಥಸಂಕುಳಂ

ಮತ್ತಂ ಪದಚರರ್ಕೈಗೆಯ್ದು

ಚಂ।ಪದೆದಳವಟ್ಟ ಚೆನ್ನದುಡಿಯಂ ಪೊಸಲೇವಣದಿಂ ಪೊದಲ್ದು ಘುಸೃಣ
ಸಿರಿಖಂಡದಿಂ ಮಿಸುಪ ಮುತ್ತಿನ ಲಂಬಣದಿಂ ಪೆಕಾಪಿಳೊಳ್ಕೈ ದತೊಡರ್

ನಿರಾಜಿಸುತೆ ತೀವ್ರಶರಾಸ್ತ್ರ ಮನಾಂತುಬಳ್ಳಿನಿಂ ಪದಚರಮುರ್ಬಿ
ಬಂದುದರಿಸೈನ್ಯಕ ಕಾನನದಾವವಹ್ನಿವೋಲ್ ।
ಮತ್ತಮಾಪ್ರಸ್ತಾವದೋಳ್

ಕಂ॥ ಚತುರಂಗ ಸೇನೆಕ್ಕೈಗೆ । ಯ್ದತಿಶಯದಿಂಬಂದಿರಲ್ಕೆ ಪಿರಿದುಬ್ಬು
ತ್ತಂ॥ಕ್ಷಿತಿಪತಿಚೋಳಂ ವೀರೋ । ನ್ನತಿಯಂಭುಜದಲ್ಲಿ ತಾಳ್ದು ಬಳಿಕೇ
ಗೆಯ್ದಂ।

ಮ॥ ವರಕೇಷಾಕ್ಷತೆಯಿ ಕ್ಕೆವಂಗನೆಯರಾಶೀರ್ವಾದನಾದಂಥರಾ ।
ಸುರ ಸಂತಾನದವೇದನಾದವತಿ ಸನ್ಮಾಂಗಲ್ಯತೂರ್ಯಸ್ವನಂ ಭರದಿಂ
ದೋದುವಪುಣ್ಯಪಾಠಕರವಂಸಾರಂಭದಿಂ ದುಣ್ಮಲಾ। ದರವಿಂದಂನ್ನ
ಪಗೇಹದಿಂದೆಪೊರಮಟ್ಟಂಚೋಳಭೂಪಾಳಕಂ ।೨೫೪

ವ॥ ಸ್ಫುರದಂಗದ್ಯುತಿನೀರದಂಶ್ರುತಿಮಯೂರಂ ನೀಳ್ದ ಕೆಂಗಣ್ಣ ಕೇ।
ಸರಿಗೀರ್ವಾಣಸರಾಸನಂನಿಮಿರ್ದದಂತದ್ಯೋತಿ ವಿದ್ಯುತ್ಪ್ರಭಾ।ಸ್ಫು
ರಿತಂಬೃಂಹಿತಮೇ ಸಿಡಿಲ್ಮದಜಳಂಸದ್ವೃಷ್ಟಿ ಯಾಗಲ್ಮಹಾ । ಕರಿಕಾ
ರ್ಗಾಲದವೋಲಿರಲ್ ಸುರಪನೊಳ್ಪಂಬೀರಿದಂ ಭೂಭುಜಂ ।೨೫೫।

ಅಂತೇಳ್ತರೆ

ಕಂ॥ ಉದಯಮಹೀಧವಕೂಟಾ । ಗ್ರದೊಳೊಪ್ಪುವ ಸೂರ್ಯನಂತೆ
ರಣಕೇಳಿಯನಾ । ಮದಮದಗಜಮಸ್ತಕದೊಳ್ಪದಿ ದೆಸೆದಂಚೋಳ
ರಾಜನೂರ್ಜಿತತೇಜಂ ॥೨೫೬॥ ಆಗಲ್

ವರಕುವಳಯಮಂತನ್ನಂ । ತಿರಪಾಲಿಪನೆಂದುಚೋಳನಂನೋಡ
ಲ್ಬಂ । ದುರುತರಶಶಿಮಂಡಲವೆನೆ। ಸುರುಚಿರ ಧವಳಾತಪತ್ರ ಮತಿರಂ
ಜಿಸುಗುಂ। ।೨೫೭॥

ಅಲರ್ದಸಿತಾಂಭೋಜದಮೇ। ಲೆಲರೊಲಪಿಂನೆಗೆದಗಗನಗಂಗೆಯ
ತೆರದೊಂಗಳಿನಲ್ಭೂಪನಬೆಳ್ಗೊಡೆ। ಗೆಲದೊಳ್ತೊನೆದೆಸೆವವಮಳಚವ
ರರುಹಂಗಳ್। ।೨೫೮॥

ವ॥ ಅಂತಾಗಂಧ ಸಿಂಧುರ ಸ್ಕಂದದೊಳ್ ಛತ್ರಚಾಮರಂಗಳಿಂಥೊ
ಪ್ಪೀನೆಸೆವುತಿರ್ಪಾಸಮಯ ದೊಳ್ಪೂರ್ಣೇಂದುದಿತ ಕ್ಷುಭಿತಪಾರಾ
ವಾರಮಂತೆನೆಗೆದುಘೂರ್ಮಿಸುತ್ತೆ ರಾಜಲೋಕಮೆಯ್ದಿಯಹಮಹವಿ
ಕಬಿಂದಾನತ ... ಸಿಪ್ಪ ... ನಿಯಾ

ಮಿಸಿ ಸಾಡಂಬರದಿಂ ಸಕಲಬಲಂಬೆರಸು ಸಿಹ್ಮ ಶರಭ ಶಾರ್ದೂಲ ಭೇರುಂಡಚಿಹ್ನ ಪರಿವಿರಾಜಿತ ನಾನಾಧ್ವಜ ವಿಚಿತ್ರ ಧವಳಾತಪತ್ರ ಶೋಣಾತಪತ್ರಂಗಳೆಸೆಯಲ್ಕೆ ಡಿಂಡಿಮ ಪಟಹಮೃದಂಗಡಮರುಗ ಢಕ್ಕಾ ಕಹಳೆ ಧವಳಶಂಖ ಕಾಹಳಕಾಂಸ್ಯ ನಿಸ್ಸಾಳ ಭೇರೀರವಂಗಳ್ಬ್ರಹ್ಮಾಂಡಳಮಂ ತೀವಲ್ಕೆ ಪಗಲ್ವೋಲರಾಜಂ ಶಿಬಿರಕ್ಕೆ ನಡೆ ವಾಗಳ್ಪುರದೊಳುಳ್ಳ ಜನಂಕುತೂಹಳಮಾನಸರಾಗಿ||

ಚಂ|| ಚರಣವಿನೂತ್ನರತ್ನಮಯನೂಪುರನಿಸ್ವನ ಝುಂಝುಣಂಗಳೊಪ್ಪಿರಲವನೀಶನಂ ಪರಿಕಿಸಲ್ಕೆವಸೌಧ ಸಹಸ್ರದಗ್ರಮಂ | ಪರಿಪದೇರಿಪೆಳ್ತ್ರಿಗಿಳಿಗಳೊಪ್ಪುವಪರ್ವಚರಕ್ತಾಂತೆಯ ಕರ್ಣಳಂ | ತಿರೆಪಿರಿದೊಪ್ಪಿದವರ್ಗೆವಿಳಾಸದಿನಾಪುರಕಾಮಿನೀಜನಂ||

ವ|| ಮತ್ತೋರ್ವಳ್

ಮ|| ಮಣಿಮಂಜೀರಕ ಸಿಂಜಿತಂ ನೆಗಳೆ ಹಾರಂತೂಗೆಪೀನಸ್ತನಂ| ಕುಣಿ ಯಲ್ತ್ರಾಣಿಕದೋಲಿಗಳ್ಜಡಿಯೆಮಧ್ಯಂಬ ಳ್ಕೆಸತ್ಕುಂಪಳಂ |ಘಣೆಯೊಳಳ್ಸೆಸೆಸದಿಲ್ದನೀವಿಯ ನಲ್ಕೈಯಿಂಪ ಮೊತ್ತುತ್ತೆವ| ರಣಯಾನಂ ಮಿಗೆಸೌಧಮೇರಿಸತಿತಾಂಭೂಪಾಳನಂನೋಡಿದಳ್|

ಮತ್ತಮೋರ್ವಳ್

ಚಂ| ಮಳಯಜಪಣ್ಪುಮಲ್ಲಿಗೆಯಸೋರ್ಮುಡಿ ಮುತ್ತಿನಹಾರಮುಟ್ಟನಿರ್ಮಳಸಿತಚೇಲಕಂಪೊಳೆವಕಣ್ಮಲರುಜ್ವಳದಂತಪಂಕ್ತಿಗಳ್ ||ಬೆಳಗುತಿರಲ್ಕೆ ಶ್ವೇತೆಸವಜಂಗಮವಲ್ಲಿರಿಯಂತೆಯೊಪ್ಪೆ ತಂ| ಲಲನೆವಿಳಾಸದಿಂ ನಡೆದುಬಂದುನೃಪಾಳನನೊಲ್ದುನೋಡಿದಳ್|

ಕಂ| ನೆರೆದಚಕೋರಿಗಳಂಹಿಮ | ಕರಮಂಡಳಮೊಂದೆ ತಣಿಪುಮಂತಿರೆ ನೋಳ್ಪಾತರುಣಿಯರಕಣ್ಗಳಂನೃಪ |ವದನಾನನಬಿಂಬಮೊಂದೆತಣಿಪಿತ್ತಾಗಳ್| ||೬೬||

ವ|| ಅಂತತಿಮನೋಹರನಾದಕೆರಪ್ರೂರಂಪೊರಮಟ್ಟುನಡೆವಾಗಳ್

ಚಂ|| ನೆರೆಕುಸಿದಿಟ್ಟ ಚಕ್ರದಬ್ರೋಳಸಾರದಿಂ ಪುಟ್ಟಿದೆದ್ದುಂದವಡೆದೊರೆಯತರಂಗದಂತಳೆದುಸುತ್ತೆ ದಿಗಾಳಿಯವೇಗದಿಂದೆ ದಿಂಡುರೆಸುಳಿದುಬಿಡೆಮೆಯ್ಯನೆಳಲಂತಿರೆ ಜಂಬಿಡಪಟ್ಟೆಬರ್ಪಡೆ | ಗುರ್ದುಮಿನಿಭಾಳಿಯಂನಡಿಸಿದರ್ಗಜಮಾಹರಂದಗುಮಿರಿದಿಂ| |೬೭||

ಚಂ|| ಕರಳಿಪಕಿತ್ತುದಾಂಟುವ ಮರಳ್ವಬಿಡಿರ್ಚುವ ಸಿಕ್ಕಿ ನಿಲ್ವರು|
ಪ್ಪರಿಸುವದಿಂಡು ವಾಯ್ವ ಪರಿದಟ್ಟುವಕಟ್ಟುವ ದುಷ್ಟ ವಾಜಿಯಂ || ತ
ರುಲತೆ ಯೊಳ್ನುಸುಳ್ದು ಮುರಿದೋಡುವಲಾವಗೆಯಂತೆ ರಾಘೆಯಂ|
ಪರಿಕಿಸಿವಾಘೆಯಂಪೊಳಸುತರ್ನಡೆದರ್ಬಲವಂತರಾವುತರ್|
ಚಂ |ಪರಿಕಿಪೊಡೊಂದೆಗಾಲಿ ಪೊಡೆವಂಪೆಳವಂ ವಿಷಮಾಶ್ವ ವೆಂದುಭಾ
ಸ್ಕರನ ವರೂಥವಂಪಳಿದುಹೀನತೆಪೊರ್ದದ ಪೊನ್ನತೇರ್ಗಳಂ |ಧರೆ
ಬಿರಿವುತ್ತಿರಲ್ಮರುತವೇಗದಿನಗ್ಗಳವೆಂಬಮಾಳ್ಕೆಯಿಂ |ಪರಿಕಿಸು ತುಱಿ
ಕೊಬ್ಬಿರಥಿಗಳ್ನಡೆದರ್ಪ್ರಬಳಪ್ರತಾಪದಿಂ| |೨೬೫||
ಮ| ಸಿಡಿಲಂತುತ್ತಮಶೇಷನಂಪಿಡಿವದಿಗ್ನಾಗಾಳಿಯಂಪೊಯ್ವವೆ|ಗ
ಡಲಂಪೀರ್ವ ಪೊಡರ್ಪನುಳ್ಳ ಕಲಿಪತ್ತಿವ್ರಾತಮಂ ಸಿಂಗದೊಳ್|ಕಡು
ಪಿಂಗರ್ಜಿಸಿಪೊಯ್ವ ಕಂತುಕದ ಚಂದಂಮಿಕ್ಕುಮೇಲ್ಮುಬ್ಬುತಂ|ನ
ಡೆದನೇರ್ಗೆಳ್ವೊಡೆಪದ್ಮಪತ್ರಜಳದಂತಲ್ಲಾಡದಾಶ್ಚರ್ಯದಿಂ |೨೬೬||
ಮ ||ದ್ವಿರದೇಂದ್ರಪ್ರಜಬೃಂಹಿತಧ್ವನಿತುರಂಗಾನೀಕಹೇಷಾರವಂ|ವ
ರಹೇಮಾರಥಜಾಳಚೀತ್ಕೃತಿನಿನಾದಂಪತ್ತಿಸಂದೋಹದಾ || ಸುರನಾ
ದಂಗಗನಾಧ್ವದೊಳ್ಪುದಿದುಶಬ್ದಾದ್ವೈತಮಾಗಿರ್ಪಿನಂ|ಭರದಿಂದಂನಡೆ
ದಂಮಹಾಭುಜಯುತಂಚೋಳಕ್ಷಮಾಧೀಶ್ವರಂ ೨೬೭

ವ|| ಮತ್ತಮೊಗಲ್

ಚಂ|| ವಸುಮತಿ ಗಂಧಸಿಂಧುರ ತುರಂಗಸಮೂಹಯುಂ ದಿಶಾಳಿಗ|
ರ್ಜಿಸುವ ಗಭೀರಭೇರಿ ಘನಡಿಂಡಿಮರಾವಮುಮಂ ನಭಸ್ಥಳಂ| ಮಿಸು
ಪಸಿತಾತಪತ್ರ ಚಮರೀಜಪತಾಕಮಯಂಗಳಾಗಿರಲ್| ಜಸುತಿರಲಾಗ
ದಿಂ ನಡೆದನದ್ಭುತಸಂಭ್ರಮದಿಂ ಮಹೀಶ್ವರಂ

ವ|| ಅಂತತುಳಸಂಭ್ರಮದಿಂನಡೆವಾಗಳ್

ಕಂ|| ಒಡವಿಡಪೊನ್ನಿನಪೂಗಪತ್ತಿದಪುತ್ಥಳಿಗಳವೊಲೀಕ್ಷಿಪಮರಗ
ಗನಾ| ಧ್ವದೊಳೊಪ್ಪಿನಡೆದನನೆತಾ, ಪದಹತಿಯಿಂ ಪರ್ಬಿದತ್ತುಧೂ
ಳೀಪಟಲಂ|| ೨೬೯

ಮ|| ಸುರಪಂ ಲೋಚನಯುಗ್ಮಮಂ ನಿಜಕರದ್ವಂದಂಗಳಂಮುಚ್ಚೆ
ಕೊಂ, ಡುರುಭೀತಾತ್ಮಕನಾಗಿಮಿಕ್ಕ ನಯನಕ್ಕಂ ಚಿಂತೆಗೆಯ್ವುತ್ತಿ
ರಲ್ ನೆರೆದಾಳೋಕಿ ಪಡೇಪರೆಯ್ದು ನಿಮಿಷರ್ತಂತಮ್ಮಳೇಕಾಯ್ತನು|

ತ್ತಿರದೊಳೀಡುತ್ತಿರಲಂಬರಕ್ಕೆಪಿರಿದುಂ ಪರ್ಬಿತ್ತು ಸೇನಾರಜಂ॥ ೨೬೯
ಕಂ॥ ಬೆಳಗದಕನ್ನಡಿಯಂತಿರೆ। ಜಳಜಸಖಂ ಕಡಲನಮರಗಂಗಾಸ
ಲಿಲಂಸಲೆಕೆಸರು ಮಸಗಲಂಬರ। ತಳಮುಂಮುಸುಕಿತ್ತು ಬಹುಳಧೂಳೀ
ಪಟಲಂ॥ ೨೭೦
ಗಡಣದನಿಸ್ಸಾಳಧ್ವನಿ। ಗೊಡದಿಳೆನವಖಂಡವಾಗಿ ಕುಲಗಿರಿತತಿಗಳ್।
ಕೆಡೆಯೆ ನಭಮೊಡೆಯೆಪೆರ್ಬಡೆ ನಡೆದುದು ರಿಪುನೃಪತಮೋಂಘಹರದಿನ
ಕರನಾ॥ ೨೭೧
ಆಸಮಯದೊಳ್
ವ॥ ದರಹಾಸಂಗಳಬೆಳ್ಪು ಮನ್ಮಥಯಶೋವಿಸ್ತಾರಮಂ ಬೀರೆಕೇ
ಕರದೊಳ್ಪಿಂಗಿಗನಾಂತಬಾಳಪೊಗರಂ ಮೆಯ್ದೋರೆಲಾವಣ್ಯದೇ। ಳ್ತರ
ಮಾಕಾಮನದರ್ಪಮಂ ಪ್ರಕಟಿಸಲ್ ಸೋಮಪ್ರಭಾಮುಖ್ಯಬಂ। ಧುರ
ಕಾಂತಾದಿಕರೇಣುಸಂತತಿ ಗಳೊಳ್ಪಂದುತ್ತು ಕಲ್ಲೀಲೆಯಿಂ॥ ೨೭೨
ಮತ್ತಮಾಗಳ್
ಮ॥ ಧರೆಬಳ್ಕಲ್ ಬಳಭಾರದಿಂಪೊಡೆವಭೇರೀ ನಾದದಿಂದಿಗ್ಗಜೋತ್ತ
ರಮುಳ್ಕಲ್ ಧ್ವಜ ಘಾತವಾತದಿವಿಯದ್ಗಂಗಾಜಳಂತುಳ್ಕಲಾ। ಸುರದಿಂ
ನೋಳ್ಪಸುರಾಳಿಭೀತಿರಸದೊಳ್ತುಳ್ಕಲ್ಕಣಂಬಂದುನಿ। ರ್ಭರದಿಂಪೊಕ್ಕ
ನಿಳಾಧಿಪಂ ಶಿಬಿರಮುಂವೈರೀ ಭಕಂಠೀರವಂ॥ ೨೭೩
ಕಂ॥ ಜನಪತಿತಚ್ಛಿಬಿರದೊಳಂ। ದನುನಯದಿಯಥೋಚಿತಪ್ರಸಂಗ
ದೊಳಿರ್ದಾ। ದಿನಮಂಕಳೆದೊಲವಿಂಮರು। ದಿನಮಾಜಿಗೆತಳರ್ಪಬಗೆ
ಯೊಳಿರ್ಪವಸರದೊಳ್॥ ೨೭೪
ವ॥ ಅಂತುಪಗಲೆಚ್ಚೀಳ ರಾಜಂಪಾಂಡ್ಯನೊಳ್ಸಂಗ್ರಾಮಕ್ಕೆಂದುಬೀ
ಡಂಬಿಟ್ಟಪುರ್ದಂಪಾಂಡ್ಯಜನಪದಂಕೇಳ್ದು
ಕಂ॥ ಮರೆವೊಕ್ಕಗಿವ ಸಿಕ್ಕಮನೆ। ಚ್ಚರಿಸುವವೋಲ್ ಚೋಳನೃಪ
ನನೆಮ್ಮಯಪಾಂಡ್ಯಂ। ಬರಿದೆಯೆ ಕೆಣಕಿದನಿದರಿಂ। ನೆರೆಕೆಟ್ಟೆವೆನುತ್ತೆ
ನಾಡುಸೆಡೆಯಿತ್ತಾಗಳ್॥ ೨೭೫
ಚಂ॥ ಗಳಗಳನೇಳು ಬೇಗಸರಕಂ ಪೊರೆಗಟ್ಟಸುಘುಂಡಿ ಗೂಡಾತಂ
ಗಳಗಳನೆತ್ತಿಗೆತ್ತಿರದೆ ಪಲ್ಲಣವಿಕ್ಕುಡಯಕ್ಕೆ ಪೆಂಡಿರಂ। ತಳುವದೆಬಡ್ಡ
ಯಂನಡೆಯಿಸಕ್ಕಟ ಕೆಟ್ಟೆವೆನುತ್ತೆ ಬಿದ್ದಮು। ಕ್ಕಳನಿರದೆತ್ತಿ ದೇಡಿದು

ದಃಬಾಯ್ವಿಡುತಂ ನೆರೆಪಾಂಡ್ಯಮಂಡಳಂ॥ ೭೭೭

ಕಂ॥ ಅಗಡೆತ್ತು ಮೇಲೆಪಾಯ್| ಲ್ಕಗಿದುಜನಂಕೂಗೆದಾಳಿ ಕವಿವ್ರ ದೆನುತವೊ| ಟ್ಟಿಗಳಂನೆರೆಬಿಸುಟತಿಭಯ| ವೊಗೆದೋಡಿತು ತಾಯ್ಗೆ ಮಕ್ಕಳಾಗದತೆರದಿಂ॥ ೭೭೮

ಆಗಳಾಪ್ರಜಾಪಲಾಯನವಮಂಕಂಡುಪಿಂದೆಕಳುಪಿದದೂತಮುಖ್ಯಂ ತತ್ಸ್ವಾಮಿಯಪ್ಪಪಾಂಡ್ಯರಾಜಂಗೆಪೊಡಮಟ್ಟುಕೈಯ್ಗಳಂಮುಗಿದು

ಕಂ॥ ಬವರಕ್ಕೆಚೋಳರಾಜಂ|ಭುವನಂಕಂಪಂ ಗೊಳಲ್ಕೆಬರುತ್ತೈದ ನೆವೇಶವಿರದೆಕೆಟ್ಟೋಡಿತಿಳಾ|ಧವನೀಂಕಸ್ನದ್ಧನಾಗುಬೇಗದೊಳಿಂದಂ

ವ॥ ಎಂದುತನ್ನದೂತಂಪೇಳ್ದುದಂಕೇಳ್ದುತದ್ರಾಜಂಕಡುಗೋಪದಿಂ ದಿಂತೆಂದಂ

ಕಂ॥ ಇದಿರೆತ್ತಿಚೋಳನೆಲ್ತ| ಪ್ಪುದುತನ್ನಯಕಜ್ಜಮಾಯ್ತೆನುತ್ತಾಪಾಂ ಡ್ಯಂ| ಮುದಮುಖದಿ ಸಮರದುದ್ಯೋ|ಗದಭೇರಿಯನುರ್ಬಿ ನಡುಗೆ ಪೊಯ್ಸಿದನಾಗಳ್॥ ೭೮೦

ವ॥ ಅಂತಾಸಮರಪ್ರಯಾಣಭೇರೀನಿನಾದಮಂಕೇಳ್ದು

ಕಂ॥ ಕರಿತತಿಯಂಪೊಣ್ಮಿ ಹಯೋ|ತ್ಕರಮಂಪಲ್ಲಣಿಸಿತೇರ್ಗಳಂಪೂ ಡಿಬಲಂ ಪಿರಿದಾಯುಧದಿಂ ಕೈಗೆ| ಯ್ದಿರದೆಲ್ಲಂದುತ್ತು ನೃಪನಭರಮರಿ ದಾಗಳ್॥ ೭೮೧

ನೆರೆದಚತುರಂಗಬಳಮುಂ| ಪರಿಭಾವಿಸಿಮನ ದೊಳುರ್ಕಿಗರ್ವದಿನಾಗ ಳ್|| ಕರಿವರವನೇರಿನಲವಿಂ| ದಿರದಾಚೆಗೆ ಪಾಂಡ್ಯ ಭೂಮಿ ಪಾಳಂ ತಳರ್ದಂ|| ೭೮೨

ಚಂ| ಕರಿತುರಗಂಗಳುದ್ಭವಮದಫೇನಜಲೌಘದಿನುರ್ವಿತೇರ್ಗಳಾ ಸುರತರಚೀತ್ಕೃತೋನ್ನತರಣಾನಕರಾವದಿದಿಕ್ತಟಧ್ವಜೋ|ತ್ಕರಜ ಳದಾಯುಧ ಪ್ರಭೆಯು ನಂಬರಮೆಯ್ದಿಡಿಯಲ್ಕೆ ಸಂಗರ |ಕ್ಕುರುಚತು ರಂಗಸೇನೆಸಹಿತಂ ನಡೆದಂ ಕಲಿಪಾಂಡ್ಯಭೂವರಂ॥ ೭೮೩

ವ॥ ಅಂತಾಪಾಂಡ್ಯರಾಜಂ ಮಧುರೆಯಂ ಪೊರಮಟ್ಟುನಿಜಬಳಂಬೆರ ಸುಬಗೆಯೊಸುಭಗೆಯೆಂಬನದಿಯಂದಾಂಟುವಾಗಳ್॥

ಚಂ॥ ದ್ವಿರದಘಟಾಳಿಯೊತ್ತಕದಿಪಾಯ್ವೆಡೆಯೊಳ್ನದಿಸೇತುಗಟ್ಟಿದಂ ತಿರೆಸಲಿಲಂಮುಗುಳ್ದು ಪರವಾಹಿನಿಯಾಗಿರೆತನ್ಮದಾಂಬುನಿ| ರ್ಝರಮು

ದುತ್ತ:ೞಿದುಮೂಡದೆಸೆಗಂ ಪರಿದಿಂತೆರಡಾಗಿ ಪಾರ್ಥಿವಯೊಳ್ | ಬೆರಸಿತ್ತ
ನಲ್ಕಡೇಂವೊಗಳ್ವೆನಾ ಕಲಿಪಾಂಡ್ಯನಸೈನ್ಯದೇಳ್ಗೆಯಂ|| ೨೮೪
ಚಂ|| ಸರಕಿನಕೋಣೆ ಕಟ್ಟೇಮುರಂಕುಡುಗೋಲ್ತೆರಸೀರೆದಬ್ಬಳಂ
ಹುರಿಗಡಹಾರೆ ನೇಣ್ಕೊಡಲಿ ಕತ್ತಿಗೆಸಗ್ಗಳೆ ಗೂಂಟವೆತ್ತುಹ | ಪ್ಪರಿಕ್ಕೆ
ಯು ಘಂಟಿತೊತ್ತುಬೆಸವಾಳ್ ಸವಗಂತೊಡೆವೊಚ್ಚೆಯುಂಗಳೆಂ|ಬಾಳು
ತರಸಾಧನಂ ಬೆರಸುದಂಡಿನವರ್ಪೊರಮಟ್ಟರರ್ಥಿಯಿಂ|| ೨೮೫
ಕಂ|| ಕಳವೆಮೆಣಸಡಕೆನೂಲ್ಕಂ| ಬಳವಸ್ತ್ರಂಕಣಿಕವೆಂಬವರಪೇರು
ಗಳಂ|ತಳೆದೆತ್ತಿನಪಿಂಡಿನಬೆಂ| ಬಳಿಯೊಳ್ಕೊಟ್ಟಗೆಯುವರ್ಗಳಧಟಂನಡೆ
ದರ್|| ಮತ್ತಂ|
ಕಂ| ಕರೆದೊಡೆನುಡಿಗೇಳದಕಿಂ| ಕರನಗಡೆತ್ತಾಳಿದೊತ್ತುದ:ಷ್ಟಾ
ಕ್ಯಂಗಳ್|ದೊರಕಿಕೆಲಂಬರ್ದಂಡಿಗೆ|ಪಿರಿದುಂಬೇಸರಿಕೆವೆತ್ತುನಡೆವುತ್ತಿ
ರ್ದರ್|| ೨೮೭
ಮತ್ತಂನಡೆವಾಗಳ್ಕೆಲಂಬರ್
ಕಂ|| ಪರಿಪರಿದತ್ತಿತ್ತಲ್ಕೊ| ತ್ತರಿಸುವನೆರೆತಪ್ಪಿದೆತ್ತುಗಳಸರಕುವಬ
ಟ್ಟಗನರಸುವದನಿದೋರುವ|| ಸರಭಸವೊಗೆದತ್ತುದಂಡುನಡೆಪಸರ
ದೊಳ್|| ೨೮೮
ವ|| ಅಂತತಿರಭಸವೊಸೆಯಲ್ಕೆಲ್ಲಪ್ಪನಿಜಪರ್ಬಡೆ ವೆರಸುಪಾಂಡ್ಯರಾ
ಜಂ ಪಗಲ್ಪೊಳನೊಳ್ಸಂಗ್ರಾಮಕ್ಕೆಂದು ಕೋಪಾಟೋಪದಿಂ ಸಾ
ರ್ಚಿಬಿಟ್ಟರೆ
ಇದಿರೆತ್ತಿಪಾಂಡ್ಯಭೂಪಂ| ಕದನಕ್ಕಂಪೊಣ್ದು ಬಂದುದಂಚರರಿಂಕೇ|
ಳ್ದುದಿತಬಳಚೋಳರಾಜಂಮದಗಜದೊಳ್ಕೆರಳ್ದಸಿಹ್ಮದಂತೆಕೆರಳ್ದಂ|
ಅಂತುಕೆರಳ್ದು
ಮ|| ಕರವಾಳಿಂ ತರಿವುತ್ತೆದಾರಿಬಲದೊಡ್ಡಂಕಾಡುವೆಂ ಕಾಡುವೆಂ
ಘುರದೊಳ್ ಶಾಕಿನಿಯುಗ್ರೆಸಾಂಮುದಮನಿಂದಾ ಪ್ಯಾಡುವೆಂ ಮಾ
ಡುವೆಂ ನಿರುತಂಪಾಂಡ್ಯನರಾಜ್ಯಲಕ್ಷ್ಮಿಯೊಡನೊಳ್ಪಿಂಕೂಡುವೆಂಕೂ
ಡುವೆಂ ಪಿರಿದುಂ ನಿರ್ಮಳಕೀರ್ತಿ ಯುತ್ಸವ ಮನಾದಂ ಸೂಡುವೆಂ
ಸೂಡುವೆಂ
ವ|| ಅಂತುಪ್ರತಿಜ್ಞಾರೂಢನಾಗಿಬಲಾಧ್ಯಕ್ಷನಪ್ಪಸಿಂಹನಾದನಂಬರಿಸ

ಸಮರಭೇರಿಯಂಪೊಯ್ಸಿದಾಗಳ್||

ಪುರುಹೂತಂನಿಜವಜ್ರದಂಡದಿಕರಂಪೊಯ್ವಲ್ಕೆಮೇಘಂಗಳ|ಬ್ಬರದಿಂದು
ದ್ಭಸುವರ್ಣಕೋಣಹತಿಯಿಂದಿಕ್ಕೆತ್ತೈಲಸಂದೋಹಗ|ಹ್ವರದೊಳ್ಪೀಳ
ಡೆಂ ಡಡಂಡಡಡಗಿಂದೊಪ್ಪೊರ್ಮೊಮ್ಮೆ ಮೂಲೋಕಕಚ್ಚರಿಯುಂ
ಸಾರಿಫಿಗುರ್ಬಿಸಿತ್ತುತ್ಕಡುಪಿಂಸನ್ನಾಹಭೇರೀರವಂ||

ವ|| ಅಂತಾ ರಣಭೇರೀ ನಾದಂತೆಕ್ಕನೆಸಕಲ ದೇಶಂಗಳಂತೀವಲ್ಲಾ
ಮಂತಮಾಂಡಲಿ ಕರ್ವಿಗೆ ಸಂತಸದಿಂದುರ್ಬಿ ತವೊಮ್ಮಳಿಂತೆಂದರ್||
ಪಿರಿದುಂದಿನಕ್ಕೆಸಮರಂ| ದೊರೆಕಿತ್ತಿನ್ನಾತ್ಮ ಸತ್ವಮುಂಮೆರೆವೆವೆನು|
ತ್ತುರುತರಹರುಷಂ ಪೊಣ್ಮಲ್| ಸರಭಸದಿಂ ನುಡಿದರತುಳ ವೀರಭಟ
ರ್ಕಳ್|| ೧೯೩

ವ|| ಅಂತುನುಡಿವಸಾಮಂತಮಾಂಡಳಿಕಪಸಾಯಿತರ್ಗೆಪಗಲ್ಬೆ
ರಾಜಂ ತಳುವದಾಜಿಗೆ ಪೊರಮಡುವುದೆಂದು ನಿಯಮಿಸಿದಾಗಳ್||

ಚಂ|| ಸರಪಳಿದರ್ಪಣಂ ಹೊರಜೆಕಾಂಚನ ಘಂಟೆಕೆಡೆಂಜೆಶುಭ್ರ
ಚಾ| ಮರಮುತು ಚಾಮರಕ್ಷೆಘನ ಸೋಳಹುಖಂಡದ ಹಕ್ಕರಿಕ್ಕೆರ್ಝು|
ಲ್ಲರಿತುಡಿಸಿರ್ದ ಪಟ್ಟೆಗುಣವಂಬೆರಸೊಪ್ಪವಗಂಧಸಿಂಧುರೋ| ತ್ಕರಮ
ನಷದರ್ಪ ಜೋದರತಿವೇಗದಿ ನಾಜಿಗೆಬಂಗುದಕ್ಕರಿಂ||

ಕಂ|| ಪೊಳವಳಗ ತಿಳಗಕೊಂಗಸ| ವಳಬಿಂಬೆಯನೀಲಜನ್ನಜಂಬಮ
ಹುವಕಿ ತ್ತ್ರಳನಾರುಗವೆನಿಪ್ಪ| ಗ್ಗಳಿಕೆಯಹಯಮಂತು ರಂಗಿಗಳ್ಕೈಗೆ
ಯ್ದರ್|| ೧೯೪

ತಲೆಚವರಂನೇವಳಮು| ಜ್ವಲಿಸುವತೀವಂತಮಾಲೆಪೊಂಗಂಟೆಪೊದ
ಳ್ದಲಿವಕಿರುಗೆ ಜ್ಜೆಪೊಸಗುಂ|ಪಲೆಮೆರೆವಹಯಂಗಳಿರಪನೆದನೇವೇಳ್ವಂ

ಚಂ|| ಮಿಸುನಿಯಹಲ್ಲಣಂ ಕಡಿಯಣಂ ಬಹುವರ್ಣದಹಕ್ಕರಿಕ್ಕೆರಂ
ಜಿಸುವತುರಂಗಸಂಚ ಯಮನೇರಿಶಿರಾಗ್ರದೋಳಾಂತಸೀಸಕಂ|ಪೊಸತೆ
ನಿಷಂಗಿವಜ್ರ ಕವಚಂದೊಡೆವೊಚ್ಚೆಯ ಮೆಂಬಿಪೊಪ್ಪೆತಾಳ್ದಸಿಲತೆಗ
ಳ್ಕರಂ ಮೆರೆಯೆಬಂದುದು ರಾವುತರಾಜಿಗಳ್ಕರಂ|| ೧೯೬

ಮಿಳಿರ್ವಪತಾಕೆಗಳ್ಪೊಳೆವ ಬೆಳ್ಗೊಡೆಗಳ್ಸಿತಚಾಮರಂಗಳ| ಗ್ಗಳಿಕೆಯ
ಸೂತರೋಜೆಯಿಂಗೆ ಪೂಡಿದಚಾರು ತುರಂಗ ಜಾಳಮು| ಜ್ವಳತರಮ
ಪನೇಕ ವಿಧವಸ್ತ್ರಚಯಂಕಡುಪಿಂದವೊಪ್ಪೆತೇರ್ಗಳನೊಲಪಿಂದಪೇ

ಶಿರಥಿಗಳ್ಪರಿತಂದರುದಗ್ರವೃತ್ತಿಯೊಳ್‌|| ೨೯೭

ಮತ್ತಂ

ಮುನಿಸಿನೊಳುಗ್ರ ಸಿಹ್ಮಕೆಣೆಕೋಳ್ವೆಡೆಯಲ್ಲಿ ಜವಂಗೆಪಾಡುಕಾ|ಯ್ವಿ
ನೊಳೆಸಿಡಿಲ್ಗೆ ಪಾಸಟ ಯೆನಿಪ್ಪನು ದಗ್ರಸಮಗ್ರದಿಂಶರಾ |ಸನಶರಕುಂ
ತ ಖೇಟಕ ಕುಠಾರ ರಥಾಂಗಕೃಪಾಣವೆಂಬ ಶಸ್ತ್ರನಿಚಯದಿಂವಿಗು
ರ್ವಿಸುತಮುರ್ವಿಪನಲ್ಲಿಗೆ ಬಂದುದಳ್ಕರಿಂ|| ೨೯೮

ವ|| ಅಂತು ಚತುರಂಗ ಸೇನೆ ತಂಮತಮ್ಮ ಪೆಯ್ವೆರೆಗಳಂತೊಟ್ಟು
ಕೈಗೆಯ್ದು ಬಂದು ಮುಂದೆನಿಂದಿರಲ್ಕಂಡುಬ್ಬಿ ವೀರೋದ್ರೇಕದಿಂ ಪಗ
ಲ್ಚೋಳರಾಜಂ ಸಾಕ್ಷೇಪದಿಂ ಮಣಿಪೀಠದಿಂದೆಪುರ್ಗಗಳ್||

ಕಂ|| ಭುಜಕೆಜಯವೇರೆ ರಿಪುಭೂ| ಭುಜಗರ್ಗಂಭಯವೇರೆ ತನ್ನ
ನಚ್ಚಿನ ಸೈನ್ಯ| ವ್ರಜಕೆ ನಯವೇರೆಭರದಿಂ| ಗಜೇಂದ್ರಮಂ ಚೋಳ
ರಾಜನೇರಿದನಾಗಳ್|| ೨೯೯

ವ|| ಅಂತು ಗಜಾರೂಢನಾಗಿ ಚೋಳರಾಜಂನಡೆದು ಸಕಳಸೈನ್ಯಂ
ಬೆರಸುನಿಸ್ಸಾಳಮೃದಂಗ ದುಂದುಭಿ ಶಂಖ ಕಹಳಾ ಡಿಂಡಿಮ ಪಟಹಪ
ಟು ರವಂಗಳ್ದಿಗ್ದಂತಿಗಳ ಕಿವಿಶಬ್ದಂ ಸೀಳಿಡಲ್ಪೊರಮಟ್ಟು

ಮ|| ಘನಸೈನ್ಯಂನಡೆವಲ್ಲಿ ಪಾದಹತಿಯಿಂದುರ್ವೀತಳಂ ಚೂರ್ಣ
ಮಾ | ಗಿನೆಭಕ್ಕೈದರ್ಪಮಹಾರಜಃ ಪಟಳದಿಂಶೇಷಂಗೆಬಿಕ್ಕೈತ್ತ್ರದಾನೆನಿಜ
ಗ್ರೀವ ಮನೋ ವೃತಿಪೆರ್ಗನಗೆ ಮಗ್ರೇಖಾಳಿ (?)ದಾನಾಂಬುವಿಂ| ನೆ
ನೆಯಲ್ಮತ್ತುರೆ ಬೆಣ್ಪೆತಾಗಿ ಪಡೆದಂ ತಾನೆಂದೊಡೇನದ್ಭುತಂ|| ೩೦೦

ಮತ್ತಂ

ಮ|| ವರಭೋಗಾವತಿಯಂತೆನಾಗಲಸಿತಂ ಪೀಯೂಷವಾರಾಶಿವೊ
ಲ್ | ಹರಿಯುಕ್ತಂ ಶಶಿವಕ್ತ್ರದಂತೆ ರಥರಮ್ಯಂ ಕುಂಭದಂತುದ್ಭಪು
ಷ್ಕರವಿಭ್ರಾಜಿತಮಭ್ರಮಂಡಳದವೋಲ್ಕೀತು ಪ್ರಕಾಶಂಸರೋ| ವರ
ದಂತೋರ್ಜಿತ ಪುಂಡರೀಕ ಮಯಮಾಯ್ತುರ್ವೀಶ ಸೈನ್ಯೋತ್ಕರಂ|

ವ|| ಅಂತು ಪಗಲ್ಚೋಳರಾಜಂಸಕಲಬಲಭಾರದಿಂ ದಿಗ್ಗಜಂಗಳ್ತಗ್ಗಿ
ಮುಗ್ಗಲ್ನಡೆದುಸಾರ್ಚಿಬಂದುನಿಂದುವೀರೋನ್ನತಿಯಿಂಲಗ್ಗೆವರೆಯಂ
ಪೊಯ್ಸಲ್||

ಕಂ|| ... ಗಕ್ಕೆ ಬರಕಂ

ಡುಮಹಾ| ಕೋಪದೆಪಾಂಡ್ಯಂವೀರಾ| ಳಾಪದಿನಾಸೇನೆ ವೆರಸುಪೊ
ರಪುಡುವಾಗಳ್|| ೨೦೨

ಪರಿಗಳ್ಕಂಬನಿಯಿಕ್ಕುವ, ಕರಿಗಳ್ಮದವರತನಿಲ್ವತೇರ್ಗಳುಡಿವಭೀ| ಕ
ರದುರ್ನಯಮುಂಬಗೆಯುವೆ| ಪಿರಿದುಪ್ರೇಕದೊಳೆ ಪಾಂಡ್ಯ ನಾಜಿಗೆ
ನಡೆದಂ|| ೨೦೩

ವ|| ಅಂತುಸಮರಸನ್ನದ್ಧನಾಗಿನಿ ಜಬಲ ಚಾತುರಂಗಬಲಂ ಬೆರಸು
ಪಾಂಡ್ಯರಾಜನಿದಿರೆತ್ತಿ ಬಂದುನಿಲೆ,

ಮ|| ಸ|| ಕರಿಘಂಟಾನಾದ ಮುದ್ಯತ್ತುರಗಖುರಘಟತ್ಕಾರರಾವಂಪ
ರೂಥೋದ್ಧುರಚೀತ್ಕಾರಸ್ವನಂಚಾಪಳಪದಚಳಕೋದಂಡಠಂಕಾರ
ರಾವಂಪುರುನಿಸ್ಸಾಳಪ್ರಣಾದಂಘನತರಕಹಳಾಧ್ವಾನಮುಣ್ಮುತ್ತಿರಲ್ನಿ
ರ್ಭರದಿಂಮಾರಾಂತುತೋರಿತ್ತುಭಯ ಧರಣಿಪೋದ್ದಂಡಸೇನಾಪ್ರತಾ
ನಂ| ||೨೦೪||

ವ| ಅಂತುಭಯಪತಾಕಿನಿ ಭೂಭಾಗದೊಳ್ವಿರಚಿತವಿಚಿತ್ರ ವ್ಯೂಹ
ಮಾಗೊಡ್ಡಲಾದುವೆರಡುಬಲಕ್ಕೆತಚ್ಚಮೂಪತಿಗಳ್ಕೈವೀಸಿದಾಗಳ್|

ಚಂ| ಕಡುಪಿಳಿಕಿಕ್ಕಿಕುಕ್ಕಿರಿದುಬಿಲ್ಲಗಳನೇರಿ ಸಿನೀವಿತಾಳ್ದು ಕೈಪೊ
ಡೆಗಳನೊವೀಜೀವಡೆದುಘೋರೆನುತಾರ್ದುದಿಶಾಂತದೋಳ್ಕನಲ್ಕಿಡಿ
ನೆರಸೂಸಿಕೂರ್ಗಣೆಯಪೆರ್ಮಳೆಯಂಕರೆದುರ್ಬಿಕೊರ್ಬಿರಲ್| ಪಡೆ
ಮೆರೆದಾಂತುಕಾದಿದುದುಖೇಚರರಧ್ವದಿನೋಡುತಿರ್ಪಿನಂ|

ಕಂ| ಶರದಿಂಫರೆಶರದಿಂದೆಸೆ| ಶರದಿಂದಾಕಾಶಮಿಡಿಯೆಬಿದಿಜಗಮುಂಬಿ
ತ್ತರಿಸಿದನೀಪರಿಯೊಳೆನಲ್| ಸರಳ್ಗಳಮುಳಿಗರದರಥಟುಮಿಗೆಬಿಲ್ಲಾಳ್ಗಳ್

ಶರತತಿಯಾಪದಮಸ್ತಕ| ಪರಿಯುಂತಂನೆಟ್ಟುಪ್ರೇರಗೆತೋರುವಗತಿ
ಯಿಂದೆರಡುಬಲಂಗಳವೊದಲೊಳ್ಗರುಡನಪಡೆಯಂತೆಬಿಲ್ಲಬಿತ್ತೆಗರಿರ್ದ
ರ್| |೨೦೫||

ಸರಳ್ಗಳೊಡೆದುರ್ಚಿದೆಡೆಯೊಳ್| ಸುರಿಪರುಣಾಂಬುಗಳಿನಖಿಳಧನ್ವಿಗ
ಳಂಗಂ|| ಪರಿಕಿಸೆ ಮುತ್ತುಂಪೂತಂ| ತಿರುತಿರ್ದುದುತಾದ್ರರಸಮನಂತಾ
ರಣದೊಳ್ |೨೦೬|

ಕಡಿದಮುಡಮುರಿದಪೆರ್ದೊಡೆ| ಯೊಡೆದಶಿರಂಸಿಡಿದಹಸ್ತಮಂಬಿಂಗಾ
ಯಂಬಡೆದತನುವೆರಸುರ... | ... ವೆಬಿಲ್ಲಬಿತ್ತೆ

ಗರಿಂದಂ| |೪೦೯|

ಅವಂಕಂಡುಬಿರ್ಸಬಳಿಗಳ್ಕವಿಯೆ

ಮ|| ಅಣಿಕೆಡೆರ್ದೋರ್ದತಿಕೋಪದಿಂಪಿಡಿದುಕಾಯ್ವಂಬೀರಲಿಂದೊ
ತ್ತಿತಳ್ಕಣೆದು ಪಿರ್ಂಸಬಳಂಗಳಿಂ ದವಿಡಿದಾಕಾಶಕ್ಕೆಕು ತ್ತೆತ್ತಲಾ|ರ
ಣದಿಂಜೋಲ್ವಭಟವ್ರಜಂಘನರಣಶ್ರೀನೋಡೆ ಕಟ್ಟಿರ್ದತೋರಣವಿಂ
ಬಂತಿರೆತೊಳ್ದಿದರ್ಸಬಳಿಗಸರ್ಗಂಗಾಮರಂಗಾಗ್ರದೊಳ್|

ವ|| ಅಘಟಂದೋಜೋರ್ಬರೊರ್ಬರ್ಕೆವಿವರ್ದೆಸಬಳಂ ಕುಕ್ಷಿ
ಯೊಳ್ನಟ್ಟುಬೆಂಭಾ|ಗದೊಳಾದಂಪಾಯ್ದು ಬ್ಬಾಲಂಗಳತೆರದಿಕರಂಲಂಬಿ
ಸುತ್ತಿರ್ಪುದಂನೋ|ಡದೆಕೇಶಾಕೇಶಿಯಿಂದಂಸಬಳಿಗರುರೆಕಾದುತ್ತಿರ
ಲ್ಕಾನಿಕಷರ್ಕಂ। ಡಿದುಚಿತ್ರಂಮರ್ತ್ಯಸೈನ್ಯಂಕಪಿಬಲಮೆನಿಸಿತ್ತೆಂದನು
ತ್ತಿರ್ಪರಾಗಳ್| |೪೧೦|

ಕಂ|| ಪಿರಿದುಂಗರ್ಜಿಪಸಿಡಿಲೆನೆ|ಪರಿಗೆಗಳಭಟತತ್ಕೃತಂಗಳುಣ್ಮಲ್ಬಿಷದ
ಬ್ಬರಿಸುತೆಖಂಡೆಯಕಾರಭರ್ರದಿಂಪುಟವೆ ದ್ದುರ್ಪರಿದುಪಳಚಿದರಾಗಳ್

ಮ| ಪಿರಿದಾದೋರ್ಬ್ಬರನೊರ್ಬ್ಬರಟ್ಟಿಜವದಿಂದಂಖಡ್ಗದಿಂಖಡ್ಗಿಗಳ್
ಘುರದೊಳ್ಬೊಬ್ಬಿರಿವುತ್ತೆಪೊಯ್ಯೆಕಡಿದಾಕಾಶಕ್ಕೆ ಪೋದಾಶಿರೋತ್ಕರ
ಮುಂತಲ್ಲಿ ಪಳಂಚುತಿ ದ್ದುರ್ವಘಟಂದಟ್ಟಟ್ಟಿ ಗಳ್ದಾತ್ರಿಯೊಳ್ ಭರದಿಂಕಾ
ದುತಿರಲ್ಕೆಕಂಡುಖಚರರ್ವಿಭ್ರಾಂತಿಯುಂತಾಳ್ದಿದರ್|| |೪೧೧|

ಕಂ|| ಅಸಿಯಿಂಪೊಯ್ಯಲ್ಮಿಗೆಜೋಲ್ವಶಿರಮನದ ನಟ್ಟಿಗಿಟ್ಟುಬೆನ್ನಟ್ಟ
ಕರಂ। ಮಸಗಿಪೊಡೆದವನತಲೆಯಾಗಸಕ್ಕೆಸಿಡಿಯಲ್ಕೆಪೊಡೆದನೊಬ್ಬ
ಸುಭಟಂ| |೪೧೨

ವ| ಮತ್ತಮಾಸಮರಮಂತುರಂಗಿಗಳ್ಕಂಡುಮನಮುರ್ಕಿ

ಕಂ| ವಿಂಗೆರಾಘಿವಾಘಿಚಮ್ಮಟಿಕೆಗಳಂದಲ್ಗಲ್ತು ರಂಗಿಗಳನಾದ್ವಾ
ಳಿಗಳಂತೋರುತ್ತೇರಿಸಿ ಪಸೆವಡೆಯೊಳ್ಪೊಕ್ಕುಕಾದಿದರ್ಕುಕ್ಕುಟಗಳ್

ಕಂ| ವಲ್ಗನಚತುರತೆ ಯೊಪ್ಪುದಬಲ್ಗುದುರೆ ಗಳಭಟರಾವುತರ್ಪಗೆ
ವಲದೊಳಾಂ|ತಲ್ಗದೆಬಾಯ್ಗಳಿನೊಗೆದಕ|ನಲ್ಗಿಡಿಗೆದರಲ್ಪಲಂಚಿಕಾದಿದ
ರಾಗಳ್|| ೪೧೩

ಜವದಿಂಘೋಳಾಯ್ತುಬಿರ್ಡೆ| ಕವಿದೆರಗಲ್ತಲೆಗಳುಡಿದು ಬಿದ್ದಟ್ಟಿಗಳುಂ
ಕುವಬಲ್ಪಿ... ಪರಿದುವಾರಣ ಧರೆಯೊಳ್||

ಚೆ|| ಪಿರಿವಂತುರಂಗಿಗಳ್ಪಿಡದೆ ಕಾದುತಿರಲ್ಕಿ ಶಿತಾಸ್ತ್ರಘಾತದಿಂ 'ಜರಿದು ಪೆಗಲ್ಗಳೊಕ್ಕ ಕರುಳುರ್ಕೆ ವನೆತ್ತ್ರತಳಲ್ವ ಕ್ಕೆನೆಲಕ್ಕೆ ಕಾಳಬೆರಲ್ಕೊರಲ್ಕಡಿದು ಕಂಡಿಸುತಾಕಡಿಭಾಗವಾದತೋಳ್ | ವೆರಸುವಳಂಚಿಬಿದ್ದ ಭಟರಟ್ಟೆಗಳಾಡಿದುವಾಜಿರಂಗದೊಳ್ ||

ವ|| ಅದಂ ಕಂಡತಿರಥರ್ಮಹಾರಥರ್ ಮರಥರಥರೆಂಬರಥಿಗಳ್ಕೋಪಾಟೋಪದಿಂಕವಿಯೆ

ಕಂ|| ರಥಿಗಳ್ಕಿಯುವಿಸುತಿರೆಸಾ| ರಥಿಗಳ್ತಿಗೆದೊಗೆದತ್ತರದಿ ನೆಳಗಲ್ಕಾಗಳ್| ಪೃಥುಳಬಳವಾಜಿಗಳ್ಮಣಿ| ರಥಂಗಳಾವರಿಸುತಿರದೆ ಪರಿದುವುರಣದೊಳ್|| ೪೧೯

ಖುರಹತಿಯಿಂನೊಂದತಿರಥ| ಸುರೆತಾನಭಿನಯಿಸುವಂತೆ ಬಾಯೊಳ್ಕಡೆಯೊಳ್| ಎರಡುಚರಣಂಗಳೊಗೆದವೊ| ಲಿರೆದೂವಾಳಿಸಿದು ವವುಮುಳಧದ ಹಯಂಗಳ್ ೪೨೦

ಉ|| ಸಾರಥಿಗಳ್ಮ ಹಾಸುರದ ತೇರ್ಗಳನಾರ್ದೆಸೆಗಲ್ಕೆಬಿಲ್ಲತಂ| ಕಾರರವಕ್ಕೆಭಲ್ಗಿಡಿಗಿಭಾವಳಿ ಕುಕ್ಕುರಿಸುತ್ತಿರಲ್ಕರಾ| ಸಾರಮನಾಂತುತದ್ರಥಿಚಯಂ ಕರೆಯಲ್ಕಿರೆ ನಟ್ಟುನೊಂದುಬಿ| ದೋರ್ಣ ದೊಳ್ಪಿಣಂಗಳಬಣಾಂ ಬೆಗಳೊಟ್ಟದ ವಾಜಿರಂಗದೊಳ್|| ೪೨೧|

ಕಂ| ತೇರ್ಗಳಿರೆಯುರ್ಕ್ಕೆಳಂಬರ| ಮಾರ್ಗಂ ದಶದಿಶೆ ಗಳೆಯ್ದೆ ವುಸುಳಿಸಿತವುದಿಂ| ಭೋರ್ಗರೆವಕೂರ್ಗಣೆಗಳಿಂ ಕಾರ್ಗಾಲದವುಳೆಯುತೆರದಿತಲ್ಸುರೆ ಕರೆದರ್|| ೪೨೨

ಕೆಲರತಲೆಕೆಲರ ಪೆದೊರ್ಡೆ| ಕೆಲರಡಿಕೆಲರುರವುಕೆಲರಕ್ಕೆ ಕೆಲರಜೆರಲ್| ಕೇರನಡುವೆಂಬಿಪಂಶರ| ಕುಲನಫಟಂತರಿದು ನಭಕೆಪಾರಿದುವಾಗಳ್|| ೪೨೩

ವರರಥ ಹಯುಸೂತಕೆತನ| ಕಿರೀಟಧೃತ ಶಸ್ತ್ರನಿಕರವೆಂಬಿಪನುರೆಕತ್ತರಿಸಿ ಧರೆಗಿಕ್ಕಿ ಶಗತತಿ| ಗರುಡಾ ರ್ಭಕರಂತೆ ಚಾರಿಪರಿದು ದುರಣದೊಳ್|| ೪೨೪

ಚಂ| ತೊಡುವ ಸರಳ್ಗೆ ಪ್ರೊಯ್ವ ಸಿಗೆ ಕುತ್ತುವಕೊಂತಕೆ ತಾಗಿಕೊಪ್ಪೆಕ| ಕ್ಕಡೆಗೆಡಡುಚರ್ಕೆ ತೋರ್ಪ ಸ ಬಳಕ್ಕ ಕುಗೆಂಬಮು ಸುಂಡಿಗಾರ್ಪನಿಂ ದಿಪುವವುತೋಗ್ರ ಚಕ್ರ ಕುರೆವಾಡುವಲ್ಗಾಡಿಗೆ ಪಾಯ್ದು

ಗೇಣ್ಗೆರ| ಲ್ಪಡೆಬಿಡದಾಂತು ತಳ್ತಿರಿವುತಿರ್ದುದು ತದ್ರಣರಂಗಭೂಮಿ
ಯೊಳ್||

ವ|| ಅಂತಾತುಮುಲಯುದ್ಧಮಂ ಕಂಡುರ್ಬಿ ಕೋರ್ಬಿ ಪರ್ಬಿದ
ಗರ್ಬದಿಂ ಮದಮುಕ್ಕಿಪೊಗಲ್ತೋಳ ರಾಜನಾಜ್ಞೆಯಿಂದಖಿಳಪಾರ್ಥಿ
ವಕುಮಾರವರ್ಗಂ ಸಮರಕ್ಕುಜ್ಜುಗಿಸೆ ಪಾಂಡ್ಯನ ಗಜಘಟೆಗಳಮೇಲೆ
ನಿಜ ಕರಿಘಟೆಗಳಂ ನೂಂಕೆಂದು ಮಾವಂತರ್ಗೆ ಸಿಯುಮಿಸಲ್ಕಾಗಳ್|

ಕಂ|| ಕೂರಂಕುಶಂಗಳಂಮಿಗೆ ಚಾರಿಸುತಾದೋರ್ಗ್ಗಿ ನಿಂದೆಮಾವು
ತರ್ಬೈರ್| ಭೈರವವೊಗೆಯುಲ್ನೂಂಕಿದ| ವಾರಣರಂಗಕ್ಕೆ ವಾರಣಂಗಳ್
ನಾಗಳ್|| ೩೦೭

ಪಕ್ಕರೆಗಳ್ಪಕ್ಕಗಂಳ್| ಲೆಕ್ಕಗಳೆನೆಗರಿ ಗಳೊಗೆದಗಿರಿ ಗಳನು
ತ್ತಂ| ಬೆಕ್ಕಸವೊತ್ತಿಂದ್ರನಿರ| ಲ್ಕೊಕ್ಕಾನೆಗಳೆಕ್ಕತುಳದಿ ಪೊಕ್ಕುವು
ರಣದೊಳ್|| ೩೦೭

ಪಿರಿದಪ್ಪುತ್ತಣೆದೆರಗು| ತ್ತಿರದೆತ್ತಂತಿರ್ದು ಕೆಡಪಿ ಮೆಟ್ಟುತ್ತಾರ್ಪಿಂ
ಬಿರದೊಡ್ಡಿನವು ದಕರಿಗಳ್| ಗಿರಿಗಿರಿಗ ಳ್ವಳಚುವಂ ತೆಕಾದಿದುವಾ
ಗಳ್ ೩೦೮

ಮ|| ಜಡಿದಾರುತ್ತಣೆದೊತ್ತೆನೂಂಕಿಭರದಿಂ ಭೈಭೈಯೆನಲ್ಕೈಗಳಂ
ಪಿಡಿದಾಕಾಶತಳಕ್ಕೆ ಸಾಯಿದ್ದುತ ದಂದಂತಂಗಳಗ್ರಂಗಳೊಳ್ಕಡುಪಿಂ
ದಾಂತಿರಿಪೆತ್ತಿ ಜೋಲ್ವ ಭಟರಿಂದಂ ತಾರ್ಕ್ಷ್ಮೋಣಿಯೊಳ್| ನಪಕೂ
ಲಂಗಳಪಾಳ್ಕೆಯಿಂಪರಿದು ಪತ್ಯಾಟೋಪದಿಂದಂತಿಗಳ್|| ೩೦೯

ಉತ್ತಮದರಾಲೊಂದಿಭಂ||

ಕಂ| ತುಂಗ ಶುಳಯುಕ್ತರೆನ್ನದೆ| ಪಿಂಗದೆಮುಂದಿಂಗೆ ಸಿಕ್ಕಿದರನೆ
ರಕೊಲುತಂ| ಭಂಗಮುನರಿಯದ ಮದಮಾ| ತಂಗಂ ಪಾತಂಗನಂತಿ
ರ್ದುತ್ತಾಗಳ್|| ೩೧೦

ವ| ಅದರಾಟೋಪಮಂ ಕಂಡೋರ್ವ ಸುಭಟಂ ಕನ್ನಡಾಗಳ್|

ಚಂ| ಕರಧೃತಖಡ್ಗಮಂಜಡಿದುಚಾರಿಸುತೆಯ್ದೆ ಪವೀರನೊರ್ಪನ
ಪಿಂದತೆಘುಟ್ಟಿ ಮುಟ್ಟಿ ಪಿಡಿದೆತ್ತಿ ನಭಕ್ಕಡೆಕೂಡೆಮುತ್ತವಂ| ಮರಳಿ
ಭರತ್ತೆಮಲ್ಲಿಘನಸಘೋಷವೆ ಮೇಲ್ಜೋವನಂಪುದ| ಸ್ವರದಪಸರ
ಭರ್ಗೋತ್ರದುಬ್ಬಿರದುರ್ಬಿ ಪಣ್ಣಾರಣ್ಣರ್ಗೆಯೊಳ್| ೩೧೧

ಮತ್ತಮೊರ್ವಂ॥

ಕಂ॥ ಉರಮುನಿರಿಯಲ್ಕೆಗಾಯದಿ। ಹರಣಂಪೊರಮೊಡುಗು ಮೆಂಡು ವಾಡೆಯನಸಿಯಿಂ।ಡಿರವಲ್ಲಿರಿಸಿ ಬಳಿಕ್ಕಾ। ಕರಿಕರವಂ ಪರಿವುಕೆಡಪಿ ಧಂಘಟನೋರ್ವಂ। ೨೩೦

ವ॥ ಅಂತೀಪರಿಯೊಳ್ಸುಭಟ ಕೋಟಿರ್ಗಳ್ದಂತಿಗಳಂ ತರಿದುಬ ರಿಕ್ಕೆವೃತ್ತಿರ್ಪಲ್ಲಿ।

ಕರವಾಳಿಂಕೈಪರಿಯು। ಲ್ವರಾಹನಂತೊಂದುಪಾಡೆ ಮುರಿಯಲ್ಕೆಗಣೇ ಶ್ವರನಂತೆರಡುರದಂಕಡಿ। ದಿರೆ ಪಿಡಿಮುಂತಿರ್ದು ವಾಜಿಘರೆಯೊಳ್ಕರಿ ಗಳ್। ೨೩೨

ಅಳಮುಮುದೊಳ್

ಕಂ॥ ಗಿರಿಕುಲದವೋಲಿಪಿರ್ದುವಳಿ। ಸುರಿಲ್ಪನೆ ಧಾರುಣಾಗ ನಿರ್ಝರ ಸಲಿಲಂ। ಪರಿವಲತಿಸುಗಳಗಾಯದಿ। ನರುಜಲ್ಗಂಕರಿಕುಳಕ್ಕೆ ಸುವಿವು ದುರಣದೊಳ್॥ ೨೩೪

ವ॥ ಮತ್ತಮಾರಣೋರ್ವಿಯೊಳ್।

ಚಂ॥ ಅಸಿರುಚಿಮಿಂಚು ಮೇಲ್ಕೊಗೆದರಕ್ತಮೆಕಳ, ಶರಾಳನಂಗಳ। ಪ್ರಸರದಕರ್ಪುನೀಲವಮನೇಕ ರಣಾನಕದೇಳ್ಗೆಗ। ರ್ಜಿಸುವ ಸಿಡಿಲ್ಕ ಡಂಗಿ ಕರಿಪಂಬುಗಳೇಘನ ವೃಷ್ಟಿಯಾಗಿರಲ್। ಪಸರಿಸುಪಂಬುದಾಗಮ ದಮಾಳ್ಕಿಯೊಳಿದು=ದುದಗ್ರಸಂಯುಗಂ। ೨೩೫

ಅಲ್ಲಿಂಬಳಯುಂ

ಕರಿಕರಿಯೊತ್ತೆತ್ತರೊಳ್,ಹರಿಹರಿಯೊಳ್ಪತ್ತಿಪತ್ತಿಯೊಳ್ವಾವಾಂ ತುರ್ಪುರನಡುಗಲುರ್ಬಿ ಬೊಬ್ಬಿಡ ಲೆರಡುಬಲಂಕಾಪಿಡುಬಿಡದೆ ಕಾದಿತಾ ಗಳ್। ೨೩೬

ರಥಘಟೆಯೊಳ್ಗಿರುತಿಮಾ।ಗ್ರಣಿರುತಿಯುರ್ಗೆರುತಿಪದಾತಿಹಯರುತಿವ ರವಾ। ರಣ ರುತಿರಘರುತಿ ಪರ್ಬಿರ। ಪೊರ್ದುದು ಕಲಿಚೋಳ ಪಾಂ ಡ್ಯನೃಪದ್ವಿಭಯುಬಲಂ। ೨೩೭

ಕಂ॥ ಅಂತುಭಯುಸೇನೆ ಕಾದ। ಲ್ದಂತಿಚಯಂಕೆಡೆದು ವಾಜಿಗಳ್ಮಡಿ ದತ್ತಿವಿ। ಕ್ರಾಂತಭಟರಘುಕೆಡೆದುರ ಣಾಂತದೊಳ್ಕಡೆದುಮಯ ವಾಭ್ರಾಗಳ್। ೨೩೮

ಕೆಡೆಯುದ ಕರಿಮಡಿಯುದದಹಯು| ಮುಡಿಯುದತೇರ್ಪೊಡವಿ ಗುತ್ತಿಳ್ದು ಬೀಳವಶಸ್ತ್ರಂ| ಸೆಡೆಯುದ ಪಡೆಸಿಡಿಯುದ ಕೊಡೆಕಡಿಯುದ ಪಳವಿಗೆಗಳ್ ಲ್ಲಪಾಂಡ್ಯನಪಡೆಯೊಳ್! ೪೪೯

ಕರಿಬೆಳ್ಕುಗಿಲೊಡ್ಡಿನ ಕರಿ ಯರಥಂ ವೃದ್ಧಶ್ರವನಸಾರಥ ಕಾದುವವು ಹಾಸುರದಬಿಸಿಲ್ಗ್ಗಿದುರೆಬಳಂ| ಸರುಜನ ಬಳವೆನಿಸಿನೋಳ್ಪುವಳಿದು ದಾರಣದೊಳ್| ೪೫೦

ಮತ್ತಂ

ಚಂ| ಒದವಿದಮೇಘ ದಂದದಿ ಬಯಲ್ದೊರೆಯಂದದಿ ಶಕ್ರಚಾಪದಂ ದದಿಜಲಬುದ್ಬುದ ಪ್ರಕರದಂದದಿಪರ್ಬಿದ ಬಳ್ಳಮಿಂಚಿನಂ!ದವಿ ನೆ ಮಂಜಿನಂದದಿ ಮಹಾಬಳಪಾಂಡ್ಯನೃಪಾಳಸೈನ್ಯಮಂ| ತದುಜಯಲಾ ಯ್ತು ಚೋಳಧರಣೀಶಕರಾಸಿಯೊಳಾರಣೋರ್ವಿಯೊಳ್|| ೪೫೧

ವ| ಅಂತು ನಿಜಬಳಂ ಕುರಿದರಿಯಾಗಿ ನೆರೆಬಯಲಾದುದಂಕಂಡು ಕಿ ಡಿಕಿಡಿಯೋಗಿಮತ್ತಮೊಪಗಲ್ಪೋಳರಾಜಂಗೆನಗಂಪೋಪುದೆಂದು ಪಾಂ ಡ್ಯಂಮೂಲಬಲಮುಂ ಕೈವೀಸಿತಾನೇರಿದ ಗಜೇಂದ್ರಮನಾದುನೋಂಕ ಲ್ಕಾಗಳ್

ಕಂ| ಅಘಟಂಚೋಳನೃಪಂನಿಜ| ಪದಾತಿಯಂಕೆಲಕೆಸಾರ್ಚಿತಾಂಕಾ ದಲ್ಕ! ಗ್ಗದರಣಕೇಳೀ ಗಜಮಂ| ಕಾದನಕ್ಕಾಸಾರದಿ ನಾದುನೋಂಕಿ ದನಾಗಳ್| ೪೫೨

ಮತ್ತಾರಣಕೇಳೀಗಜ|ಮೊತ್ತೊತ್ತಲ್ ಚಾರಿವರಿದು ರಿಪುಭಟಶಿರಮಂ ಕಿತ್ತಿರದೆ ಪರಿದುಕಾಯ್ದೊದ| ವೃತ್ತಂ ಪೊಡೆಚಂಡನಾದುತಿರ್ದುದುರ ಣದೊಳ್| ೪೫೩

ಚಂ| ಕವಿದಿವಿರಾಂತದಂತಿನಿಕರಂರಣಕೇಳಿಯೊನಿಪ್ಪವಾರಣಂ, ಡೊದೆದೀದು ಮುಂದು ಪೊಡೆಯಲ್ಕೆ ಹಯಾವಳಿ ನೂಗ್ಗುನೂಗ್ಗು ಕಾ ಯ್ದುವನಿಗೆ ಮೆಟ್ಟಿಮಿಟ್ಟೊರಸಿ ತೇರ್ಗಳಸಂತತಿ ಪಿಟ್ಟುಪಿಟ್ಟುಬಂ| ದ ಪಪೊಡೆ ತಗ್ಗಿಮುಗ್ಗಿ ನೆರೆಬಿದ್ದುದರಾತಿ ಪದಾತಿಸಂಕುಳಂ| ೪೫೪

ಜಡಿವಡೆಮುಟ್ಟಿಮುಟ್ಟಿಪಿಡಿದಗ್ಗದ ವೀರರನಾಗಳಕ್ಕರಿಂ|ನೆರೆಕುರುಪಿಟ್ಟು ಕೊತೆಗಳಕುತಿರ್ಪವುರಾಂಗನೆಯುರ್ಗೆ ನಿಪ್ಪಾನಿ ಮ್ಮರ ಪರನಾಯ್ದು ಕೊಂಬುದೆನುತೆತ್ತಿ ನಭಕ್ಕಿಡೆಕಿತ್ತು ಸೇನೆಬೊ| ಬ್ಬಿರವು ತಿರಳ್ಕೆರಾಸ್ರ

ರಸಪ್ರೀರಾಣ ನಾರಣಕೇ ಳಿವಾರಣಂ।

ಕಂ। ಕೈಗೊಳಿಪಣೆಗೊಳಿಯುಗಗೊರ್ಳಿ। ಮೈಗೊಳಿಯಿಂದಾ ಪ ೨೮೫
ಹೋಗ/ರದ್ವನದಕೊಲೆಪೆ। ಬಾರ್ಯಗ್ಗೊಲೆಯೆಂಬವರಿಂಕರಿ। ಸೈಗೆಡಹಿ
ತ್ತಂಬವಾರುವಥೆಯಿಂಭಟರಂ॥

ವ॥ ಆಂತುಲೋಯಿಸರ(?) ದವೇಲೆಭಂಡಿ ಪರಿದಂತೆ ಕೆಲಬರ್ಕ ೨೮೬
ಡಿಖಂಡಮಾಗಿಯುಂ ಕದಳಿಯುಪಣ್ಣ ಕಪ್ಪಡದೊಳ್ಕಟ್ಟನೆಲದೊಳಪ್ಪಳಿ
ಸಿವಂತೆ ಕೆಲಂಬರ ಜಿಗಿಜಿಯಾಗಿಯುಂ। ಕವಡಿಕೆಯರಾಸಿಯುಂಕಲ್ತಾಗಿ
ದಂತೆಕೆಲಂಬರ್ಚಲ್ಲನೆಚೆಲ್ಲಿಬಿದೋರ್ಡೆಯುಂ ಮತ್ತದಂಕಂಡುತಾಂತ
ರಡರಿಸಿ ಪಾಂಡ್ಯಭೂಪಾಳಂ ಕೋಪದಿಂ ತಾನೇರಿರ್ದ ಗಜಮಂಚೋ
ಳರಾಜನ ಮೇಲೆ ಕಡುಪಿಂದಣೆದು ನೂಂಕಿದಾಗಳ್॥

ಕಂ॥ ಇದಿರಾಂತುಬರ್ಪ ಪಾಂಡ್ಯನ। ಮದಕರಟಿಯುಕೈನೆಲಕ್ಕೆ ಬೀ
ಳಟ್ಟೋಳಂ। ಕದನದೊಳಸಿಯಿಂ ಕಡಿದಿ। ಕ್ಕಿದನಾರ್ಪಿಂ ನಭವೊಳ
ಮರತತಿ ಬೆರಗಾಗಲ್

೨೮೭

ವ॥ ಅಂತು ಚೋಳಭೂಪಂ ಶುಂಡಮಂ ಪರಿದಿಡು ಕಲ್ಪಾಂಡ್ಯ ರಾ
ಜಂತಾ ನೇರಿರ್ದ ಶುಂಡಾಳದಿಂನೆಲಕ್ಕೆ ಧುಮ್ಮಿಕ್ಕಿ ತನ್ನ ಸಾರಥಿಗಳ್ಪ
ತ್ತೆನಾರ್ಚಿದರಥಮಿರಲ್ಕದ ನೇರಿಕಾಯ್ಪಿಂದಿ ದಿರಾಂತುನಿಜಕೋಪಂಡ
ಮನೇರಿಸಿ ತೀವಿಜೇವಡೆದು ತೂಣಿಂಬಾಣಮಂ ಸೆಳೆದು ಬಿಬ್ಬಿರಿವುತ್ತಿ
ರ್ಪಾಗಳ್॥

ಕಂ॥ ಆದನಾಕಲಿಚೋಳಂಕಂ। ಡಘಟೆಗೆ ಮಿಗೆಮೆಚ್ಚಿ ಗಜಮನಿಳದು
ಮನೋರಾ। ಗದಿ ಧರ್ಮಯುದ್ಧಮಂತೋ। ರ್ಪುದಕೊಪ್ಪುವ ಪೊನ್ನ
ರಥಮನೇರಿದನಾಗಳ್॥ ೨೮೮

ಗರುಡನಮುರುತ್ತನಬಾಣದ। ಪರಿವಂ ಪರಿಯುದದನಶ್ವತತಿ ಸರ
ಳ ಪನಿ। ರ್ಭರ ದೊಳ್ಪರಿಪೊದೆವವಡಂ। ತಿರೆಗಾಲಿಯುಪಿಂದೆ ನೆಗೆದ
ಕಂಧೂಳಿಸೆಗುಂ॥

೨೮೯

ವ॥ ಅಂತು ನಿಜರಥದಿಂಪರಿಯಿಟ್ಟಗುರ್ವಿಂದಿದಿರಾಂತು ನಿಂದು॥

ಕಂ॥ ಮಿಸುನಿಯ ಕಿರುಗೆಜ್ಜೆಗಳಿಂ। ಮಿಸುಗುವ ಪೊಸನಾರಚಾರಿಘಂ
ಟೆಗಳಿಂ। ರಾಜಿಸುತಿರ್ಪ ಧನುವನಾರ್ದೆ। ರಿಸಿಗುಣಮಂ ನೀವಿಚೋಳ
ವಿಭುಜೀವಪಡದಂ॥ ೨೯೦॥

ಒಡೆಯೆ ಘರೆದಿಗ್ಗಜಂಗ| ಳ್ಕಿಡೆಯೆ ಖಳರ್ಬೆಚ್ಚಿ ಸೆಡೆಯೆ ನಿಜಸೇನೆ ಮುದಂಬ
ಡಿಯೆ ವರಚಾಪಮುಂ ಜೇವಡೆಪಂಬಾ ತೊಟ್ಟು ಚೋಳನೃಪನಾರ್ದೆಚ್ಚಂ

ಚಂ|| ಬೆರಲ್ಗಳ ರತ್ನಮುದ್ರಿಕೆಗಳೂರ್ಜಿತಕಾಂತಿ ನಿಜಾಸನೇಂದುವಂ
ಗುರು ಪರಿವೇಷವಾಗಿ ನಿಜವೈರಿಗೆ ಪ್ರೋಲ್ಗೆಯ ನೀಯೆ ತೂಣದಿಂ| ಸರಳ್ಗ
ಳ ನುರ್ಚಿ ತೊಟ್ಟು ತಿರುವಂ ತೆಗೆದೆಚ್ಚನ ದಾಗಲೆಂಬುಬಂ ಪೇಳಿಸಬಾರ
ದೆಂತೆಸೆವುತಿರ್ದನುದಗ್ರದಿ ಚೋಳಭೂಭುಜಂ|| ೭೫೩

ಅಡಿ ಕಣಕಾಲ್ಪಿದೊರ್ಡೆ ಕಟಿ, ನಡುಬಸುರಿರ್ದೆ ಬಾಹು ಹಸ್ತ ಪಂಗು
ಲಿ ಕಂಠಂ| ಪಡತಲೆ ಬಾಯ್ಮೂಗಿ ಕಣ್ಗಳ್| ಯೆಡೆಗಳನಿಷು ಪೆತ್ತನಟ್ಟು ಕತ
ದಸುರ್ಘಟರ್|| ೭೫೪

ಪೊಡವಿಯ ನಮುದಾರ್ಲಿಂಗಿಸಿ| ಬಿಡಲಾರದೆ ಕರ್ಚಿ ಬಿದ್ದರೆಂಬಂದದಿ
ಬಾ| ಳ್ಪೊಡಿಯಾಗಿ ಭೂಪಕುಲಜ| ರ್ಕೆಡೆದಿರ್ದರು ಚೋಳ ನಿರಿದ
ಮರಾಂಗಣದೊಳ್|| ೭೫೫

ಚಂ| ಕ್ಷಿತಿರಥಚಕ್ರದಿಂ ಪರಿಹಿದಂಡಪುನೀವು ತಿರಲ್ಕೆ ಪಾಂಡ್ಯ ಭೂ
ಪತಿಯ ಗಜೇಂದ್ರ ಮಸ್ತಕ ಮನಸ್ತ್ರದಿ ನೆಚ್ಚುಡುರುಳ್ದು ತದ್ಧಿರಾಕ್ಷಿತಿ
ರುಹ ಬೀಜ ರಾಜಿಯು ನಳುಂಬದೆ ಬಿತ್ತಿದವೋಲ್ಸಮೌಕ್ತಿಕ! ಪ್ರತತಿ
ಯೊಳೊಪ್ಪಿ ಕಾದಿದನುದಗ್ರತೆಯಿಂ ಕಲಿಚೋಳ ಭೂಭುಜಂ|| ೭೫೬

ಅಂತತಿ ಬಳನುಂ ಕಾಡಿ ಕೆಡವುತ್ತಿರ್ಪಾಗಳ್||

ಚಂ| ಅರಿಬಲದಲ್ಲಿ ತೋರ್ಪ ಛಲಮುಂ ಗೆಲವುಂ ಬಲವುಂ ಬಿಸುಟ್ಟು ನಿ
ಸ್ತರತರಮಪ್ಪ ತಮ್ಮ ಧೃತಿಯುಂ ಸ್ಥಿತಿಯುಂ ಮತಿಯುಂ ಕೆಲಕ್ಕೆ ನೂಂಕಿರ
ದೊಡಮುರ್ಚಿದಂಬಿನೊಳಳಲ್ದು ಕನಲ್ದು ಬಳಲ್ದು ಭೀತರಾ! ದುದುವ
ಳಿ ದಿರ್ಚೆ ಬೆಚ್ಚಿ ಬೆರಲ್ಗ ಭಯಮುಂ ಮಿಗೆ ಬಿರ್ದುದಕ್ಕರಿಂ|| ೭೫೭

ಕಂ|| ಅದನೀಕ್ಷಿಸಿ ಪಾಂಡ್ಯಂ ಮುಳಿ! ದಿದಿರಾಂತಾರ್ದೆಚ್ಚು ಬಾಣತ
ತಿಗಳನಾಟೋ| ಪದಿ ಕಡಿದೊಟ್ಟುತ್ತಿರ್ದಂ| ಕದನದೊಳಾ ಚೋಳನೃ
ಪತಿಗಾರ್ದೊರೆ ಧರೆಯೊಳ್|| ೭೫೮

ಆ ಸಮಯದೊಳ್||

ಅಟ್ಟಿಗಳಿತೆಕ್ಕೆಗಳ್ಪಿಣ| ದೊಟ್ಟಲ್ ಕಾಳಿಜಪಬ್ಬಜೆ ನೆತ್ತರ ಕಡಲಂ|| ದಿಟ್ಟೆ
ಣಿಸಿರಲಾರಣಮುದುನೆಟ್ಟ| ನೆಜವನುಂಡು ಕಾರಿದಂತಾಯ್ತಾಗಳ್||

ಚಂ|| ನಸಳ್ಪ... ತ್ರ ... ಧಾತ್ರಿಯೊ

ಳ್। ಪೊರಳ್ವ ಕಡಂಗಿ ನಿರ್ಭರವೆಳಮುಣ್ಮಿದ ರಕ್ತಜಲಪ್ರವಾಹದೊಳ್
ತೆರಳ್ವ ಭಯಾನಕಂತನುವನಾವರಿಸಲ್ನಿಜ ವಾಹನಂಗಳಿಂ। ದುರುಳ್ವತಿ
ಭೀತರಂಜರಿದು ಝೊಂಕಿಸುತಿರ್ದುವು ಭೂತಸಂಕುಳಂ॥ ೭೫೯

ಕಂ॥ ಸರಳ್ಗಳ್ಗಾಯದಿನುಚ್ಚಂದ। ಕರುಳ್ಗಳ್ಕಿತ್ತಿಡರ್ದೆಡಪಿ ಬಿರ್ದುಹ
ಮ್ಮೈಸುತ್ತಂ। ಬೆರಳ್ಗಳ್ಚೆಬೆದರು ಮೊಗದಿಂ। ಮರುಳ್ಗಳ್ಪಿಂಬತ್ತಿ ರೋ
ಡುತಿರ್ದರ್ ಭೀತರ್॥ ೭೬೦

ಸಡಗರದಿ ನೋಡುವೆಡೆಯೊಳ್। ಪೊಡವಿಗೆ ಸೀಸಕವು ಮರುಳೆತಲೆಬಿ
ರ್ದುದೆನು। ತ್ತಡಿಗಡಿಗೆರಕ್ತನೋಡುವ। ಕಡುಭೀತರನಲ್ಲಿ ನೋಡಿನ
ಕ್ಕರ್ಸುಭಟರ್॥ ೭೬೧

ಆವೆಡೆಯೊಳ್ನೋಡೆಕಬಂ। ಧಾವಳಿ ಕೀಲಾಲವಸ್ಥಿ ಪಳದಕರುಳ್ಗಳ್॥
ತೀವಿರೆ ತದ್ರಣಮುತಿರಾ। ದ್ರಾವಹಮಾಯ್ತಾರ್ವಗೃಧ್ರಕಾಕವ್ರಜದಿಂ

ವ॥ ಅಂತಾರಣದೊಳ್॥

ಉ॥ ಆರ್ವ ಪಿಶಾಚರಬ್ಬರಿಪಜಟ್ಟಿ ಗರುಬ್ಬುವ ಚಂಡರಕ್ತಮುಂ। ಷೀ
ರ್ವಕರಾಳನರ್ತಿಸುವಶಾಕಿನಿಬಿರ್ವ ಜಣಂಗಳೊಳ್ಕರಂ॥ ಪೂರ್ವ ಶಕುಂ
ತಿಗಳ್ ಪರುಳನುಚ್ಚರ್ವ ಕುಕ್ಕುರವಸ್ಥಿಜಾಲಮುಂ। ಕೌರ್ವ ಸೃಗಾಲ
ವಾಸುರದಿನಾ ರಣರಂಗದೊಳೊಪ್ಪಿತೋರುಗುಂ॥

ಚಂ॥ ಘುರಪಡೆರಂಗವಟ್ಟೆಗಳಿಕಂಭ ವಿರಾಜಿನಪೋಳಿಪಂಜರಂ। ಕ
ರುಳ್ಗಳೆಣಿತೆ ೀರಣಂ ಪಿಶಿತಮೊಬ್ಬೆಗಳ್ನಿರ ಪಿರ್ವಬುತ್ತಿನೆ। ತ್ತರಜಳ
ವಾಗಲಿಂತು ರಣಲಕ್ಷ್ಮಿಯ ನರ್ತಿಸಿ ಚೋಳರಾಜನಂ ಪರಸುತೆಧೋರ
ವಂಗುಡುತಲಂದುಣುತಿರ್ದುವುಭೂತಸಂಕುಳಂ॥ ೭೬೪

ಮತ್ತಂ

ವ॥ ಉಲಿಯುತ್ತಿರ್ಪರಣಾನಕಂ ಪರೆಯುದಾಗಲ್ಬಾಣದಿಂಕ್ರೋಡು
ಪಂ। ದಲೆನಾಲ್ಕಂ ತಳೆದೈದನಾಂತು ನಲಿದಾರಂತಾಳ್ದು ಸತ್ತ್ರಕ್ಕೆಪೆ
ಗಾಲಿಸುತ್ತಿಪ್ಪಜರುದ್ರ ಷಣ್ಮುಖದಶಗ್ರೀವಾದ್ಯರಂದಾಡಿಪೋಲ್ವಲ
ಪೊಳ್ತೋತನ ನಾಟ್ಯಕಂಗಳೊದವಂ ತೋರಿತ್ತು ಭೂತವ್ರಜಂ॥

ವ॥ ಅಂತತಿಭಯಮಂ ಕರಮಾಬ ರಣದೊಳ್॥

ವ॥ ಶರವ ೦ ಚಂಚುವಿನಿಂದೆ ತುಂಡಿಸಿನಪಕ್ಕಿಡಾಡಿಮೇಲಾಂತು
ಪಿ ಭೀರದಿಂಘೂಳ್ಕನೆ ನುಂಗಿ ಪೆರ್ಬಸುರನಾಪಿರಂ ಪೊಯ್ದು ಸೀಳಿಕ್ಕಿ

ನು। ಣ್ಣರುಳಂ ತಿಂದುಲಿವುತ್ತೆ ರಕ್ತಜಲಮಂ ಸುರ್ಕೆಂದು ಪೀರುತ್ತೆ ಪಾ
ಸುಗದಿಂದಂ ರಣಪಕ್ಕಿಗಳ್ ನಲಿದುವಾ ಸಂಗ್ರಾಮರಂಗಾಗ್ರದೊಳ್॥
ಯುರುಕಕಂ। ಪರಚಕ್ರಕುಮುದಹರಿಪುಷ್ಕರನೆಂಬಿನಿತೆ ಪೆಸರ್ವಾವನ
ಳಿವನೆಚ್ಚಪುರಂ॥ ೭೬

ಪಡೆವಿಂತೆರವಿಂ ರಣದೊಳ್ ಮ್ಮಡಿಯುಲ್ಕಪು ಪುತ್ತುಗೆದಾತ್ಮಧೈರ್ಯಂ ಪಿನಾ
ಗಳ್। ಜಡಿಡಿವಿರಾಂತತಿ ಕೋಪದಿ; ಪುಡಿಪಾರಿದ್ದ ಕೆಂಡದಂತಿರಿರ್ದಂ
ಪಾಂಡ್ಯಂ॥ ೭೭

ವ॥ ಅಂತವಲಂಬಿತ ಕೃತ್ಯನಾಗಿ ಪಾಂಡ್ಯರಾಜಂ ಕಡುಮುಳಿಸಿಂ ಕಾಂ
ಗದಿಂ ನಿಂದಿರ್ದು।

ಕಂ॥ ಪಿಡಿದುಂ ಸತಳ್ಗಳನೆಸೆವುತ್ತಿರೆ ಬಿಲ್ಲಂ ಕಡಿಯೆ ಪಾಂಡ್ಯನತಿಕೋಪ
ದಿಸಿ। ಕ್ಷಿಪಶಕ್ತಿಯೊಳಿಡಲದನಾ। ಸ್ಪುರದಿಂ ನಿಜಶಕ್ತಿಯಿಂದೆ ಕಡಿದಂ
ಚೋಳಂ॥ ೭೮

ವ॥ ಅಂತು ಭಗ್ನಾಯುಧನಾಗಿ ನಿಂದಿರ್ದ ನಿಜರಾಜನಲ್ಲಿಗೆ ಮಂತ್ರಿಗಳ್
ದಿಂತೆಂದರ್॥

ಕಂ॥ ಎಲೆ ನರಪತಿ ಪ್ರೊತ್ತಿದುದು ಪೋಳ್ ಗಳಿಕೆಳೆಗೆ ಪಳಿಸಿ ಕೆಡೆವುದು ಸ
ಲ್ವ ಸ್ತ್ರೋತ್ರ ವೆಗ್ಗಳಿಕೆ ಪತಿಜಯದ ಪಕ್ಕೊಂಬುದೆನುತ್ತಂ ಪೇಳ್ವಯ ಸಂಗೆಪ್ಪು
ರಾತ್ಮಪತಿಸಚಿತಾಗಳ್॥ ೭೯

ಹರಿಗೆ ನಗಂ ಹರಿಗ ಗಪ್ಪಂ। ಹರಿಗೆತ್ತೃಣಂ ಹರಿಗೆ ತಿವಿಸೊಳ್ ಪುವತೆರವಿ
ಹರಿಸತ್ವದ ಹರಿಧೇಕಿಂ। ಕರಚೋಳಂಗಾಯ್ತು ಪಾಂಡ್ಯನೋಡಿದ ಸಾ
ಗಳ್॥ ೮೦

ಬಲಯುತ ಚೋಳನೊಳಾಜಿಯು। ನ್ನುಳ್ವ ನೋಡಿದ ರಾತಿಘಾಯಿವರ್ಪ
ತ್ತದಪಿವರ್ ಳೆಯಾದರ್ ಶುದ್ದದ ಜ್ವಾಲಚರರಾದಭ್ರಜಂಗರಾಪ
ಚಿತ್ರಂ ೮೧

ವ॥ ಅಂತು ಪರಾಜಯಮನ್ನಾಂತ್ತೋಡಿದ ಪಾಂಡ್ಯನಂ ಬೆಂಬತ್ತಿಪೋ
ಪ ಪಗಲೊಳ್ ರಾಜಂಗೆ ಗಾಂಗೇಯ ಮಾತ್ಯನಡೆವೊಕ್ಕಿಂತೆಂದಂ॥

ಚಂ॥ ಎಲೆ ನೃಪರಾಜ ನೀತಿಗಳೊಳುಂಟು ಮನೋಹರವೊರ್ಬರಿದಾತನಂ
ಬಳವಳಿದಾತನಂ ನಿರಾಯುಧನಂ ಪುಗಲ್ಪೊಡಿದಾತನಂ। ಛಲದಿಕೊ
ಲ್ಕದೋಷಮದರಿಂದವೆ ನಿನ್ನಯ ಧರ್ಮದಿಂದೆ ಪೋಗಲಿಬಡಪಾಂಡ್ಯನಂ

ನುವರದೊಳ್ಮರಳ್ವವೆಂಬುದಂ ತೋರುವ ಮಾಳ್ಕೆಯಿಂದಿಬ್ಬರಾಗಿ ಪ
ಪಿಟ್ಟಾಗಳ್॥

ಕಂ॥ ಸೆಡೆದೋಡುವ ಪಾಂಪ್ಯನಪ್ರಬ್ಬಡೆಯೊಳಿಪ್ಪೆಂಚಿತ್ರಪೊರ್ಮ
ಸಿದಿರಾಂತನೆನುತ್ತುಡರ್ದ ಘನಕೋಪದಿಂದಂ ಕಾಲಂಗಲಿಮೊನೆಯಾಂ
ಡನುರ್ವಿ ಪರ್ಬಿಯಿಟ್ಟಾಗಳ್॥ ೪೭೯

ಘನರುದ್ರಾಕ್ಷವಿಭೂತಿಗ ಳಿನಿಪಿಪರಿಂದೆಸೆವರುದ್ರವೇಷದರಾಪ್ರುತ್ತನ
ನೀಕ್ಷಿಸಿಶರಣೆನುತಂ। ಮೊನೆಯಾಂಡಂ ಬಾಳನಿಕ್ಕಿ ಕೈಮುಗಿದಿರ್ದಂ

ವ॥ ಅಂತು ಕೈಮುಗಿದಿರ್ದಮೊನೆಯಾಂಡ ವೀರನಪ್ರನಗಸತ್ವಮಂ
ನೋಡಲ್ಕೆಂದು ತುರಂಗಿವೇಷದೀಶನಬ್ಬರಿಸುತ್ತಾಗಳ್॥

ಕಂ॥ ತವೆ ಬಿಯಿಂದಪಿವಸ್ತ್ರಾನುಭವಮಂ ತರಿವತೆರದಿನಪು
ಪಮಂಕತ್ತರಿಸುತ್ತಿರೆ ಮೊನೆಯಾಂಡಂ। ಹರಹರ ಶರಣಾರ್ತಿಯೆನು
ತಲೀಕ್ಷಿಸುತಿರ್ದಂ॥ ೪೮೦

ವ॥ ಅಂತೀಕ್ಷಿಸುತ್ತಿರ್ಪಾಗಳ್।

ಕಂ॥ ಪಿರಿದಪ್ಪಜಿಯೊಳೆಚ್ಚತ್ತುರುಭಪಿತವನಿಟ್ಟರಾತಿವೇಷಕ್ಕೊಡಲಂ
ನಿರುತಂ ಕೊಟ್ಟೆನೆನುತ್ತಾ। ಒರದಿಂಪೊಗಳುತ್ತಮಿರ್ದನಾಗಿರಿಜೇಶಂ॥

ವ॥ ಅಂತಾಮೊನೆಯಾಂಡನಪ್ಪಶ್ತಿಯು ಛಲದಪೆಂಪಂ ಕೊಂಡಾಡಿಖಂ
ಡೇಂದುಶೇಖರಂತಾಂಬರಿಸಿದದಿವ್ಯವಿಮಾನದೊಳ್ಮೊನೆಯಾಂಡನಂಕು
ಳ್ಳಿರಿಸಿ ಕರುಣದಿಂನಿಯಮಿಸಲ್ಕಾಗಳ್

ಕಂ॥ ಘನದುಂದುಭಿ ಮೊಳಗುತ್ತಿರೆ। ಮೊನೆಯಾಂಡಂಬೆರಸು ರತ್ನ
ಪುಷ್ಪಕವಖಿಲಾ। ವನಿಯಂ ಬೆಳಗುತ್ತಾಸುರ। ಜನನುತ ರಜತಾದ್ರಿಗಿ
ರದೆಬಂದುತ್ತಾಗಳ್॥ ೪೮೧

ವ॥ ಮತ್ತಮಂತಾಮೊನೆಯಾಂಡಂ ಬೇಸುಸಕಲ ಗುಣಾನ್ವಿತಂ ಗಿರೀ
ಶನಾನಂದದಿಂದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಯಕ್ಷಂಪೊಗಳುತ್ತಿರಲಿನ ಪೇಕ್ಷಾತ್ಮಕನಪ್ಪ ವೀರಮೊನೆಯಾಂಡಂ
ಗೊಲ್ದಕ್ಷಯಪದಮಂ ಕೊಟ್ಟನು। ಪಾಕ್ಷಶಿವಂಮೆರೆವುತಿರ್ದನಾಸ್ಥಾ
ನಿಕೆಯೊಳ್॥ ೪೮೨

ಮತ್ತಮಿತ್ತಲ್

ಚಂ॥ ತುರಗಚಯಂತರಂಗತತಿ ಬೆಳ್ಗೆದೆಪಲ್ಲಿಗಳ್ಪುಳಿಗಳ್ಗೆ ಜಾ

ಭೀಕರಮುಕುರವ್ರಜಂ ಪೊಳೆವಶಸ್ತ್ರಕುಳಂ ಶಿಖರೌಘಮುದ್ಧಣೋತ್ಕರ ಮಕುಳೀರಾವಳಿರಣಾನಕರಾವಮೆ ಘೋಷಮಾಗಲುದ್ಧುರಬಲವಾರ್ಧಿಗಂಡಂಕಲಿಚೋಳನೃಪಂಶಶಿಯಂತಿರೊಪ್ಪಿದಂ॥ ೪೮೬

ವ॥ ಅಂತಾ ರಣರಂಗದೊಳ್ಪಗಲ್ಚೋಳರಾಜಂನಿಜಭುಜ ವಿಜಯ ಪ್ರತಾಪದಿಂದಿರುತ್ತಿರ್ಪಾಗಳ್

ಕಂ॥ ನಿಜಭಕ್ತಚೋಳನೃಪ ಭುಜ। ವಿಜಯಮನೀಕ್ಷಿಸಲು ಪೋಕ ನಾತ್ತಪ್ರಮಥ ವ್ರಜಯುತನಂಬರಮಾರ್ಗದೆ। ಳಜಹರಿನಗಳ್ಪುಗಳ ಲೋಗಂಗೊಟ್ಟಿರ್ದಂ॥ ೪೮೭

ವ॥ ಆಸಮಯದೊಳ್

ಕಂ॥ ನೀರದಪಥದೊಳ್ಸದೆವಿ। ಶಾರದನತಿ ಕದನಪಟುಮುನಿಪ ಸ್ಯಂ ವಾರದಧವಳನೆನಿಪ್ಪಾ। ನಾರದನೀಶ್ವರನಮುಂದೆನರ್ತಿಸುತಿರ್ದಂ

ವ॥ ಅಂತಂಬರದೊಳಾಡಂಬರಂಬೆತ್ತು ಭಾಳಾಂಬಕನೋಲಗಂಗೊಟ್ಟುಕುಳ್ಳಿರ್ದು ನಿಜಭಕ್ತನಪ್ಪಪಗಲ್ಚೋಳರಾಜನಪರಾಕ್ರಮದ್ವೇಗೆಗೆಮೆಚ್ಚಿಮೆರವುದಂ ಬಗೆದಂದು ತನ್ನೊಳಿಂತೆಂದಂ॥

ಕಂ॥ ಪರಜಿಡೆವಿಭೂತಿಯಂತಾ। ಳ್ದರನೆನ್ನಂತೋತುಕಾಂಚಿಚೋಳ ನಮನಮಂ ಪಿರಿದೊರೆದು ನೋಳ್ಪೆನೆನುತೀ। ಶ್ವರನತಿ ಮಾಯಾವಿಡಂಬಮಂವಿರಚಿಸಿದಂ॥ ೪೮೮

ವ॥ ಅಂತುಗ್ರಾಕ್ಷಂ ಮಾಯಾವಿಡಂಬಮಂ ವಿರಚಿಸಿನೋಳ್ಪೆನೆಂದಿರುತ್ತಿರಲಿತ್ತಲ್

ಕಂ॥ ಒಂದೊಂದು ಮುಟ್ಟಿಪೊನ್ನಂಪಂದಲೆಗಳ್ಗೆಪೆನೆದ ಚೋಳಂ ನಡಿಯಲ್। ಮುಂದಿರಬಿದ್ದತಲೆಗಳನ। ದರಿದರಿದೊಟ್ಟುತಿರ್ದ ರಾಜಭಟರ್ಕಳ್॥ ೪೯೦

ಅಂತದರೊಳ್॥

ಸಡ ಪಾತಕನೊರ್ವಂ ಬಿಡದಟ್ಟಿ ನಿಜಾಸಿಯಿಂದನೋಡುತ್ತಿರ್ಪಾ ನಡೆಯೊಳ್ಸಿಕ್ಕಿದಭಕ್ತನಜಡೆವಲೆಗಡಿಯಲ್ಕೆ ಪೊಡೆದು ಕೆಡಪಿದನಾಗಳ್। ನೀಲಶಿರಂಗಳೊಳಾ ಜಡೆ। ದಲೆಯಂ ತಂದಿಕ್ಕಿಪೊತ್ತುವಂಸ ಹಿತರಪಂದದೆಗಳಜಿಬೋರಕಾರ, ನರ್ಲಪಿಂದಂತಿರುಗೆ ಘರದಿಬಿರುತಿರ್ಪಾಗಳ್॥ ಅನ್ನೆಗವಿತ್ತಲ್ದಿಜ, ನಂಪೆಪೊಗಳುತ್ತಿರಾಗಿ ನಿಜಪದಸಹಿತಂ ತ

ನ್ನಯುಕಿಣಿರಕ್ಕೆಸಿದ್ದಮ| ಹೊನ್ನತಿಯಿಂ ಚೋಳ ನೋಲಗಂಗೊಟ್ಟ
ರ್ದಂ|| ೪೭

ವ|| ಅಂತೋಲಗಂಗೊಟ್ಟಿರ್ದಸಮಯದೊಳ್ಪಂಪ್ಯನೆಮಂತ್ರಿದಿ
ಕ್ಕಿತಲೆಗಳಂತಂದುತೋರ್ಪರ್ ಗೊಂದಣ ದವೀರಭಟರ್ ಪಲವುಪೊಂ
ಗಳಂಕೊಡುತ್ತಿ ರೌದ್ರಾಲಾಪದಿಂ ಪಗಲ್ಚೋಳ ಭೂಪನಿಸಿರುತ್ತ
ರ್ಪನ್ನೆಗಂ

ಕಂ|| ಪಲವುತಲೆಗಳನೆತೋರ್ಪರ್ತಿ| ಬಲಯುತರೊಪ್ಪಿರಕೃಪಾಂತಾ
ಕಂದಮುಮಂ, ನಲವಿಂತಪ್ಪಂದದಿತಂಡಿಳೆಗಿಳಿಪಿದನೊರ್ಬಪಾಪಿಯಾಗಂ
ದಲಿಯ||

ವ. ಅಂತುಶಿವಭಕ್ತಜನಪ್ರಾಣರೂಪಂನೋಳ್ಪಾಗಳ್||

ಚಂ|| ನಳುತೆರೆದಿರ್ದಕಣ್ಗಳರೆಗರ್ಚಿದನಾಲಗೆನೆತ್ತರಿಂ ವಿಜೃಂಭಿಸುವ
ಜಟಾಳಿಯೊಳ್ಪೊರೆದಮೀಸೆಗಳೆ ಂಬಿವರಿಂದೆ ಸಕ್ಕ್ರ್ಯಪಾರಸವನೆ ಬೀರು
ತಿರ್ಪ ಶಿವಭಕ್ತನ ಪಂದಲೆಗಂಡು ಪೊಟ್ಟೆಯುಂ ಪೊಸೆದು ನಮಸ್ಕಿಪಾ
ಯಯೆನುತಳ್ಕಿದನಾ ಕಲಿಚೋಳಭೂಭುಜಂ|| ೪೯

ಕಂ|| ಕಡುಪಾಪಿಯಾದೆನಾಂ ತೋ| ಳ್ನಿಡಿದಾದೊಡೆ ತಾಯ್ಗೆತಪ್ಪ
ಪನ ಗಾದೆಯುಪೊಲ್, ಮೃಡಮೂರ್ತಿಯುಪ್ಪ ಭಕ್ತನ| ಜಡೆದಲಿಯಂತ
ರಿಪುವಾದುದೆನ್ನಯುಸತ್ವಂ

ಅಕ್ಕಟಜಡೆಪ್ರೋತ್ತವರಂ| ಮುಕ್ಕಣ್ಣನುತಾನೆನುತ್ತೆಭಾವಿಸುತಿರ್ಪ| ಪ
ಕ್ಕಜದ ಭಕ್ತಿಪೋದುದು| ಬಕ್ಕಟಬಯಲಾದುದೆನ್ನ ಭಲಪನುತಿರ್ದ೦
ಅರಿಗಳತಲೆಗಳನಾಪಿನಂ, ತರಲೆಂಬೀಬುದ್ಧಿ ಗೊಟ್ಟನೇಕಿಂಪೆನಗೀ| ಶ್ವ
ರನಕಟಕಟ ಶಿವೈಕ್ಯನ| ಶಿರಪಂಕ್ತಿಂತುಟಾದುದೆನ್ನಯುಪಾಪ||

ವ|| ಎಂದುಪಲ ಪ್ರಪರ್ಯಿಂ ಪಲುಂಬಿಭಕ್ತಿರಸಾವೇಶದಿಂ ಪಗಲ್ಚೋ
ಳರಾಜನಿದಿರೆದ್ದು ಪೋಗಿ ಪುತ್ತಮಾಜೆಡೆದಲೆಯಂ ತನ್ನ ಕರತಳ ದೊ
ಳಾಂತುಕೊಂಡು ಬಂದು ಸಿಂಹಾಸನಪೀಠವನೊಳಿರಿಸಿ ಕಸ್ತೂರಿಯಿಂಲೇ
ಪಿಸಿ ಸುರಭಿಕುಸುಮದಿಂದರ್ಚಿಸಿ ನಮಸ್ಕರಿಸಿ ತತ್ಸಭಾಜನಂ ನೋಡಿ
ಬೆರಗಾಗಲ್ಕಿಂತೆಂದಂ||

ಕಂ|| ಕೇಪದೊಳಿವಿಲ್ಲದೆಜಡೆವಲಿಯಂತರಿಸಿದುದಕೆನ್ನ ಪುಡಿದಕ್ರಿಡಂ
ಡಂ, ಗಲಿಸಿಕ್ಕ

ಕಳಕಳಂಖ ವ್ಯಾಗಲಗಜಾಪತಿ ಸಾಗರವಂತಿರೊಪ್ಪಿದಂ|| ೪೦೩

ವ|| ಅಂತಾ ಕೃಪಾಸಾಗರಸದಾಶಿವಂನಿಜಮೂರ್ತಿಯಂ ತೋರಿದಾಗಳ್

ಕಂ ಆಮೂರ್ತಿಯ ನೀಕ್ಷಿಸಿ ಗುಣ| ಧಾಮಪಗಲ್ಪೋಳ ನೃಪತಿ ನಿಜಪದದೊಳ್ತಾಂ| ಪ್ರೇಮದಿ ಪೊದಳ್ದು ಪುಳಕ| ಸ್ತೋಮಂಮೊಪ್ಪೀರಭಕ್ತಿರಸದಿಂ ಪೊಗಳ್ದಂ

ಜಯಜಯ ಶಂಕರ ಶಶಿಧರ ಜಯಜಯ ಭವಭಯ ವಿದೂರ ಜಯಜಯ ಸಚ್ಚಿನ್ಮಯ ಗಿರಿಜಾಚಿತ್ತಪ್ರಿಯ, ಜಯಜಯಘನ ದುರಿತನಾಶಕಲಗಣೇಶಾ ೪೦೪

ವ|| ಎಂದುನುತಿಗೆಯ್ದಾನಂದಾಶ್ರುಜಲಭರಿತನಯನನಾಗಿಭಕ್ತಿಯಿಂಕರಕಮಳಮಂ ಮುಗಿದಿರ್ಪ ಪಗಲ್ಪೋಳ ರಾಜಂಗೆ ಗಂಗಾಧರಂ ಕೃಪೆಯಿಂದಿಂತೆಂದಂ

ಪೊಡವಿಯೊಳೆನ್ನ ಯುವೇಷಂ| ಬಿಡದಿರನೆನ್ನಂತೆ ಕಾಣ್ಬಭಕ್ತಿನಿಮಿತ್ತಂ ಒಡೆವಲಿಗೆ ಮುಡಿನಲೆ ಯುನಿತ್ತಡಿಗೆರಗಿದ ವೀರರುಂಟೆ ನಿನ್ನಪೊಲಿಂಪಂ

ವ|| ಎಂದುಪೊಗಳ್ದು ಮತ್ತಮಿಂತೆಂದಂ

ಕಂ ಎಲೆಹೋಳ ನಿನ್ನಭಕ್ತಿಗೆ| ನಲವಿಂ ಮೆಚ್ಚಿದೆ ನಿದರ್ಕೆ ಪರಮಂಬೇಡಂ| ದಲಘುಕೃಪಾನಿಧಿ ಶಿವನೆನೆ, ಲಿಳೆಯರಸಂ ಹರುಷದಿಂದೆ ಬೇಡಿದನಾಗಳ್

ಕಡಿದ ಜಡೆವಲಿಗೆ ವಸುಪಂ| ತಡೆಯದೆ ಕರುಣಂಮಿಗಲ್ಕೆ ನೀವಿತ್ತಾಗಳ್|| ಪೊಡವಿಬೆರಗಾಗಲೆನ್ನಂ ಮೃಡ ನೀನುದ್ಧರಿಪುದೆಂದು ನುಡಿದಂ ಭೂಪಂ|| ೪೦೫

ಎಂದುಮತ್ತಮಿಂತೆಂದಂ

ಎನ್ನ ಸುತಿನಿನ್ನ ಪೆಸರ| ತ್ಯುನ್ನತಮಹಿಮಾನಕಂಜ ಶಾತ್ಮಜೆಯೆನಿಪಾ| ಸನ್ನುತ ಸೋಮಪ್ರಭೆವೆರ| ಸೆನ್ನಂ ನಿಜಭಕ್ತಿಯಿತ್ತು ಪೊರವುದು ಕೃಪೆಯಿಂ ೪೦೬

ಎನಲಭವಂ ನುಡಿದಂನೆ| ಟ್ಟನೆನಿಮ್ಮ ರ್ಬರ್ಗೆಪಿಂದೆಭಾಷೆಯನಿತ್ತೆಂ|| ಘನಪದಪ ನೀವನೆಂಬುದ| ನುನಯದಿಂಬಂದೆನೋತುಪೊರೆವೆಂನಿಮ್ಮಂ

ವ|| ಎಂದು ಸದಾಶಿವಂ ಕರುಣದಿಂನಿರೂಪಮನೀವುತ್ತಿರ್ಪಪನ್ನೆಗ

ಮಿತ್ರಲ್ಪಗಲೊಳ್ಚಿಳ ರಾಜನಪಟ್ಟಮಹಿಷಿಯಪ್ಪ ಸೋಮಪ್ರಭಾ ದೇವಿ ಸಮರವಿಜಯದೊಳಾಪಶಿವಭಕ್ತಿಯಬಲದಬಲ್ಮೆಯಂಕೇಳ್ದು॥
ಮ॥ಸ್ರ॥ ಕಳಕಾಂಚೀಕಿಂಕಿಣಿನಿಸ್ವನ ಮುರುತರಮಂ ಜೀರಕಂಚಾರುರಾವಂ|ವಿಳಸನ್ಮಾಣಿಕ್ಯಮೊಳಾಂ ಚಿತವಳಯರವಂನಾಡೆಪೋಣ್ಮುತ್ತಿರಲ್ಕಂಗೊಳೆರಾಜ್ಯಶ್ರೀವಿಳಾಸಂಮಿಗೆನಡೆತರುತಿರ್ದಪ್ಪಳಿಂಬಂದದಿಂಸ|ತ್ಕಳೆಗಿ|ತ್ತಾಚೋಳಭೂಮೀಶ್ವರನಪೊರೆಗೆಸೋಮಪ್ರಭಾದೇವಿ ಬಂದಳ್॥ ೪೧೨॥
ಅಂತುಬಂದು ಸೋಮ ಪ್ರಭಾದೇವಿ ಸೋಮಧರನಂ ಕಂಡುಪಾದಾಬ್ಜದೊಳ್ತನುವಂ ಸೈಗೆಡಪಿಪರವಶಭೂತೆಯಾಗಿರ್ಪಾಗಳ್॥
ಕಂ॥ ಎಲೆಮಗಳೆನಿನ್ನ ಗಂಡನ|ಬಲದೂರ್ಜಿತಭಕ್ತಿ ಗೋತುಬಂದೆಂಮತ್ತೀ ನೆಲನರಿಯೆನಿಮ್ಮನಿರ್ಜರ|ನೊಲವಿಂಕೊಂಡೊಯ್ವೆ ನಲ್ಲಿಗಣಪದವೀವೆಂ॥ ೪೧೪॥
ವ॥ಎಂದುಮುನ್ನಂತಾಂ ಮೆರೆದಮೂನಕಂಜರಾತ್ಮ ಜೆಯಪ್ಪಸೋಮಪ್ರಭಾದೇವಿಯಂರ್ಗ ಭಯಹಸ್ತಮಂಮಸ್ತಕದೊಳಿಟ್ಟು ಮತ್ತಮಾಗಳ್ಸದಾಶಿವನುಮಾದೇವಿಯುರ್ಗಿಂತೆಂದಂ॥
ಕಂ॥ಘುರದೊಳಪ್ಪಂಡ್ಯನನೋಡಿಸಿ,ವರವಿಜಯಶ್ರೀಯ ನಾಂತುಮಮ್ಮೇಷಕೇತ ಳ್ಬಿರಮಿತ್ರವೀರನೆಂಡಘ,ಹರನುಮೆಗಾಚೋಳ ನೃಪನಭಕ್ತಿಯನೊರೆದಂ॥ ೪೧೫॥
ವ॥ಮತ್ತಮಾಗಳ್ಮುಂದೆನಿಂದಿರ್ದ ನಂದಿನಾಥಂಗಿಂತೆಂದಂ॥
ಕಂ॥ ಅಲರೊಂದುಕುಂದೆಲಕ್ಷ್ಮಿಯ|ನೊಲವಿಂಹರಿಯಿತ್ತನೆಂದುಮಚ್ಚ್ವಿತ್ರಿಪರ್ಣಂ,ತಲೆಗೊಟ್ಟಚೋಳ ವಿಭುಗಾ|ರಿಳೆಯೊಳ್ದೊರೆಯೆಂದು ನಂದಿಗೆಂದಂಗಿರಿಶಂ॥ ೪೧೬।
ವ॥ಎಂದಿಂದುಧರಂಚೋಳನಭಕ್ತಿಯಬಲಮಂ| ನಂದಿನಾಥಂಮೊದಲಾದಪ್ರಮಥರ್ಗೆಪೇಳ್ದು ಕೊಂಡಾಡುತ್ತಂಮತ್ತಮಾಗಳ್ಮಣಿಮಯಪುಷ್ಪಕಮುಂಬರಮೇಳ್ದಾಗಳ್|
ಕಂ| ದಶದಿಶೆಯಂಬೆಳಗುತ್ತಂ । ವಿಶದವೃಷಧ್ವಜಮದೊಪ್ಪೆದಿವ್ಯವಿಮಾನಂ॥ಶಶಿಧರನಭಕ್ತಚೋಳನ ಯಶಃಪ್ರಭಾಪುಂಜದಂತೆಬಂದುದಾಗಳ್|

ವ॥ಅಂತುಪುಷ್ಪಕಂಬರಲ್ಪದಾಶಿವಂಕಂಡು ಪರಮಕರುಣ।ವಿುಗಲ್ಕಾಗ ಳ್॥

ಕಂ॥ಕಡಿದಜಡೆವಲೆಗೆವಪುವಂ,ತಡೆಯದೆಮೃಡನಿತ್ತು ನಲವಿನಿಂದಬ್ಬಿಸ ಲಂ।ದಡಿಗೆರಗಿಚೋಳನವರ್ವೆರ್ಸ ಸಡರ್ದಂಪುಷ್ಪಕ ಮನಾತ್ಮಸತಿಸಹಿ ತಾಗಳ್॥ ೪೧೮॥

ವ॥ಪೊರೆಯೊಳ್ಮಾನಿನಿಮುಂದೆಭಕ್ತನಿರದೊಪ್ಪಲ್ಕಾಪಗಲ್ಪೋಳ ಭೂ ವರನತ್ಯುನ್ನತದಿವ್ಯಪುಷ್ಪಕದೊಳಾ ಕಾಶಾಧ್ವದೊಳ್ಬಾರುನಿ। ಜರ್ಜ ಕಾಂತಾತತಿ ನೃತ್ಯಮಾಡೆಸುರಭೇರೀನಿಸ್ವನಂ ಪೊಣ್ಮಿನಿ।ರ್ಭರದಿಂಬಂ ದುನೆಗಳ್ದ ತಾರಗಿರಿಯಂಪೊಕ್ಕಂ ಮಹೋತ್ಸಾಹದಿಂ॥ ೪೧೯॥

ಅಂತುಪೊಕ್ಕು।

ಕಂ॥ಕೈಲಾಸಗಿರಿಗೆಬಂದತಿ।ಲೀಲೆಯೊಳೋಲಗಮನಿತ್ತುಸುರರುಪೊಗಳು ನಲಾ।ಚೋಳಂಗೆಚೋಳನರಸಿಗೆ ಚೋಳನಭಕ್ತಂಗೆಶಂಭು ಗಣಪದ ವಿತ್ತಂ॥ ೪೨೦॥

ವ॥ಅಂತುಗಣಪದಮನಿತ್ತುಕಂ ತುಹರಂಸಂತಸದಿಮತ್ತ ಮಿಂತೆಂ ದಂ॥

ಕಂ॥ನುತಸೋಮಪ್ರಭೆತನ್ನಯ।ಪಿತನಾಜ್ಞೆಗೆಮುಡಿ ಯನಿತ್ತಳಿಂದೀ ಚೋಳಂ।ಮತಿಮಿಗೆತಾಂಮುಡಿದಲೆಯಂ,ಕ್ಷಿತಿ ಮೆಚ್ಚಲ್ಕೊಟ್ಟನೆಂದು ಪೊಗಳ್ದನುಮೇಶಂ॥ ೪೨೧॥

ಪದೆದುಪಗಲ್ಪೋಳನವೀ.ರದಪೆರ್ಚಂಪೇಳ್ದು ಬಿಡದೆಕೊಂಡಾಡುತ್ತೆಗ್ಗ ದಮುನಿಗಳ್ಪೊಗಳುತ್ತಿರೆ।ಮದನಾಂತಕನೊಪ್ಪು ತಿರ್ದನಾಸ್ಥಾಯಿಕೆ ಯೊಳ್। ೪೨೨

ಗದ್ಯ॥ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮ ರೀಚೆಪುಂಜ ರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪ ಶ್ರೀಸೋಮನಾಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತ ಮಪ್ಪತ್ರಿಷಷ್ಟಿಪುರಾತನ ರಚಾರಿತ್ರದೊಳ್ ಪಗಲ್ಪೋಳ ರಾಜಮಹೇ ಶ್ವರಕಥಾವೃತ್ತಾಂತಂಚತುರ್ವಿಂಶತ್ಯಾಶ್ವಾಸಂಸಮಾಪ್ತಂ

ಶ್ರೀ

## ಇಪ್ಪತ್ತೈದನೆಯ ಆಶ್ವಾಸಂ
## ಸೇದಿರಾಜಯ್ಯಗಳ ಕಥನಂ

ಧುರಧೀರಸೇದಿ ರಾಜಂ। ಗುರುತರ ಗಣಪದಮನಿತ್ತು ಸುರತತಿಪೊಗಳು ತ್ತಿರೆ ಮೆರೆದೊಪ್ಪುವ ಪುಲಿಗೆರೆ। ಪುರಪತಿಸೋಮೇಶ ನೊಲ್ದು ಪಾಲಿಕೆನಮ್ಮಂ॥ ೧

ಉ॥ ಚೋಳಧರಿತ್ರಿ ಯೊಳ್ವರತಟಾಕಚಯಂಗಳಿನಿಕ್ಷುವಾಟಿಯಿಂ ಶಾಲಿಯ ಕೆಯ್ಗಳಿಂ ವರವನಾವಳಿಯಿಂ ಘನದುರ್ಗದಿಂದೆಸಾ। ಧಾಳಿಗಳಿಂ ಶಿವೈಕ್ಯ ಭವನಂಗಳಿನುನ್ನತಿ ವೆತ್ತನೇಕಲಿಂ; ಗಾಲಯ ದೋಳಿಯಿಂದೆ ತಿರಿಪೋವಲು ಮೆಂಬಪುರಂ ವಿರಾಜಿಕುಂ॥ ೨

ಕಂ। ಅದು ಶಿವಭಕ್ತರ ನೆಲೆವನೆ। ಯದುಧನಿಕರಜನ್ಮಭೂಮಿಯದು ಸುಖಪಡೆಯಂ। ತದುಸಕಲಧರ್ಮದಾಗರ ಮದು ಕೀರ್ತಿಯಸದನವೆನಿಸುತೆಸೆವುತ್ತಿರ್ಕುಂ॥ ೩

ಈತೆರದಿನೆಸೆವ ಪುರದೊ। ಳ್ಭೂತೇಶ ಪದಾಬ್ಜ ಭಕ್ತಿಯುಕ್ತಂಲೋಕ। ಖ್ಯಾತಂಚೋಳಾನ್ವಯಸಂ। ಜಾತಂಕಲಿಸೇದಿರಾಜ ನೆಂಬಂಮೆರೆದಂ॥

ಮ। ಅರಿಷಡ್ವರ್ಗಂಗಳೆಂದೆಂಬುರುಮೃಗತತಿ ಯೊಳ್ಬೇಂಟೆ ಯಾಡುತ್ತ ಪತ್ತಾ। ಸುರದಿಂ ಮಾಯಾತ್ಮಪಂ ಚೇಂದ್ರಿಯಮೆನಿಪಹಿಪ ಕ್ಷ್ಮಾಪದೊಳ್ಕಾಡುತಂಬಂ। ಘುರಭಕ್ತಿಜ್ಞಾನಮಂ ಪಾಲಿಸುತಮುಭವಕಾರುಣ್ಯದಿಂ ದೊಪ್ಪುವಂ ಭಾ। ಸ್ಕರತೇಜಂ ಪುಣ್ಯಬೀಜಂಬುಧ ಜನದಿ ವಿಜೋವೀಜನಾ ಸೇದಿರಾಜಂ॥ ೫

ಕಂ। ಹರಭಕ್ತ ಸೇದಿರಾಜನೊ। ಳಿಡವ ತಾನತ್ಯುದಾರರೆನಿಪ ಮಾರ್ತಾಂ। ತರಿನೃಪರ ಮತ್ಯರೆನಿಪ। ನಿರುತಂ ಪರಿಕಿಪೊಡೆ ಧರೆಯೊಳಿಂತಿದುಚಿತ್ರಂ॥ ೬

ಹರಭಕ್ತ ರ್ಬರೆನಲಿವಂ। ಹರಭಕ್ತರ ಮೂರ್ತಿ ಗಂಡೊಡು ರ್ಬಸನೊಲವಿಂ। ಹರಭಕ್ತತ ನ್ನಸುಪೆಂ। ದಿರುತಿರ್ಪಂಸೇದಿರಾಜನು ರ್ಜಿತತೇಜಂ॥ ೭

ಬೇಳ್ಪುದ ನೀವಂಭಕ್ತ। ರ್ಗೊಲ್ಪಂ ಶಿವಲೀವಂತರೆಂದುದನನಿಶಂ, ಮಾಪ್ಪಂ ಶಂಕರಭಕ್ತನ. ನಲ್ಪುಬಳಂ ಸೇದಿರಾಜನುರ್ವೀತಳದೊಳ್॥ ೮

ವ। ಅಂತೀಪರಿಯೊಳುದಿತ ಪ್ರತಾಪದಿಂದಿರುತಿರ್ಪ ಸೇದಿರಾಜನೊ

ಳ್ದಾಯಾದನೆಂಬ ಮನ್ನೆಯನೊರ್ವಂ ಪರದೇಶದೊಳಿರ್ದನಂದತಿ ಬಳಕ್ಕ ರಿತು ರಗ ರಥಪದಾತಿವೆರಸುತಿರು ಪೋದಲೂರ್ಗೆಬಂದು ಕಾದಲ್ಕೆಂದಿದಿರಾಂತಿರ್ಪಾಗಳ್॥

ಚಂ॥ ಧರೆಬೆದರಲ್ಕೆ ತನ್ನಚತುರಂಗ ಬಲಂಬೆರಸುಗ್ರಕೋಪದಿಂ। ಪರಿದು ಪಳಂಚೆ ವೈರಿಬಳಮಂ ನೆರೆತಳ್ತಿರಿದಿಕ್ಕಿ ತದ್ರಣೋ। ರ್ವರೆಯೊಳೆ ಸೇದಿರಾಜ ನರೆಯಟ್ಟೆ ಬರುತ್ತಿರೆ ಲಜ್ಜೆಗೆಟ್ಟುಭೀ ಕರತೆಯೊಳೋಡಿದಂ ವಿಗೆಪರಾಜಯದಿಂ ಪಗೆಯಪ್ಪ ಮನ್ನೆಯಂ॥

ವ॥ ಅಂತು ಸಂಗ್ರಾಮದೊಳ್ದಾಯಾದ್ಯನೆನಿಪ ಮನ್ನೆಯನನೋಡಿಸಿ ನಿಜ ಭುಜದೊಳ್ವಿಜಯಲಕ್ಷ್ಮಿಯನಾಂತು ನಿಜಪುರಮಂ ಪೊಕ್ಕುಸುಖದಿಂದಿರುತ್ತೊಂದು ದಿವಸಂಪ್ರಭಾತಸಮಯದೊಳ್॥

ಕಂ॥ ಲಲನೆಯರಿಕ್ಕುವ ಚಾಮರ। ಕುಲದೊಳ್ಜಯ ಜೀಯೆಂಬಪಠದಳರುಲಿಯಲ್। ಕಲಿಸೇದಿರಾಜನಾಗಳ್। ನಲವಿಂದಂಬಂದುಪೊಕ್ಕನಾಸ್ಥಾಯಿಕೆಯೊಳ್॥ ೧೦

ವ॥ ಅಂತುಪೊಕ್ಕು ಸಕಳಸಾಮಂತ ದಂಡನಾಥ ಮಂಡಳಿಕ ಸಚಿವೇಂದ್ರಮುಖ ಪರಿಜನಂಬೆರಸುಸೇದಿರಾಜನೊಡ್ಡೋಲಗಂಗೊಟ್ಟುಕುಳ್ಳಿರ್ದಿರಲಿತ್ತಲ್॥

ಕಂ॥ ಮುನ್ನಂಬನ್ನದಿನೋಡಿದ। ಮನ್ನೆಯನುರೆಕಾ ಯುದ್ಧ ನಾಲ್ಕೆಪಾಯದಿಜಯದೊ ಪ್ಪಂನೆರೆಕಾಣವೆ ಚಿಂತಿಸಿ। ದಂನರಕಡಪರಮಸೀಮೆಯಂತನ್ಮನದೊಳ್॥ ೧೧

ವ॥ ಅಂತಾ ಪಗೆಯಪ್ಪ ದಾಯಾದ ಮನ್ನೆಯಂ ತನ್ನಮನದೊಳ್ ಕಷ್ಟಬುದ್ಧಿಯನೊಂದಂ ಚಿಂತಿಸಿ ಸೇದಿರಾಜನಂತವಿಸಿ ಕಳಿಕ ನಾನನೇಕರಾಜ್ಯದೊಳಸ್ಸುಖದಿಂ ಬಾಳ್ವೆನೆಸುತ್ತಂ ಕುಹಕ ತಪಸ್ವಿ ವೇಷಮಂ ತಾಳ್ದಾಗಳ್

ಕಂ॥ ಭರದಿಂಮಾಟಪಜಡೆಯಂ. ಧರಿಯಿಸಿಪೋ ಗೆಕಾಪಿಭಸಿತ ರುದ್ರಾಕ್ಷಗಳಂ॥ ಪಿರಿದುಂತನುವಿನೊಳಳವಡಿ, ಸಿರುತಂತಾಕುಟಿಲತಪಸಿ ವೇಷಮನಾಂತಂ.। ೧೨

ವೃತ್ತಂ

ಖಳನಾತ್ಮಕುಟಿಲ ಮನವಂ, ನೆಲೆಗೊಳಿಪಂ ತೊಂದುಗುರಗಿಯಂ ಕ

ಪೞಗೆಯೊಳ್! ಸಲೆಬೈತು ಕೌಂಕುಳೊಳ್ತಳೆ, ದೋಲವಿಂ ಮುನಿವೇಷ ದಿಂದಮೀಂತಿರುತಿರ್ದನಂ||

ನೆರವುೞದು ಧರೆಗೆ ಪೊರಗಣ| ಬರಿವೇಷಂತೀವ್ರ ತಕದಿಕರ್ವರ್ಮಂ ಮನ ಮುಂ| ಮರೆಗೊಂಡಿರ್ದುದು ಪೈಯೊಳ್| ತರಿಸಂದೆಸೆದತ್ತು ಗೋಮುಖವ್ಯಾಘ್ರತ್ವಂ|| ೧೪

ಇಂತು ಶಿವಭಕ್ತವೇಷಮು| ನಾಂತುಖಳಂ ಸೇದಿರಾಜನೂರಂ ಪೊಕ್ಕು| ಸ್ವಂತ ಶಿವಾಗಮ ಘೋಷಿದ| ಸಂತೆ ಸೆವುತ್ತೋತುವೀಧಿಯೊಳ್ಬರುತಿರ್ದನಂ|

ವ| ಅಂತುತತ್ಖಳಂತಾಪಸವೇಷಮುಂ ಬೀರುತ್ತಂ ರಾಜಮಂದಿರಮುಂ ಪೊಕ್ಕು||

ಕಂ| ವಾಜಿಡೆ ಘಸಿತಂಕಾಕಾಂ| ಬರರುದ್ರಾಕ್ಷೆಯನು ಪಿಡಿದುಕವಳಿಗೆತನಗೆ| ಪ್ಪಿರೆ ಮುನಿವೇಷದಿಕುಟಿಲಂ| ಬರೆ ಕಂಡಂ ಸೇದಿರಾಜನೊಳ್ದಿದಿರದ್ದಂ|| ೧೬

ವ| ಅಂತಿದಿರೆದ್ದು ಪೋಗಿಸೇದಿರಾಜಂಕುಟಿಲವೇಷದಮುನಿಪಂಗೆಸಾಷ್ಟಾಂಗದಂಡ ಪ್ರಣತನಾಗಿ ಕೈಗೊಟ್ಟುತಂದು ರತ್ನಪೀಠದೊಳ್ಕುಳ್ಳಿರಿಸಿ ಭಯಭಕ್ತಿಯಿಂ ಚರಣಪ್ರಕ್ಷಾಳನಂಗೆಯ್ದು ಪಾದತೀರ್ಥಮುಂ ಮಸ್ತಕದೊಳ್ತಳೆದಾನಂದದಿಂ ಮನವೆಯ್ದೆ ರೋಮಾಂಚ ಕಂಚುಕಿತ ಗಾತ್ರನಾಗಿ ದೇವನಿಮ್ಮಡಿಗಳ ದರುಶನದಿಂ ಕೃತಾರ್ಥನಾದೆನೆನುತ್ತಂಕೈಗಳಂಮುಗಿದು ನಿಮ್ಮಡಿಗಳಿಮ್ಮ ನೀಕ್ಷಿಸಲ್ಬಂದ ಕಜ್ಜಮಾವುದೆಂದು ಕರುಣಿಪುದೆಂದುಬಿನ್ನೈಸಲ್ಕಾಗಳ್||

ಕಂ| ಎಮಗೊಳ್ಳಿತಪ್ಪಶೈವಾ| ಗಮುಸಾರಂದೊರಕಿತದಕೆ ನೀಂಪಾತ್ರನೆನು| ತ್ತಮನೋಭಾವದಿತಂದೆಂ| ಪ್ರಮೋದದಿಂದರಸ ಕೇಳ್ಬಲ್ಲವೋಕ್ಷಂ| ೧೭

ಪರಮ ರಹಸ್ಯವಿದಂಸ| ದರದಿಂಪೇಕಾಂತದಲ್ಲಿ ಪೇಳ್ವೆಂನಿನಗಾ| ನರನಾಕವಳಿಗೆಯಿದೆಕೇಳ್| ಧರೆಯೊಳ್ಮುಂಕಂಡು ಕೇಳ್ದುದಿಲ್ಲೆನುತಿರ್ದಂ

ವ| ಎಂದುಪೇಳ್ದ ಕುಟಿಲನಪ್ಪ ಮುನಿಪನವಾಕ್ಯಮುಂ ಸದ್ಭಕ್ತಿಯಿಂಕೈಕೊಂಡು ಸೇದಿರಾಜಂ ಚರಮಾನಂದದಿಂ ನಿಜಾಸ್ಥಾನ ದೊಳಿರುತಿರ್ಪನ್ನೆಗಂ||

ಪಲಿಂಗಕ್ಕರ್ಚನೆಯಂಮಾಳ್ಪೆನೆಂದುದ್ಯುಕ್ತನಾಗಿ॥
ಕಂ। ಘನಮಾರ್ಗವ ನಲ್ಲಿರಿವು। ತ್ರಿನ ಬಿಂಬದತೆರದಿ ನೆಸೆವಪೊಂಗಳ ಸದಪಾ॥ ಪನ ಲಿಂಗವಾಲಯಕ್ಕತಿ। ವಿನಯದಿ ನಮಿನಂದಿಯಡಿಗಳರ ದೇಳ್ತಂದಂ॥
ವ। ಅಂತೇಳ್ತಂದುನೊಳ್ಪಲ್ಲಿ
ಕಂ। ಜ್ಯೋತಿರ್ಲೋಕಂ ನಲವಿಂ। ಭೂತಳಕೇಳ್ತಂದ ತೆರದಿಬೆಳಗುವದೀಪ। ವ್ರಾತದಿ ನೊಪ್ಪುವ ಲಿಂಗನಿ। ಕೇತನಮಂಪೊಕ್ಕು ಭಕ್ತನೀಕ್ಷಿಸುವಾಗಳ್॥
ಪೊಡವೊಡುವ ಕುಣಿವಪಾಡುವ। ಬಿಡದೊಲವಿಂ ಪೊಗಳ್ವಭಕ್ತಜನಮಂನೊಡು। ತ್ತಡಿಗಡಿಗಾಹಾವೆನುತಂ। ಕಡುಸೊಗಸಿಂ ಲಿಂಗವೆಡೆಗೆಬಂದಂಭಕ್ತಂ॥
ವ॥ ಅಂತು ಬಂದತುಳೋತ್ಸಾಹದಿಂಜಯಜಯನಮಃಶಿವಾಯಎನುತ್ತಂಸವಿಾಪದೊಳ್ಪದ್ಮಾಸನಮ ನಳಂಕರಿಸಿ ಯೋಗವೊಕ್ತಿಯಿಂದವಿಭೂತಿರುದ್ರಾಕ್ಷೆಗಳಂತಾಳ್ದು ಸಂತೋಷಾನಂದದಿಂದಷ್ಟವಿಧಾರ್ಚನೆಯಂಮಾಡಿ ಕ್ಷಿರಸ ಣ ವ ದೊಳ್ಮುಡಿಮುಳುಗಾಡಿ ಗದ್ಗದಕಂಠತೆಯಿಂಪರಮಾನಂದಾಶು। ಜಲಭರಿತನಯನನಾಗಿ ನಮಿನಂದಿಯಡಿಗಳ್ಪಲಿಂಗಮಂಬೀಳ್ಕೊಂಡುನಿಜಗೃಹಕ್ಕೆಬಪ್ಪಾಗಳ್॥
ಕಂ। ಪೊಡವಿದೆಸೆ ಯಾಗಸಂಗ। ಳ್ಪಿಡೆಕಾಣಲ್ಬಾರ ದಂತಿರಾದುದ ನೋಡ ಲ್ನಡುವಿರುಳಿಡಿದ ತಮಾಂಧದಿ। ಕಡುಮಳೆತಾನಭ್ರದಿಂದಮುದನೇವಗಳ್ವಿಂ॥
ಉ। ಘೋರತಮಂಘಡೊಸ್ಸಿಡಿಲ ಗರ್ಜನೆಯೊಳ್ಪನೆವೃಷ್ಟಿಯೊಳುಯ್ಯಃಪೂರದೊಳುರ್ವಿ ಚಂಚಳಿಪ ಮಿಂಚಿನೊಳಂ ಜಿಪಭೂತಯೂಥದೊಳ್। ಧೀರತೆಯಿಂದಮುತ್ಕಟದ ಭಕ್ತಿಯೊಳೆಳ್ತ ಕುತಿರ್ದ ನಂದಪ ಣಾ ರಮಣಾಂಘ್ರಿಯಂನೆನವುತಾ ನಮಿನಂದಿಯಡಿ ಪ್ರಮೋದದಿಂ॥
ಕಂ। ಇರುಳಾಮಳೆಯೊಳ್ಪರುತಂ ಕೇರಡೆಂದಿರಲೆಡಹಿ ನೊಂದು ಬೀಳುತ್ತ ತ್ಯಾ। ಸುರದಿಂದಾ ಪೂರೊಡೆಯನೆ। ಶರಣೆನೆ ನಮಿನಂದಿಯಡಿಯನೆತ್ತಿದನೀಶಂ॥

ಘನಭಕ್ತಿರಸದಿ ಪೆರ್ಮರ್ಗರು| ಳೆನಿಸುವ ನಮಿನಂದಿಯಡಿಗೆ ಸ್ವೈ ಗೊಟ್ಟಶುಭಂ| ಜನನೇತ್ರ ಪುಗನೆ ನೊಂದೆಯ| ಯೆನುತಂಮೆಯ್ದುಪ ವಿರಹುದೋರಿದನಾಗಳ್||

ತುರಂಗವೃತ್ತಂ! ಪಿಂಗಳಚಾರುಜಟಾ ಮಕುಟಂದಿ ವಿಜಾಪಗೆ ಚಂ ದ್ರಮನನ್ನಿದೃಶಂ| ತುಂಗಭುಜಂಗ ಮಕುಂಡಲ ಮುಗ್ಧವಿಷಂ ನೃಕ ರೋಟಿ ವಿಭೂತಿಕಪಾಂ| ಲಂಗಜಕೃತ್ತಿಸಹಾ ಮಳಪಾದಯುಗಂ ಮೆ ರೆಯಲ್ಕಗಜಾಸಹಿತಂ| ಮಂಗಳಬಾಹುದಶಂಗಳಿ ನೈದುಮೊಗಂಗಳ ನೊಪ್ಪಿದನಂದಭವಂ||

ವ| ಅಂತೊಪ್ಪುವ ಶಿವನದಿವ್ಯಮೂರ್ತಿಯಂಕಂಡು ಬೆಚ್ಚಿದಂತಾಗಿಚ ರಣಧೊಳ್ಸೈಗೆಡೆದು ಪೊರಳ್ದು ಪೊಟ್ಟೆಯಂ ಪೊಸೆದುಕೊಂಡು ಭಕ್ತಿರಸೋದ್ರೇಕದಿಂ ಕಡುನೇಹದಿನಭವನನೇಕನಚಿಂತ್ಯನೆಂದರಿಯ ಧೆತನ್ನಂತೆಬಗೆದಕಟಕಟಪೇನಿರ್ದೇನತ್ಯಂತಪರಮಸುಖಸ್ವರೂಪನಪ್ಪ ನಿಮ್ಮಡಿಗಳ್ಳೀಮಳೆಯೊಳೀರಾತ್ರಿಯೊಳ್ನೀಂತನ್ನನೆತ್ತಲ್ಬರ್ಪರೆ ದೇವಾ ಯೆನುತ್ತಂ ನಿಜನಯನದಿಂ ಬಾಷ್ಪಧಾರೆಗಳಂ ಸುರಿವುತ್ತಂನಮಿನಂದಿ ಯಡಿಗಳ್ಕೈಗಳಂಮುಗಿದಿಂತೆಂದರ್||

ಕಂ| ಮೃಡನೀಂಬರ್ಪುತೆ ನಿತೆಡೆಗಳೊ| ಳೆಡಪಿದೆಪೇಳ್ತಂದೆನೊಂದೆ ಯೆಸ್ಪುತುಮ್ಮಳಿಸು| ತ್ತಡಿಗೆರಗಿದರ್ಾ ಮುಗ್ಧನ| ನುಡಿಗೆಕರಂಮೆಚ್ಚಿ ಪರವನೆರೆಯೆನಲಾಗಳ್||

ವರವಂ ಬೇಡೆನೆ ಮಳೆಯ| ಪ್ಪಿರುಳೆಂದುಂ ಮನೆಯಬಾಗಿಲಿಂ ಪೊ ರಮಡದಿ| ರ್ಪುರಹರಯನ್ನಾಣೆ ಯೆನು| ತ್ತಿರೆಭಕ್ತನಮುಗ್ಧನುಡಿಗೆ ಮೆಚ್ಚಿಂತೆಂದಂ||

ಇಂದುವೊದಲಾಗಿ ಮಳೆಯೊಳ| ಗೆಂದುಂ ಪೊರಮೊಡೆಯೆನುತ್ತ ಪರಮಂನಗುತಿ| ತ್ತಂದಭವನೋತು ಘನಕೃಪೆಯಿಂದಂನಮಿನಂದಿಯ ಡಿಯನೋವಿದನಾಗಳ್||

ವ| ಅಂತೋವಿ ಭಕ್ತವತ್ಸಳನಪ್ಪ ಮರುಳ್ಗಳೊಡೆಯನಾನಮಿನಂದಿ ಯಡಿಗಳಭಕ್ತಿಯುನ್ನತಿಯಂ ನಂದಿನಾಥಂಗೆ ಪೇಳ್ದುಕೊಂಡಾಡುತ್ತಂ ತಾಂಬರಿಸಿದದಿವ್ಯ ವಿಮಾನದೊಳ್ನಮಿ ನಂದಿಯಡಿಗಳಂ ಕುಳ್ಳಿರಿಸಿನಿಯಾ ಮಿಸಲ್ಕಾಗಳ್||

ಕಂ॥ ಧರೆಯೊಳ್ಪೂವಳೆ ನಭದೊ! ಳ್ಸುರಭೇರೀ ರಾವಮೆಸೆಯಲಾ
ಶಿವಭಕ್ತಂ। ಚಿರಸುಮಣಿಪುಷ್ಪಕಂಸಾ। ದರದಿಂದಂ ರಜತಗಿರಿಗೆಬಂದು
ತ್ತಾಗಳ್॥

ವ॥ ಅಂತುಬಂದನಮಿನಂದಿಯಡಿಗಳ್ಪುರಸುರ ಜಟಾಚಳಾಸ್ಥಾನಮಂ
ಟಪದೊಳ್ಸಕಲ ಗಣಂಗಳ್ಸಹಿತಂ ಮಹೇಶ್ವರಂ ಮಹಾಸುಖದಿಂದೊ
ಡ್ಡೋಲಗಗೊಟ್ಟಿರ್ದಾಗಳ್॥

ಕಂ॥ ಮಿಗೆಸೊಗಸಿಂಸುರ ಮುನಿಗ। ಳ್ಪೊಗಳಲ್ನಮಿನಂದಿ ಪಡೆಗೆ
ಗಣಪದಮಂಕೊ। ಟ್ಟಗಧರನಮಿತ ಪದಾಂಬುಜ।ಯುಗಶಂಕರನೊ
ಪ್ಪುತಿರ್ದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರಚಾರಿತ್ರದೊಳ್ನಮಿನಂದಿ ಮಾಹೇಶ್ವರಕಥಾವೃತ್ತಾಂ
ತಂಸಪ್ತತ್ರಿಂಶದಾಶ್ವಾಸಂ॥

— ಶ್ರೀ —

## ಮೂವತ್ತೆಂಟನೆಯಆಶ್ವಾಸಂ

### ವೇಳ್ಳೂಕ್ತ ಮಾಹೇಶ್ವರಕಥಾವೃತ್ತಾಂತಂ

ಗುರುಪಾದಭಕ್ತಿಯಿಂತ। ಚ್ಚರಣಜನಂ ಮೆಚ್ಚೆ ಮೆರೆದವೇಳ್ಳೂಕ್ತಗರ್ಶ
ದರದಿಂ ಗಣಪದವಿತ್ತಾ। ನಿರುಪಮಸೋಮೇಶನೊಲ್ದು ಪಾಲಿಕೆನೆ
ಮ್ಮಂ॥ ೧

ಘನಚೋಳ ಧರೆಯೊಳೆಲವಿಂ। ಘನಧಾನ್ಯದರ್ಜನನುಳ್ಳಭಕ್ತಾಗ್ರದೆ
ಭೂ। ವಿನುತಮಣಮುಂದ ಪುತ್ರ। ರನಿಶಂ ಸತ್ಕೀರ್ತಿವೆತ್ತುರಂಜಿಸು
ತಿರ್ಪ್ಪಂ॥ ೨

ಗುರುಭಕ್ತರ ಹರಭಕ್ತರ। ವರಜಂಗಮಭಕ್ತರಾ ಲಯಂಗಳ್ಸಪೆದಾ।ದ
ರದಿ ಮಣಿಮುಂದಪುತ್ರ। [illegible] ಯ ಶ

ಧಿಂ॥

ಚಾರುತರರಥ್ಯಾಶಧಿನಿರುತಿ| ಪ್ರುರೋಳ್ವೇಳ್ಯೂತನೆಂಬ ಮಾಹೇಶಂಗಾ| ೨
ರೀರಮಣನಕೃಪೆಯಿಂದಂಥಾರಿಣಿಗಾಶ್ಚರ್ಯವೆನಿಪಭಕ್ತಿಯೊಳಿರ್ದ||

ವ॥ ಪುತ್ತಮಾಮಣಿಮುಂಡಪುತ್ತೂರೊಳಧಿಕ ಶೈವಾಚಾರ್ಯರೆನಿಸುತಿರ್ಪರವರಿಂ ಸದ್ಗುರುಕಾರುಣ್ಯಮುಂ ಪಡೆದು ಗುರುವೆಲಿಂಗವೆಂದು ಕಂಡುದಾಸ್ಯಭಾವದಿಂ ಗುರುವಾಜ್ಞೆ ಗುರುಕೃಪೆಯಾರ್ಯನ ಶುಶ್ರೂಷೆ ಸೇವೆಪ್ಲಕವೃತ್ತಿ ಪಾದೋದಕಪ್ರಸಾದವೆಂಬೀ ನಿಯಮಮಂ ಶಿಷ್ಯತನದಗುಣಮುಂಬೀರುತ್ತಂ ಸಂಮುಖಸಮಾಸನ ಸಮಪಙ್ಕ್ತಿಯೆಂಬಿವಂಬಿಟ್ಟ ಅಹಂಕಾರವಳಿದು ಕಿಂಕರವೃತ್ತಿಯಿಂ ವೇಳ್ಯೂತಮಾಹೇಶ್ವರಂ ಗುರುಭಕ್ತನೆನಿಸುತಿರ್ದನಂತುಮಲ್ಲದೆಯುಂ

ಕಂ॥ ಮೂವತ್ತಾರುಂತತ್ತ್ವಂ| ಜೀವಂಶಿವತತ್ತ್ವವೆಸೆವ ಶಿವತತ್ತ್ವದಸ| ಜ್ಜೀವಂಗುರುತತ್ತ್ವಮೆನು| ತ್ತಾವಂಗುರುಭಕ್ತನೆನಿಸಿದಂ ವೇಳ್ಯೂತಂ॥ ೩॥

ವ॥ ಅಂತಾವೇಳ್ಯೂತಂಮನೋವಾಕ್ಕಾಯಂಗಳೆಂಬೀ ತ್ರಿಕರಣಶುದ್ಧಿಯಿಂಸತೀಪುತ್ರರಂ ವ್ಯವಸ್ಥಾಯಮುಮಂ ಮರೆದಿರುಳಂ ಪಗಲುಂ ಬಿಡದೆಗುರುಪಾದ ಭಕ್ತಿಯಿಂ ಮರುಳಾಗಿ ಗುರುಮಂದಿರದಬಾಗಿಲಂ ಕಾವುತ್ತಿರ್ಪುದುಂ ತದ್ಗುರುಗಳ್ ಕೃಪೆಯಿಂಕರೆದು ಪಾದಸಮೀಪದೊಳ್ಕುಳ್ಳಿರಿಸಿ ಗುರುವಚನಮ ಲಂಘ್ಯಂಶಿಷ್ಯರ್ಗದು ಕಾರಣಂ ನೀನೆನ್ನಾಜ್ಞೆಯುಂ ಕೈಕೊಂಬುದೆನುತ್ತಿಂತೆಂದರ್॥

ಕಂ॥ ಎಲೆಮಗನೆ ನಮ್ಮಪಾದಮ| ನಲವಿಂ ಬಿಸಲಾರದಿರ್ದೊಡೀ
ಪಾದುಕೆಯುಂ| ಸಲೆತಾಳ್ದಾದೊಡೆಯುಂ ನಿಜ| ನಿಳಯಕ್ಕಂಪೋಗಿಭಕ್ತ ೪
ನೆನಿಪುದು ಜಸದಿಂ|

ವ॥ ಎಂದೊಡಾವೇಳ್ಯೂತಂ ಗುರುವಾಜ್ಞೆಯುಂ ಮಾರಪೆಹಸ್ತದಿಂನುತ್ತಂ ಕೈಕೊಂಡು ತನ್ನನಿಳಯಕ್ಕೆಳ್ತಂದು ಶ್ರೀಗುರುಪಾದುಕೆಗಳಂ ತಮ್ಮಮಸ್ತಕದೊಳ್ಪೊತ್ತು ನೂತನೋತ್ಸಾಹದಿಂ ಬಿಗಿದುಸುತ್ತಿ ದೃಢೀಕರಿಸಿ ಭಯಭಕ್ತಿಯಿಂ ನಾನಾವಿಧದರ್ಶನೆಗಳಿಂ ತಿರೋಹಿತಮುಂಮಾಡಿ ನಲಿಪಾಡಿಪಾಡಿ ಲಿಂಗಮೂರ್ತಿಗಳಪ್ಪ ಮಾಹೇಶ್ವರರ್ಗೆ ಜಿಗಳೆಯುತ್ತುಂ [illegible] ನಂತುಮಲ್ಲದೆ

ಯುಂ||
ಕಂ|| ಗುರುಭಕ್ತಿಯ ಮರುಳಿನಿಸು| ತ್ತುರುತರ ಸಂವತ್ಸರಂಗಳುಂಪಿರಿದಾಗು| ತ್ತಿರೆಶಿವನಂದಾವೇಳ್ದ್ಕೊ| ತರಮನಮಂ ನೋಡಲೆಂದು ಬರುತಿರ್ಪ್ಪಗಳ್| ೭|
ಮ|| ಪರಕಾವೇರಿಯನೊಲ್ದು ಮಿಂದು ಘನಸರುದ್ರಾಕ್ಷಾಳಿಯಂ ತೊಟ್ಟು ಬಂ| ಧುರಭಸ್ಮಾಂಕಿತನಾಗಿ ತದ್ಗುರುಶಿವಾಂಘ್ರಿ ಧ್ಯಾನಮಂತಾಳ್ದುತ| ಚ್ಛಿರದೊಳ್ ಪೊತ್ತೆಸೆದಿರ್ಪ ಪಾದುಕೆಗಳಂ ಸದ್ಭಕ್ತಿಯಿಂ ಪೂಜಿಸು| ತ್ತಿರೆ ವೇಳ್ದ್ಕೊತರಮುಂದೆ ಬಂದುಗಿರಿಶಂ ನಿಂದಿರ್ದನಾನಂದದಿಂ||
ಕಂ|| ಫಣಿಗಣ್ಣದಿ ಶಶಿಕೆಂಜಡೆ ಫಣಿಗಳ್ಮೆರೆವೈದು ಮೊಗದಿಶಸ್ತ್ರಾ ಘದಸಂ ಪಣಿಯದಶಬಾಹುವಿಂವಾ| ರಣಮುಖಪಿತಪೋತುಮೂರ್ತಿಯಿಂನಿಂದಿರ್ದಂ|| ೯|
ವ|| ಅಂತುದಿವ್ಯಮೂರ್ತಿಯಂಮಸ್ತಕದೊಳ್ಗುರುಪಾದುಕೆ ಯಿರಲ್ಲಿವಾಗನೆಂದು ಕೊರಹಚ್ಚಿದೊಳಿರಗಲ್ ಛಲಕ್ಕೆಕರೆಗೊರಳಂಜಿಕಗುವಿಡಿದುವೇಳ್ದ್ಕೊತಂ ಗಳ್ಕರಿಂದಿಂತೆಂದಂ||
ಕಂ|| ವನಜಾಸನಂಗಗೋಚರನೆನಿಪನ್ನಂ ನಿನಗೆತೋರಲೆರಗೆಯದೇಕೆಂದೆನೆವೆ| ಳ್ದ್ಕೊತಂಕೈಮುಗಿದನುವಯದಿಂ ಚಂದ್ರಮೌಳಿಗಂದಿಂತೆಂದಂ|| ೧೦|
ಚಂ|| ಘನಗುರುಲಿಂಗಮೆಂಬನುಡಿಯಂ ನೆರೆತಾಳ್ದುಭವ ಸ್ವರೂಪಮಂ ದಿನದಿನದಲ್ಲಿಕಂಡುಮುದಮಂ ಪಡೆದಿರ್ಪನೊರಲ್ದುಭಾವಿಸ| ಲ್ಕನಮಿ ದುಮುನ್ನ ಮೇನಿನಗರಂಗಿರುತಿರ್ಪುದು ಬೇರೆಬಾಹ್ಯದೊಳ್ತನುವೆರಗಲ್ಕೆವೇಳ್ಕೆ ಪರಿಪೂರ್ಣನೆನಿಪ್ಪಕೃಪಾಬ್ಧಿ ಶಂಕರಾ|
ವ|| ಎಂದಾಗುರುಲಿಂಗಭಕ್ತನಪ್ಪ ವೇಳ್ದ್ಕೊತನಿಂತೆಂದಂ||
ಕಂ|| ಶಿರದೊಳ್ಪೊತ್ತಿರ್ಪೀಮ| ದ್ಗುರುಪಾದುಕೆದೇವನಿಮ್ಮಪಾದುಕೆಯಲ್ಲಾ| ಗುರುಮೂರ್ತಿಯೆಂಬವೇಳ್ದ್ಕೊ| ತರಗುರುಭಕ್ತಿಗೆಶಿವನರ್ದಿ ಮೆಚ್ಚಿದನಾಗಳ್|| ೧೨|
ವ|| ಅಂತುಸದ್ಗುರುಮೂರ್ತಿಯೊಳ್ತನ್ನನೇಕ ನಿಷ್ಠೆಯೊಳ್ಕಂಡ ವೇಳ್ದ್ಕೊತರಂ ಕರುಣಾವಲೋಕನದಿಂ ನೋಡಿ ಬೋಳೈಸಿ ಯೆಲೆಮಗನೆ ನೀಂ ಗುರುಭಕ್ತನಪ್ಪೆಯೆಂದಿಂದುಧರಂ ನಂದಿನಾಥಂಗಿಂತೆಂದಂ||

ಕಂ॥ ಗುರುಪಾದುಕೆ ಶಿರದೊಳಿರೆ। ಲ್ಪರವಸ್ತುವಿಗೆರಗನೆಂಬಛಲ
ಧಿಂದಾಂಮುಂ। ದಿರಶಿರಗನೀತನೆನುತಂ। ಕರುಣದಿನಾನಂದಿಗೆಂದನಂ
ದುವೆಯರಸಂ॥ ೧೩

ವ॥ ಎಂದಾಶಿವಂಮೆಚ್ಚಿಗುರುಭಕ್ತಿಯ ಛಲಮಂಕೊಂಡಾಡುತ್ತಾಗ
ಳ್ತಾಂಭರಿಸಿದದಿವ್ಯಪುಷ್ಪಕವದೊಳಾ, ವೇಳಳ್ಕೃತರಂ ಪ್ರೀತಿಯಿಂಕುಳ್ಳಿರಿ
ಸಿ ನಿಯಾಮಿಸಿದಾಗಳ್॥

ಕಂ॥ ಸ್ಮರಭಸದಿಂವೇಳಳ್ಕೃತ। ವರ್ಣರಸನಿಮಿಷಪಟಹರವದೊಳಕಲ್ಗಳ
ಮಳೆಯೊಳ್। ವರಪುಷ್ಪಕಮದುಪೊಳೆವು। ತ್ತುರುತರ ರಜತಾಚಳಕ್ಕೆ
ಬಂದುತ್ತಾಗಳ್॥ ೧೪

ವ॥ ಅಂತುಬಂದುವೇಳಳ್ಕೃತವರ್ಣರಸು ಗಿರಿಜಾರಮಣಂ ಕೈಲಾಸ
ಸ್ಥಾನದೊಳೊಡ್ಡೋಲಗಂಗೊಟ್ಟು ಕುಳ್ಳಿದರ್ದಾಗಳ್।

ಕಂ॥ ದೇವಗಣಂಪೊಗಳುತ್ತಿರಲಾ ವೇಳಳ್ಕೃತಗೆನ್ನಮೆಚ್ಚಿಗಣಪದ
ಮಂಕೊಟ್ಟೀವಿಧ ಸದ್ಗುಣನಿಧಿಗಿರಿಜಾವಲ್ಲಭನೆಸೆವುತಿರ್ದನಾಸ್ಥ
ಯಿಕೆಯೊಳ್। ೧೫

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪಾಲಿಗೆರೆಯ ಪುರಾಧಿಪಶ್ರೀಗೋ
ಪಿನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಷಷ್ಟ
ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ವೇಳಳ್ಕೃತಮಾಹೇಶ್ವರಕಥಾಪ್ರ
ತ್ರಾಂತಂಅಷ್ಟತ್ರಿಂಶದಾಶ್ವಾಸಂ॥

...ಶ್ರೀ...

## ಮೂವತ್ತೊಂಭತ್ತನೆಯ ಆಶ್ವಾಸಂ

### ಗಣನಾಥಮಾಹೇಶ್ವರ ಕಥಾವೃತ್ತಾಂತಂ

ಸ್ವಾಮಿ ಗಣನಾಥಗೊಲಿದಂ| ದಾ ಮಾಗಣಪದವಂಕೊಟ್ಟುಪೊರೆದಾಸುರ
ರಕ್ಷಾಪ್ರಣಿಮುನಿಗಣಚಂ| ತಾಮಣಿ ಸೋಮೇಶನೊಲ್ದು ಪಾಲಿಕೆನೆ
ಮ್ಮಂ|| ೧||

ಗಳವೃತ್ತಂ|| ಚೋಳಧರಿತ್ರಿಯೊಳಗ್ಗಳಕೆರೆಯಿಂ ಶಾಲಿಯಕೈವೊಲ
ದಿಂ ಘನವನದಿಂ| ಶೂಲಿಯಭಕ್ತರಗೇಹಾಪರ ಲಿಂಗಾಲಯದಿಂದೆಸೆದಿ
ರ್ಕುಂ ಶಿವಪುರಂ|| ೨||

ಕಂ|| ಅಂತಾ ಶಿವಪುರದೊಳ್ ಬಳ| ವಂತಂ ಗಣನಾಥನೆಂಬ ಮಾಹೇಶ್ವರ
ನತ್ಯಂತೋದ್ರೇಕದ ಭಕ್ತಿಯನಾಂತು ಮಹಾಕೀರ್ತಿವೆತ್ತು ತಾನಿ
ರುತಿರ್ಪಂ|| ೩||

ವ|| ಮತ್ತಮಾ ಶಿವಪುರದೊಳಾ ಮಹೇಶ್ವರಂ ನಿಚ್ಚಲ್ ಭವಿಗಳಪ್ಪವ
ರ್ಗೆ ಬೇಡಿದಪ್ಪೊಂಗೊಟ್ಟು ಶಿವಭಕ್ತರಂ ಮಾಡಿ ಬಳಿಕ್ಕಂ ಲಿಂಗಾರ್ಚನೆ
ಯಂ ಪಾಡುವಿಸಿಯವ ಮುಂಪಿಡಿದಿರುತಿರ್ಪ ನೆಂತುಮಲ್ಲದೆಯುಂ||

ಕಂ|| ಪಿರಿದೊಲವಿಂ ಗೊಡುವನಲ್ಲದೊ| ಡಿರದಲಗಂ ತೋರಿ ಸತ್ವದಿಂ
ಭವಿಗಳಭಾ| ಸುರಪೆಳ್ಪಿಸಿತಮ ನಿಟ್ಟೇ| ಶ್ವರಕಿಂಕರರೆನಿಸಿಪೊರೆದನಾ
ಗಣನಾಥಂ|| ೪||

ವ|| ಅಂತೀಪರಿಯೊಳ್ದಿನದಿನದೊಳ್ ಭವಿಗಳ್ಗೆ ವರಂ ವಿಭೂತಿಯನಿಟ್ಟು
ಶಿವಭಕ್ತರಂ ಮಾಡುತಿರ್ಪ ಗಣನಾಥನ ಸಮರ್ಥಿಕೆಯಂ ಕೇಳ್ದು ನಾಡೊ
ಳಗುಳ್ಳ ಭವಿಗಳೆಲ್ಲಂ ಪೊನ್ನಾಸೆಗೆ ಕೆಲಂಬರಂಜಿಕೆಯಿಂ ಕೆಲಂಬರಾರ್ಜಿ
ತಭಕ್ತಿವಿಂಗೆ ಮುಕ್ತಿಯಿಚ್ಛೆಯಿಂ ಕೆಲಂಬರ್ಭಕ್ತರಾಗಿ ಲೋಕದೊ
ಳ್ಪೂಜ್ಯರೆನಿಸುತ್ತಿರ್ದರಂತುಮಲ್ಲದೆಯುಂ||

ಕಂ|| ನಿರುತಂ ಪಾಲ್ಮಧುವಾದಂ| ತಿರೆ ಸಾರುಚಿಯಳಿವುದವರ ಪರಿ
ಯೊಳ್ ಪೊಂಗೊಂ| ಡುರುತರಭವಿಗಳ್ ಶಿವಭ| ಕ್ತರಾಗಿ ಗಣನಾಥನಿಂ
ದೆ ಗತಿವಡೆದಿರ್ಪರ್||

ವ|| ಅಂತು ಕಾಲಿಗೆ ಸಕ್ಕರೆಯುಂ ಮೆಚ್ಚುವಂತೆ ಭವಿಗಳ್ ಪೊಂಗೊಂಡು
ವಿಭೂತಿಯನಿಟ್ಟು ಶಿವಭಕ್ತರಾಗಿ ಮುಕ್ತಿಭುಕ್ತಿಯಂ ಪಡೆವುತಿರ್ದರಂ
ತುಮಲ್ಲದೆಯುಂ||

ಕಂ॥ ದಿನದಿನದೊಳೈವರೈವರ। ನನುನಯದಿ ವಿಭೂತಿಯಿಟ್ಟುಮಾ
ಹೇಶ್ವರರಂ। ದೆನಿಸುತ್ತಂ ಗಣನಾಥಂ। ಘನಭಕ್ತಿಯನಿಯಮದೊಳ್ವಿ
ರಾಜಿಸುತಿರ್ದಂ॥ ೬

ವ॥ ಇಂತು ಗಣನಾಥಮಾಹೇಶ್ವರಂ ತನ್ನ ತನುಮನಧನ ಮೆಂಬಿ
ವರಿಂ ತಾಂಪಿಡಿದನಿಯತಾಚಾರದ ಫಲಮಂ ಸಲಿಸುತ್ತಂಮತ್ತಮೊಂದು
ದಿವಸಂ ನಿಚ್ಚಕಿನಂದದಿಂ ಪೊಂಗೊಟ್ಟನಾಲ್ವರುಭವಿಗಳ್ ವಿಭೂತಿ
ಯನಿಟ್ಟು ಭಕ್ತರಂಮಾಡಿ ನಿಜನಿಳಯಕ್ಕೆಳ್ತಂದು ಸನ್ಮಾನದಿಂ ಕುಳ್ಳಿ
ರಿಸಿಬಳಿಕಂ ನೆನೆದಾತ್ಮನಿಯಮದೊಳೊಬ್ಬ ಭಕ್ತಂಕೊರತೆಯೆಂದುಚಿ
ತ್ತದೊಳ್ಪರಿಭಾವಿಸಿಪೊರಮೊಡಲ್ಬಗೆಯುತ್ತಿರ್ಪಾಗಳ್॥

ಚಂ॥ ವರಗಣನಾಥನಾಂತ ಫಲದೇಳ್ಗೆಯ ನೀಕ್ಷಿಸಲೆಂದೆನುತ್ತಮೀ।
ಶ್ವರನೊಲವಿಂ ನರಾಕೃತಿಯೊಳುರ್ವಿಗೆ ಸಚ್ಛಕುನಂಗಳಂಸುವಿ। ಸ್ತರ
ದೊಳೆಪೇಳುತಂಡಮರುಗಂ ಕರದೊಳ್ಪಿರಿದೊಪ್ಪಿಮಂದಿರಾ। ಜರಖಿಳ
ಶ್ರುತಿಪ್ರತತಿಬಣ್ಣಿಸೆಬಂದನುದಾತ್ತವೃತ್ತಿಯೊಳ್॥ ೭

ವ॥ ಅಂತು ಕಂತುಹರಂ ನರಾಕೃತಿಯಿಂ ಶಕುನಿಗನಾಗಿಬಂದುಪೊರ
ಗಿರ್ಪುದಂ ಮನೆಯಪರಿಜನಂಕಂಡು ಪರಿದುಪೋಗಿಭರದಿಂ ಸ್ವೈರವೃ
ತ್ತಿಯಿಂ ಬರಿಬಿಸುವಾತನೊಬ್ಬರ್ಗಂ ಬಾಗಿಲೊಳಿರ್ದಪನೆಂದುಪೇಳಲ್ಕೇ
ಳ್ದುಹರುಷೋತ್ಸುಕಹೃದಯನಾಗಿ ಗಣನಾಥಮಾಹೇಶ್ವರಂ ವಿಭೂತಿ
ಯಂಕೊಂಡುಪೊರಮಟ್ಟಾಗಳ್॥

ಕಂ॥ ಶರಣಂಭಕ್ತ್ಯುದ್ರೇಕದಿ ನಿರದೇಳ್ತಂದುರ್ಬಿ ಡಮರುಗದಶ
ಕುನಿಗನಂ ಪಿರಿದೊತ್ತಿಪಿಡಿದು ಫಣಿಯೆಳ್ವರ ಭಸಿತಮನಿಡುವೆನೆಂ
ದೊಡೊದರಿದನಾಗಳ್॥ ೮

ಉ॥ ಒಲಿದೆಕಾಡುತಂ ಫಲದಭಕ್ತಿಯಬಳ್ಪಿಗೆ ಮೆಚ್ಚಿಪಾರ್ವತೀ! ವ
ಲ್ಲಭನಾತ್ಮಭಾಳದ ವಿಲೋಚನಮಂ ತೆರೆಯುತ್ತೆ ಶಂಭುನಾಂ। ನಿಲ್ಲನೆ
ಪೊಸದಲ್ಲದೆ ದಿಟಂಬಿಡನೆಂದು ವಿಭೂತಿಯಂಕಳಂ ಘುಲ್ಲವಧಿಂದೆಪೂಸಿಶ
ರಣಂಬಳಿಕಾನತನಾದನರ್ಥಿಯಿಂ॥ ೯

ವ॥ ಅಂತುಭಯಭಕ್ತಿಯಿಂದಾನತನಾಗಿ ನೋಳ್ಪಗಣನಾಥಮಾಹೇ
ಶ್ವರಂಗೆಪರಮಕಾರುಣ್ಯದಿಂದೆ ಭಕ್ತವತ್ಸಲನಪ್ಪ ಭೂತೇಶಂತನ್ನದಿವ್ಯ
ಮೂರ್ತಿಯಂತೋರಿಸಿದಾಗಳ್॥

ಮಾಲಿನೀವೃತ್ತಂ' ಅಮರನದಿನಿಶಾನಾಥಂ ಹುತಾಶಂಫಣೀಂದ್ರಂ
ಸಮುಚಿತಗರಳಂ ಭಸ್ಮಂಮದೇಭೇಂದ್ರಚರ್ಮಂ| ಡಮರುಗಮು
ರುಶೂಲಂ ಪತ್ತುತೋಳ್ಪಂಚವಕ್ತ್ರಂ| ಕ್ರಮದಿನೆಸೆಯಲೊಲ್ದೊಪ್ಪಿರ್ದ
ನಾಪಾರ್ವತೀಶಂ|| ೧೦

ವ| ಅಂತೊಪ್ಪುವದಿವ್ಯಮೂರ್ತಿಯಂ ಕಂಡು ಭಯಚಕಿತಹೃದಯ
ನಾಗಿ ದೇವಾಎನ್ನಯ ಭಕ್ತಿಯಫಲಕ್ಕೆ ನಿನ್ನೊಳ್ಪೋರ್ದಪ್ಪೆನೆಂದಾ
ನಂದಾಶ್ರುವಾರಿಯಿಂ ಮುಂದುಗಾಣದಿಡಾವರೆಯೊಳ್ಸೈಗೆಡೆದು ಪೊ
ರಳ್ವಗಣನಾಥಮಾಹೇಶ್ವರನಂ ಭಕ್ತದೇಹಿಕನಪ್ಪ ಗಿರಿಜೇಶಂ ಕಾರು
ಣ್ಯದಿಂಪಿಡಿದೆತ್ತಿ ಕುಳ್ಳಿರಿಸಿ ಬೋಳೈಸಿನಂದಿನಾಥಂಗಿಂತೆಂದಂ||

ಕಂ| ಶ್ರುತಿಗಳ್ಗೆ ನಿಲ್ಕದೆನ್ನುಮ| ನತಿಭರದಿಂಪಿಡಿದುತನ್ನಫಲದಿಂದೆ
ನಗಂ| ಮತಿವಿಗಲುಪದೇಶಿಸಿದಂ| ಕ್ಷಿತಿಯೊಳಗಿನವನಂತೆ ಭಕ್ತರಾ
ರೆನುತಿರ್ದಂ|| ೧೧

ವ| ಎಂದುಪೊಗಳ್ದು ಕೊಂಡಾಡುತ್ತಂ ತಾಂಬರಿಸಿದದಿವ್ಯ ವಿಮಾನ
ದೊಳ್ಕುಳ್ಳಿರಿಸಿ ಗಣನಾಥನಂ ಗಿರಿಶಂನಿಯಾಮಿಸದಾಗಳ್||

ಕಂ ಅರಲಮಳೆಸುರಿಯಲಾಸ ಚ್ಛರಣಂಬೆರಸಮರ ಪಟಹರವಮೆ
ಸೆಯಲ್ಕೆ ಚ್ಛರನೆಮಣಿಪುಷ್ಪಕಂತಾಂ ಸುರು| ಚಿರರಜತಾಚಳಕ್ಕೆ
ಬಂದುತ್ತಾಗಳ್||

ವ| ಅಂತುಬಂದು ಗಣನಾಥಮಾಹೇಶ್ವರಾನ್ವಿತ ಪನನ್ಯಜವಿಜಯ
ಯಂಪ್ರವಥಗಣಂಬೆರಸೊಡ್ಡೋಲಂಗೊಟ್ಟುಕುಳ್ಳಿರ್ದಾಗಳ್||

ಕಂ ನಿಜರತತಿಮೆರೆವುತ್ತಿರೆ| ದುರ್ಜನಗಿರಿವಜ್ರನೆನಿಪ ಗಣನಾಥಂ
ಗ| ತ್ಯಜಿತ ಗಣಪದವಿತ್ತಾ| ನಿರ್ಜಿತಕುಸುಮಾಸ್ತ್ರನೆಸೆಧನಾಸ್ಥಾ
ಯಿಕೆಯೊಳ್|| ೧೨

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರಚಾರಿತ್ರದೊಳ್ಗಣನಾಥ ಮಾಹೇಶ್ವ ಕಥಾವೃತ್ತಾಂ
ತಮೇಕೋನ ಚತ್ವಾರಿಂಶದಾಶ್ವಾಸಂ||

— ೩೯ —

## ನಾಲ್ವತ್ತನೆಯ ಆಶ್ವಾಸಂ

### ವಾಹಿಲ್ಯರ ಕಥಾವೃತ್ತಾಂತಂ

ವಾಹಿಲ್ಯಗಣಸಿವಿುಷಸಂ । ದೇಹಂ ಪೊಗಳುತ್ತಿರಲ್ಕೆ ಗಣಪದವಿ
ತ್ತು । ತ್ಸಾಹದೆ ಮೆರೆವೊಪ್ಪುವವೃಷ । ವಾಹನಸೋಮೇಶನೊಲ್ದು ಪಾ
ಲಿಸೆನಮ್ಮಂ ॥ ೧

ಚೋಳೋರ್ವಿವಸರೆಯೊಳ್ ಶಿವಭ । ಕ್ತಾಳಿಯದಿಂ ಲಿಂಗಗೇಹದಿಂಸು
ರುಚಿರಪ್ರಾ । ಘಾಳಿಗಳಿಂ ಮಣಿತೋರಣ । ಜಾಳದಿ ತಿರುಪೊನ್ನೆಯೆಂಬಪು
ರಮೆಸೆದಿರ್ಕುಂ ॥ ೨

ತಿರುಪನ್ನೆಯೆಂಬ ಪುರದೊಳ್ । ಶರಣಜನಾಂಭೋಧಿ ಚಂದ್ರನೆಂ
ದೆನಿಸುತಂ । ಪರಮಾನಂದದಿನಿರ್ದಂ । ನಿರುಪಮ ವಾಹಿಲ್ಯನೆನಿಪ ಪರ
ಮಶಿವೈಕ್ಯಂ ॥

ವ। ಮತ್ತಮಾತಂ ॥

ಮ। ಗುರುಕಾರುಣ್ಯದಿನಾಂತು ಸ್ವಹಸ್ತಕಮಲದೊಳ್ ಸಲ್ಲೀಲೆಯಿಂ ಲಿಂ
ಗಮಂ । ನಿರುತಂ ಸ್ಥಾಪಿಸಿ ಭಕ್ತಿಭಾವಕುಸುಮಾನೀಕಾರ್ಚನಂಗೆಯ್ದು
ಸಾ । ದರದಿಂದಂ ವರಭಕ್ತಸಂತತಿಗೆ ವ್ಯಾಖ್ಯಾನಂಗಳಿಂದರ್ಥದಿಂ । ಪರಿ
ತೋಷಂಬಡಿಸುತ್ತಮಿರ್ಪನನಿಶಂ ವಾಹಿಲ್ಯಮಾಹೇಶ್ವರಂ ॥ ೪

ಕಂ। ನಿಚ್ಚಂ ಪೊಸಪರಿಯಲರ್ಗಳ । ನಚ್ಚರಿಮಿಗೆ ಭಾವದಲ್ಲಿ ಕಲ್ಪಿಸಿ
ಮನದೊಳ್ । ಬೆಚ್ಚಂತಿರ್ಪಿನ ಲಿಂಗ । ಕ್ಕಚ್ಚರಿಯಂ ಮಾಡುತಿರ್ದನಾ
ವಾಹಿಲ್ಯಂ ॥ ೫

ಇಂದರ್ಕನಿಂದು ಪಂಕಜ । ಮಿಂದುತ್ಪಲಮಿಂದು ಕುಂದಮಿಂದಬ್ಜ
ಮೆನು । ತ್ತಿಂದುಧರಂಗಾಭಕ್ತಂ । ಸಂದಮನೋಭಾವದಲರ್ಗಳರ್ಚಿಸು
ತಿರ್ದಂ ॥

ವ। ಇಂತೀಪರಿಯೊಳಾ ವಾಹಿಲ್ಯಮಾಹೇಶ್ವರಂ ಪಲವುವತ್ಸರಂ ಮ
ನೋಭಾವಕುಸುಮದಿಂ ಪ್ರಾಣಲಿಂಗಕ್ಕೆ ಪೂಜೆಯಂ ಮಾಡುತತ್ಯಾನಂ
ದದಿಂದಿರುತಿರ್ದನಂತುಮಲ್ಲದೆಯುಂ ॥

ಕಂ। ಈತೆರದಿನಿರುತ ಕಾವೇರೀತಟಕತಿಭಕ್ತಿಯಿಂದ ಮೊಂದುದಿ
ನಂ ಸ । ಪ್ರೀತಿಮಿಗೆ ಪೋಗಿ ಬಳಿಕಂ ಗ । ಜಾತೇಶಾರ್ಚನೆಯ ಬಗೆಯೊಳಿ
ರ್ದಂ ಭಕ್ತಂ ॥

ವ॥ ಅಂತೀಶಾರ್ಚನೆಯಂ ಮಾಡಲ್ವೇಳ್ಕೆಂದು ಕಾವೇರಿ ನದಿಯೊಳು ಸ್ನಾನಮಂಮಾಡಿ ಧೌತಾಂಬರಮನುಟ್ಟು ಗವ್ಯೋಕ್ತಿಯಿಂ ವಿಭೂತಿರುದ್ರಾಕ್ಷೆಗಳಂ ತಾಳ್ದು ವಾಹಿಲ್ಯಮಾಹೇಶ್ವರಂ ಪದ್ಮಾಸನಮನಳಂಕರಿಸಿ ಸದ್ಭಕ್ತಿಯಿಂದಂತಾಗಳ್॥

ಮ॥ ತನುದೇವಾಲಯಮುದ್ಯಹೃತ್ಕಮಲವೇಪೀಠಂ ಲಸತ್ಪ್ರಾಣ
ಮೇ। ಘನಲಿಂಗಂ ತನಗಾಗೆ ಭಾವಸುರಭೂಜಾತಪ್ರಸೂನೌಘಮ।
ರ್ಚನೆಯಂ ಭಕ್ತಿ ಮಿಗಲ್ಕೆ ಮಾಡಿ ಮನದೊಳ್ ಕೂರ್ತಾಡಿಪಾಡುತ್ತೆ
ಲೋ। ಚನಮಂ ಮುಚ್ಚಿ ಸಮಾಧಿವೆತ್ತೆಸೆದನಾ ವಾಹಿಲ್ಯಮಾಹೇಶ್ವ
ರಂ॥

ಕಂ॥ ಜನನುತವಾಹಿಲ್ಯಂ ಮೇ। ದಿನಿಯರಿಯದ ತೆರದಿ ಹೃದಯದೊ
ಳ್ ಶಿವಲಿಂಗಾ। ರ್ಚನೆಯಂ ಮಾಳ್ಪದರಿಂದಂ। ದನುನಯದಿಂ ಪ್ರಾ
ಣಲಿಂಗಿಯೆನಿಸುತ್ತಿರ್ದಂ॥

ವ॥ ಅಂತೀಪರಿಯೊಳ್ ಪ್ರಾಣಲಿಂಗಕ್ಕೆ ಮನೋಭಾವದಿಂ ಪೂಜೆಯಂ ಮಾಡಿ ಪರಮಾನಂದದಿಂ ಕಾವೇರೀತೀರದೆಂತಲರ್ದ ನಿಜಮಂದಿರಕ್ಕೆ ಪೋಪಗಮಹಾಹೇಶ್ವರನಪ್ಪ ವಾಹಿಲ್ಯರ ಭಾವಕುಸುಮದರ್ಚನೆಯಂ ಭಕ್ತಿಯಿಂ ಪ್ರಕಟಿಸಲ್ವೇಳ್ಕುಮೆಂದಾ ಪುರದೊಳ್ ಸದ್ಗೋಷ್ಠಿಯಿಂಮೊ ಘುತ್ತಿಂ ಕುಳ್ಳಿರ್ದ ಗೋಂಡಣದ ಶಿವಭಕ್ತರೊಳುದ್ದಂಡನಪ್ಪ ಪರ್ವ ಜಂಗಮದಮನವಂ ಸದಾಶಿವಂ ಪ್ರೇರಿಸಲ್ಕಾಗಳ್॥

ಕಂ॥ ಹರಪೂಜೆಗೆಯ್ದು ವಾಹಿಲ್ಯರನೊಲವಿಂ ಪುರದವೀಧಿಯೊ
ಳ್ಬರುತಿರ್ದಿರೊಳ್। ಶರಣಜನಂಗಳ್ಕುಳ್ಳಿ। ದಿರೆ ಕಂಡತಿಭಕ್ತಿಯಿಂದಮಾ
ನತರಾದರ್॥

ವ॥ ಅಂತಾನತರಾಗಿ ಕುಳ್ಳಿರ್ದ ವಾಹಿಲ್ಯರ್ಗೆ ತಚ್ಛರಣಜನಂಗಳೊಳಗೊಬ್ಬ ದ್ದಂಡನಪ್ಪ ಜಂಗಮನಿಂತೆಂದಂ॥

ಕಂ॥ ಘನರುದ್ರಾಕ್ಷೆ ವಿಭೂತಿ [illegible] ನ್ನು
ಲಿಂಗಾ। ರ್ಚನೆಯುಮನದಾರ್ಕಂಡವರಿ [illegible] ನ
ಶಿವಂ ಭಕ್ತಂ॥

ಪರಹೃದಯಮುಸ್ಥಿತ ಲಿಂಗ। ಕ್ಕುಸುಭಾವ [illegible] ಲ್ಕಂ
ನಾ। ದರದಿಂದರ್ಚಿಸಿದಾಂ ಹರಿಹಂದನ [illegible]

ಬಂಧಂ॥ ೧೨

ಎನೆನೆಗುತಿದು ಚಿತ್ರಂಮೇ। ದಿನಿಯೊಳ್ಸರಭಜ ಕುಸುಮವಿರ ದಾಂನಿಚ್ಚ। ರ್ಚನೆಗೆಯ್ವೆನೆಂಬಜಂಗಮ। ಕನುನಯದಿಂ ನುಡಿದನಾ ಗಳಾವಹಿಲ್ಯಂ॥

ವ॥ ಎಂದುನುಡಿದ ತಚ್ಛರಣಜನಕ್ಕೆ ಶರಣಾರ್ಥಿಯೆನುತ್ತಂ ಸುರಗಿ ಯಂತೆಗೆದಾಗಳ್॥

ಕಂ॥ ಸುರಗಿಯೊಳೆರ್ದೆಯಂ ಸೀಳ್ದಾ। ಸುರದಿಂಬಗೆಯಲ್ಕೆ ಕಲ್ಪತರು ಕುಸುಮದಬಂ। ಧುರಪೂಜೆವೆರಸುಲಿಂಗಂ। ಪಿರಿದೆಸೆದಿರೆಕಂಡು ಶರಣರ ಚ್ಚರಿವಟ್ಟರ್॥

ವ॥ ಅಂತಾವಾಹಿಲ್ಯರ ಮನೆ ಭಾವದ ಕುಸುಮಪೂಜೆಯ ನಿಶ್ಚಯ ಮಂಕಂಡಚ್ಚರಿವಟ್ಟ ಜಂಗಮಮುಖ್ಯ ಶರಣರ್ಜಯಜಯ ಯೆನುತಿ ರ್ಪಾಗಳ್॥

ಕಂ॥ ಪದಪಿಂದಂ ಭಾವಲತಾಂ। ತದಪೂಜೆಯ ದಿಟವನಧಿಕಶಶ ಶಾಗಂತೋ। ರಿದುಬಕ್ಕವೆಚ್ಚೆಭಕ್ತನ। ಹೃದಯದಿಪೊರ ಮಟ್ಟಶಂ ಭುಮೂರ್ತಿಯೊಳೆಸೆದಂ॥ ೧೪

ಅನಿಮಿಷಧುನಿಯಿಂ ಶಶಿಯಿಂ। ದನಲಸಿನಹಿಯಿಂ ವಿಭೂತಿಯಿಂ ಶಾರ್ದೂಲಾ। ಜಿನವಿದಶಭುಜದಿ ಪಂಚಾ ನನದಿಂದೊಪ್ಪಿರ್ದನಾಗ ಳಾಗಿರಿಜೇಶಂ॥ ೧೬

ವ॥ ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರವ ನಂಗವನೆ ಯ್ದಿ ಭಯಭಕ್ತಿಯಿಂ ಚರಣಾರವಿಂದದೊಳ್ಪೊರಳ್ದ ವಾಹಿಲ್ಯರಂಕಾ ರುಣ್ಯದಿಂಪಿಡಿದೆತ್ತಿ ಕುಳ್ಳಿರಿಸಿಮೆಯ್ದಡವಿ ಮಂದಾಕಿನೀಧರಂನಂದಿ ನಾಥಂಗಿಂತೆಂದಂ॥

ಕಂ॥ ಒದವಿದ ಭಕ್ತಿವಿಗಲ್ನಿಜ। ಹೃದಯಾಬ್ಧಿಯೊಳೆನಗೆಭಾವಪೂ ಜೆಯನಿವನಂ। ದದೆಳಾವಂ ಮುನ್ನಂವಾ। ಡಿದನೆಂದೆನುತಿರ್ದನೇ ತುಂಗಿರಿಜಾರಮಣಂ॥

ವ॥ ಎಂದುಕೊಂಡಾಡುತ್ತಮಾವಾಹಿಲ್ಯವ ಹೇಶ್ವರನಂ ತಾಂ ರಿಸಿ ದದಿವ್ಯವಿಮಾನದೊಳ್ಕುಳ್ಳಿರಿಸಿಕನ್ನಾನಿಸಿ ಮೇನಕಾತ್ಮಜಾರಮಣಂನಿ ಜಾವಿಸಲ್ಕಾಗಳ್॥

ಕಂ॥ ಕಲ್ಯಾಣಾದ ಕರವಡೊಳ್॥ ಮೌಲ್ಯಮಣಿ ಪ್ರಭೆಯೊಳೆಸೆವ ಪು ಷ್ಪಕಮೂವಾ ಹಿಲ್ಯಂ ಬೆರಸೇಳ್ತಂದುದು। ಶಲ್ಯಾಭರಣನ ನಗೇಂದ್ರಕು ತ್ಸವದಿಂದಂ॥ ೧೮

ವ॥ ಅಂತುತತ್ಸಹದಿಂ ಬಂದವಾಹಿಲ್ಯಂ ಬೇಸುಮಹಾಗಣಾನ್ವಿತಗಿ ರಿಜೇಶನೊಡ್ಡೋಲಗಂಗೊಟ್ಟುಕುಳ್ಳಿರ್ದಗಲ್॥

ಕಂ॥ ದೇವೇಂದ್ರಂ ಪೊಗಳುತ್ತಿರ। ಲಾವಾಹಿಲ್ಯಂಗೆ ಮೆಚ್ಚೆ ಗಣಪದ ವಿತ್ತಂ। ತೀವಿದ್ದ ಕರುಣಾಂಬುಧಿಗಿರಿ। ಜಾವಲ್ಲಭನೊಪ್ಪಿ ತಿರ್ದನಾಸ್ಥಾ ಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮ ರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ತುಲಿಗೆರೆಯ ಪುರಾಧಿಪ ಶ್ರೀ ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ ಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ವಾಹಿಲ್ಯಮಾಹೇಶ್ವರಕಥಾ ವೃತ್ತಾಂತಂಚತ್ವಾರಿಂಶದಾಶ್ವಾಸಂ

—ಶ್ರೀ—

## ನಲವತ್ತೊಂದನೆಯಆಶ್ವಾಸಂ

### ಚೆರುತೊಣೆಯಾಂಡರ ಕಥಾವೃತ್ತಾಂತಂ

ಕಂ॥ ವರಚೆರುತೊಣೆಯಾಂಡಂಗಾ। ದರದಿಂ ಮುನಿನಿಕರಮುಘೋಘ ನಲ್ಕತಿಮುದದಿಂ। ಪರಮಗಣಪನಮ ನಿತ್ತಾ ನಿರುಪಮ ಸೋಮೇಶ ನೊಲ್ದು ಪಾಲಿಕೆನಮ್ಮಂ॥

ಪರಮೈಶ್ವರ್ಯದೊಳೊಪ್ಪುವ। ವರಚೋಳೊರ್ವರ ಯೊಳೀಶ್ವರಾ ಲಯದಿಂಭ। ಕ್ತರ ಗೃಹಪಙ್ತಿಗಳಿಂದಂ। ತಿರಿಪಾವರಿಯೆಂಬ ಪಟ್ಟಣಂಕ ಕಮ್ಮಸೆಗುಂ॥ ೨

ತಿರಿಪಾದರಿ ಪುರದೊಳ್ ಶಂ। ಕರಪದಪಂಕರುಹ ಭೃಂಗನೆನಿಸು ತ್ತಂತಾಂನಿರುಪಮ ಚೆರುತೊಣೆಯಾಂಡಂ। ಪಿರಿದಪ್ಪೈಶ್ವರ್ಯದಿಂದವೊ ಲವಿಂದಿರ್ದಂ॥

ವ॥ ಅಂತುಮಪ್ಪಮೈಶ್ವರ್ಯ ಸಂಪನ್ನನಾಗಿರುತ್ತಂ ಚೆರುತೊಣೆಯಾಂ

ಡಂಶಿವಲಿಂಗಾರ್ಚನೆಯರ್ಥಿಯಿಂ ಶಿವಾಗಮದೊಳ್ಪುಷ್ಪಾಧ್ಯಾಯಮಂ ಕೇಳ್ದು ಮನದೊಳ್ತಾಳ್ದಾಗಳ್॥

ಕಂ॥ ಎರೆಯಲ್ಕ ಫಲಂದೂರ। ಲ್ತರಲಥಮಂವನದೊಳರಸಿತರೆವ್ಯಥ್ಯ ಮವಾ। ದರದಿಂತಾಂ ಬೇಸಿದರ ಲ್ಪರಿದು ತ್ತಮಮೆಂದು ತಿಳಿದುತಂದಾ ಭಕ್ತಂ॥ ೪

ವ॥ ಅಂತಾಚೆರುತೊಣೆಯೊಂಡನಾಗವೇಕ್ತಿಯಿಂ ವಿಭೂತಿರುದ್ರಾಕ್ಷಿಗಳಂ ತಾಳ್ದು ನಿಜಪತ್ನಿವೆರಸು ತಿರಿಪಾದರಿಪುರಾಧೀಶ್ವರನಪ್ಪ ಶಿವನಿಳಯಕ್ಕೇಲ್ತಂದು ಪರಮಭಕ್ತಿಯಿಂ ತಾಂತಂದುಶ್ವೇತಾರ್ಕ ಪುಂಡರೀಕಮೂಲತಿಯಶೋಕೆ ಪಟ್ಟೆಗೆರಕ್ತಾಗಸ್ತ್ಯ ನಂದ್ಯಾವರ್ತಪುನ್ನಾಗವಕುಳಪಾಟಲಿ ಪಲಾಶಕದಳೀಕುಸುಮಂಗಳೆಂಬುದನುದಯ ಕಾಲದೊಳ್ಸಮರ್ಪಿಸುತ್ತಂ ಮತ್ತಂಬೃಹತೀದ್ರೋಣ ದತ್ತೂರ ಕರವೀರಪಾಟಳಿಕೈರವಕೋಕನದ ಪಂಚಕಪ್ರಸೂನಂಗಳಿವಂ ಮಧ್ಯಂದಿನದೊಳ್ಸದಾಶಿವಂಗರ್ಚನೆಯಂ ಮಾಡುತ್ತಂ ಬಿಲ್ವಪತ್ರೆಭದ್ರೆಶಮಿಯತಸಿಬಹುಕರ್ಣಿಕೆಪಿಚಕಿಳಕೇತಕಿ ನೀಲೋತ್ಪಳ ಪೃಥುವಿ ಪದ್ಮ ಶಂಖಪುಷ್ಪವೆಂಬಿವಂರಾತ್ರಿಯೊಳ್ಗಿರಿಜೇಶಂಗೆ ಪೂಜೆಯಂಮಾಡುತ್ತ ಮಾಪರಿಯೊಳ್ದನದಿನದೊಳೀನಿಯಮಮಂ ಸಲಿಸುತ್ತಂಪಲವುವತ್ಸರಂ ಪೋಗಲ್ಕಿರುತಿರ್ದನಂತುಮಲ್ಲದೆಯುಂ॥

ಕಂ॥ ದಿನದಿನದೊಳ್। ಶಿವಲಿಂಗಾ। ರ್ಚನೆಗಳನೀತೆರದಿಮಾಡಿಚೆರುತೊಣೆಯೊಂಡಂ। ಘನಜಂಗಮಗುರುವಿಂಗತಿ। ವಿನಯದಿ ಬೆಸಕೆಯ್ಯುತಿರ್ದನುತ್ಸವದಿಂದಂ॥ ೭

ವ॥ ಅಂತೀಪರಿಯೊಳಿರುತ್ತ ಮೊಂದುದಿವಸಂನಿಚ್ಚಟಿಕೆನಂದದಿಂದುಷಃಕಾಲದೊಳಿರ್ದು ಕರಡಿಗೆಯಂಕೊಂಡು ತಾಂಬೆಳಸಿರ್ದ ಪೂದೋಟಮಂಪೊಕ್ಕಾಗಳ್॥

ಕಂ॥ ಬಂದುಗೆದಾಸಾಳಂ ನವ। ಕುಂದಂಗೋರಟಕರಂಜೆಯೊಂಬಲ್ಮಾಳ್ಕೆ। ತ್ತುಂಪಾಡಿಮ ದಲರೆಂಬಿವ। ನಂದಮಳಿದೊಳ್ಪುವನಾಯ್ದುಕೊಯ್ಯುತ್ತಿರ್ದಂ॥ ೬

ನೆಳಲೊಳಗೇ ಕಾಕಿತ್ವದ। ನೊಳಗುಡಿಗಿರದುರ್ಬಿ ಕೊರ್ಬಿದರಬಿರಿದಸುಕೋಮಳ ಪುಷ್ಪಂಗಳನಾ। ಚೆರುತೊಣೆಯೊಂಡಂಭಕ್ತಿಯಿಂದೆ

ಕೊಪ್ಪುನದಾಗಳ್॥

ವ॥ ಅಂತಾಚಿರುತೊಣೆಯಾಂಡಂ ಪರಿಪರಿಯಪರಿಮಳಕುಸುಮಂಗಳಂಕೊಯ್ದು ಕರಂಡಗೆಯುಂತುಂಬಿಕೊಂಡು ನಿಜಮಂದಿರಕ್ಕೆ ಬಂದಾನಂದದಿಂ ಸ್ನಾನಮುಂಮಾಡಿ ಧೌತಾಂಬರಮನುಟ್ಟು ನಿಜಪತ್ನಿವೆರಸು ಶಿವನಿಳಯಕ್ಕೆಬಂದು ಲಿಂಗದಸವಿಾಪದೊಳ್ ಪದ್ಮಾಸನಮನಳಂಕರಿಸಿಯೊಗಮೋಕ್ತಿಯಿಂವಿಭೂತಿರುದ್ರಾಕ್ಷಿಗಳಂತಾಳ್ದಾಗಳ್॥

ಕಂ॥ ಪಿರಿದೆಸಲವಿಂತಾಂತಂದಾ। ಪರಿಮಳಪುಷ್ಪಕ್ಕೆ ಪ್ರತಾನಮುಂಸೋದಿಸಿತ। ಚ್ಛರಣಂಪಡಲಿಗೆಯುಂತುಂ। ಬಿರಿಸಿ ಶಿವಾರ್ಚನೆಗೆಮನದುನಿತ್ರಿವರ್ಗಾಗಳ್॥

ಚಂ॥ ವಿಳಸಿತಲಿಂಗದರ್ಚನೆಗೆ ಸೋದಿಸಿಬಾಸಣಿಸಿರ್ದ ಚೆಂಗಣಿ। ಗಿಲೆಯಿರವಂತಿ ಮಲ್ಲಿಗೆಸುಪಾಟಲಿ ಸಂಪಗೆಯೆಂಬಪುಷ್ಪಮಂ। ನಲವಿನೊಳೆತ್ತಿವಾಸಿಸುತಿರಲ್ ಮುಗುಳ್ದಿಕ್ಷಿಸಿನಾಡೆಕೊಯ್ದುತ। ಲ್ಲಲನೆಯಮೂಗನಾಸುರದಿಕೊಯ್ದನ ನನ್ಯಜವೈರಿಕಿಂಕರಂ॥

ಕಂ॥ ಅನುಪಮಶ್ರೀಚಿರುತೊಣೆಯಾಂಡಂ। ಘನಭಕ್ತ್ಯುದ್ರೇಕದಿಂದ ವಿನಿಯಳಮೂಗಂ। ಮುನಿದರಿದು ಬಿಸುಟೆನೆಂಪಾ। ಮನಸಿಜರಿಪುಮೆಚ್ಚೆರೂಪುದೋರಿದನಾಗಳ್॥ ೧೦

ಬಾಂದೊರೆಯಿಂ ಪೆರೆಯಿಂಫಣಿ ಯಿಂದಂಕರೆಯಿಂವಿಭೂತಿಯಿಂದಂಘಣೆಗ। ಣ್ಣಿಂವಂಪಂಚಾನನದಿಂ। ದಂದಶಭುಜದಿಂ ಶಿವಂವಿರಾಜಿಸುತಿರ್ದಂ॥

ವ॥ ಅಂತುವಿರಾಜಿಸುವ ದಿವ್ಯಮೂರ್ತಿಯಂಕಂಡುತ್ಕರ್ಷಪುಳಕಿತನಾಗಿನಿರ್ಭರಭಕ್ತಿಯಿಂ ಪಾದಾರವಿಂದದೊಳ್ಮೈಗೆಡೆದು ಪರವಶತೆಯಿಂದಿರುತಿರ್ಪ ಚಿರುತೊಣೆಯಾಂಡರಂ ಸತ್ಕರುಣದಿಂಪಿಡಿದೆತ್ತಿ ಕುಳ್ಳಿರಿಸಿ ನಂದಿನಾಥಂಗಿಂತೆಂದಂ॥

ಕಂ॥ ಭರದಿನೆನಗೆಂದು ತಂದಾ। ಪರಿಮಳಕುಸುಮವನೆವಾಸಿಕಲ್ಮಳಸಿಂತ। ನ್ನರಸಿಯುನಾಸಿಕಮಂ ಪಿಡಿ। ದರಿದಿವಗಾರ್ಸ ದೃಶರೆಂದನಾಗಿರಿಜೇಶಂ॥ ೧೧

ವ॥ ಎಂದೀಪಕ್ಷಿಯೊಳ್ಪೊಗಳ್ದು ಕೊಂಡಾಡುತ್ತಂ ಪರಮಪ್ರೀತಿಯಿಂ ತಾಂಬರಿಸಿದ ದಿವ್ಯಪುಷ್ಪಕದೊಳ್ ಚಿರುತೊಣೆಯಾಂಡರಂ ಕುಳ್ಳಿರಿಸಿ

ನಿರೂಪಿಸಿದಾಗಳ್॥
ಕಂ॥ ಪರಿಮಳಕೆ ಪರಮೆಗಳೆ ಝುಂ। ಕರಿಸುತ್ತಂ ಚಾರಿವರಿವಪೂ ಮಳೆಯೊಳ್ತೆ ಜ್ಝರಣಂಬೆರಸುವಿಮಾನಂ। ಸುರುಚಿರರಜತಾಚಳಕ್ಕೆಬಂ ದತ್ತಾಗಳ್॥ ೧೨
ವ॥ ಅಂತುಬಂದುಚೆರುತೊಣೆಯೊಂಡರ್ವರಸು ಗಿರಿಜಾರಮಣನೊ ಡ್ಡೋಲಗಂಗೊಟ್ಟುಕುಳ್ಳಿರ್ದಾಗಳ್॥
ಕಂ॥ ಒಳೆಯುತ ಚೆರುತೊಣೆಯೂಂಡಂ। ಗೊಲವಿಂ ಗಣಪದಮನಿ ತ್ತುಮೆರೆದ ಮಹಾನಿಶ್ಚಳನಗತನೆಯಾನಯನೋ। ತ್ಪಳಸಸಿಯೆನಿಪಭ ವನೆಸೆದನಾಸ್ಥಾಯಿಕೆಯೊಳ್॥
ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ ಷಷ್ಟಿಪುರಾತನರಚಾರಿತ್ರದೊಳ್ಚೆರುತೊಣೆಯಾಂಡ ಮಾಹೇಶ್ವ ಕಥಾ ವೃತ್ತಾಂತಮೇಕಚತ್ವಾರಿಂಶದಾಶ್ವಾಸಂ॥

— ಶ್ರೀ —

## ನಾಲ್ವತ್ತೆರಡನೆಯಆಶ್ವಾಸಂ

### ಕುಲಚಂಗಮಾಹೇಶ್ವರ ಕಥಾವೃತ್ತಾಂತಂ

ಕುಲಚಂಗರ್ಗನಿಮಿಷಸಂ। ಕುಳಮುಖಿಯುಖಿಯೆಂದೆನಲ್ಕೆ ಗಣ ಪದಮಂಕೊ। ಟ್ಟಲಘುಕೃಪಾವಾರಿಧಿಮಂ। ಗಳಮಯಸೋಮೇಶನೊ ಲ್ದುಪಾಲಿಕೆನಮ್ಮಂ॥ ೧
ಪಿರಿಯಸಕದಿ ನೊಪ್ಪುವಚೋಳರಾಷ್ಟ್ರದೊಳ್ ಲಿಂಗಭಕ್ತರಾ ಲಯತತಿಯಿಂ। ಹರಮಂದಿರಸಂದೋಹದಿ। ತಿರುವೆಯ್ಯಾರನಿಪ್ಪಸತ್ಪ ರಂಕರಮೆಸೆಗುಂ॥
ತಿರುವೆಯ್ಯಾರೆಂಬ ಪುರದೊಳ್। ಪರಮಶಿವಾಗಮಕಳಾ ವಿಶಾರದ ತೆನದಿಂ। ಹರಪದಭಕ್ತಿಯ ನಾಂತಾ। ದರದಿಂ ಕುಲಚಂಗನೆಂಬರಾ ಜಂಮೆರೆವಂ॥ ೨

ವ॥ ಅಂತಾಕುಳಚಂಗನೆಂಬ ರಾಜವರ್ಯಂ ಶಿವಲಿಂಗಾರ್ಚನೆಯುಂ ವಿಶೇಷಪ್ರೀತಿಯಿಂ ತನ್ನ ಕೇಳೀವನದೊಳ್ತಾಂ ಬೆಳೆಯಿಸಿದ ಪೂದೋಟಕ್ಕೆ ಪೋಗಿ ಭಕ್ತಿ ಮಿಗಲಾಗಳ್॥

ಕಂ॥ ಅಳಿಮುಟ್ಟದ ಕೆಂಪಡಗದ। ಸುಲಲಿತಗಂಧಪ್ರಸೂನ ಜಾಲಮಂ ನಲವಿಂ। ಕುಳಚಂಗಂ ಕೊಯ್ದಾಗಳ್। ಘುಳಿಲನೆ ನಿಜರಾಜಮಂದಿರಕ್ಕೆೞ್ತಂದಂ॥ ೪

ವ॥ ಅಂತೆೞ್ತಂದು ನಿಜರಾಜಮಂದಿರದೊಳ್ ಪರಿಮಳೋದಕದಿಂ ಪೂಜೆಯುಂಮಾಡಿ ಪೊಡವಟ್ಟು ನಲಿದಾಡಿ ಪಾಡುತ್ತೀಪರಿಯೊಳ್ ಕುಳಚಂಗಮಾಹೇಶ್ವರಂ ನಿಜಲಿಂಗಜಂಗಮಪರಿಚರ್ಯದ ನಿಯಮಮಂದಿನದಿನದೊಳ್ ಸಲಿಸುತ್ತಂ ಪರಮಭಕ್ತಿಯಿಂದಿರುತಿರ್ದನಂತು ಮಲ್ಲದೆಯುಂ॥

ಕಂ॥ ಘನತರಭಕ್ತಿ ಮಿಗಲ್ಕಂ। ದನುನಯದಿಂ ಲಿಂಗವಂತಜಂಗಮನಿಕರ। ಕ್ಕನುದಿನವೆಸೆದುವನೀವು। ತ್ತನುಪಮಕುಳಚಂಗಭೂಪ ನಿರ್ದಂ ಜಗದೊಳ್॥

ವ॥ ಅಂತೀಪರಿಯೊಳ್ಕುಳಚಂಗಮಾಹೇಶ್ವರಂ ಲಿಂಗಜಂಗಮಪರಿಚರಿಯದಿಂದಿರುತ್ತಂ ಮತ್ತಮೊಂದುದಿವಸಂ ಪ್ರಭಾತಸಮಯದೊಳೆರ್ದು ತನ್ನ ಪೂದೋಂಟಕ್ಕೆ ಪೊಕ್ಕಾಗಳ್॥

ಚಂ॥ ಬೆರುನನೆ ಬೆಳ್ದರಳ್ದ ಕಳಿಪೂಪಳೆವೂ ಕೊಳೆವಿರ್ದ ಪೂಕಡಂ। ದುರುಕೆಡೆದಿರ್ದ ಪೂಬಿಡದೆ ಕೀಡೆ ಕದರ್ದಂಟಿದ ಪೂಸೆಲಂದಿನೆ। ಯ್ದುರೆಮುರುಟಿರ್ದ ಪೂಪರಳೆಪತ್ತಿದ ಪೂವೆನಿಪಂತಿವೆಲ್ಲಮಂ। ತೊರೆದೊಸೆದುದ್ಘ ಪುಷ್ಪಕುಳಮಂ ನೆರೆಕೊಯ್ದನುಮೇಶಕಿಂಕರಂ॥ ೬

ವ॥ ಅಂತೀತೆರದೊಳ್ಪರಿಪರಿಯ ಕುಸುಮಂಗಳಂ ಕೊಯ್ದುಕೊಂಡು ಕುಳಚಂಗಮಾಹೇಶ್ವರಂ ನಿಜಮಂದಿರಕ್ಕೆಬಂದಾನಂದದಿಂ ಸ್ನಾನಮಂ ಮಾಡಿ ಧೌತಾಂಬರಮನುಟ್ಟು ನಿಜಸತಿವೆರಸು ಶಿವನಿಳಯಕ್ಕೆೞ್ತಂದು ಲಿಂಗದಸಮೀಪದೊಳ್ಪದ್ಮಾಸನದೊಳ್ಕುಳ್ಳಿರ್ದಾಗಳ್ ಮೋಕ್ಷಿಯಿಂ ವಿಭೂತಿರುದ್ರಾಕ್ಷಿಗಳಂ ತಾಳ್ದಾಗಳ್॥

ಕಂ॥ ಕರವೀರ ಬಕುಳಂ ಪಾ। ದರಿಮಲ್ಲಿಗೆಯೆಂಬ ಪೂಗಳಂ ಸೋದಿಸಿ ಕಂ। ಕರಪೂಜೆಗೆ ಕುಳಚಂಗಂ। ಪಿರಿದೊಲವಿಂದೆದೆಂಡೆಗಟ್ಟ ದನಾ

ಗಳ್‌॥

ವ॥ ಅಂತಾ ಪರಿಮಳದ ಪುಷ್ಪಮಾಲೆಗಳಂ ಪಡಲಿಗೆಗಳಂ ತುಂಬಿಬಾಸ
ಣಿಸಿ ಕುಳಚಂಗಮಾ ಹೇಶ್ವರಂ ಪರಮಭಕ್ತಿ ನಿಗಲ್ಕಾಗಳ್‌

ಕಂ॥ ಪರನಂಪೂಜಿಸಲೆಂದಾ। ಪರಮಮಾಹೇಶ್ವರನೆನಿಪ್ಪ ಕುಳಚಂಗಂ
ಸಾ। ದರದಿಂಪಡಲಿಗೆಯುರಳಂ ತಿರಿಗಿಕಟಾಕ್ಷದಿ ನಿರೀಕ್ಷಿಸುತ್ತಿರಲಾಗ
ಳ್‌। ೮।

ಹರವರಪೂಜೆಗೆ ಕಟ್ಟಿದ। ಪರಿಮಳಿಪಲತಾಂತಮಾಲೆಯುಂ ಕಂಡಾಗಳ್‌।
ತರಳೆಮುಡಿಯುಲ್ಕಿತೆಗೆದಾ। ಕರಮುಂಕಡಿದಿಳೆಗೆ ಕೆಡಪಿದಂ ಕುಳಚಂ
ಗಂ॥ ೯।

ಪಿರಿದುಂಭಕ್ತ್ಯುದ್ರೇಕದಿ। ಪರಮಪ್ರಿಯುಳಪ್ಪ ಸತಿಯುಕರಮಂ ಕಡಿ
ದಾ। ಸುರದಕುಳಚಂಗ ಮಾಹೇ। ಶ್ವರಂಗೆಶಿವ ನೋತುರೂಪುದೋರಿ
ದನಾಗಳ್‌॥ ೧೦।

ಉಪೇಂದ್ರವಜ್ರವೃತ್ತಂ॥ ಮರುನ್ನದೀಚುಂಬಿತ ಚಾರುಜೂಟಂಸು
ರೋರುಹಾರಾತಿ ಸಮೀರಮಿತ್ರಂ। ಕರೀಂದ್ರಚರ್ಮಾಂಭಸಿತಂಫಣೀಂ
ದ್ರಂ। ವಿರಾಜಿಸುತ್ತೊಪ್ಪಿದನದ್ರಿಜೇಶಂ॥ ೧೧।

ವ॥ ಅಂತೆಸೆವದಿವ್ಯಮೂರ್ತಿಯಂ ಕಂಡುಪರಮಾನಂದರಸದೊಳೋ
ಲಾಡಿ ಭಯಭಕ್ತಿಯಿಂ ರೋಮಾಂಚಕಂಚುಕಿತ ಗಾತ್ರನಾಗಿ ಚರಣ
ಕಮಲದೊಳ್ಪೊರಳ್ದು ಪರವಶೀಭೂತನಾಗಿರ್ದ ಕುಳಚಂಗಮಾಹೇಶ್ವ
ರನಂ ಸತ್ಕಾರುಣ್ಯದಿಂ ಗೌರೀರಮಣಂಪಿಡಿದೆತ್ತಿ ಕುಳ್ಳಿರಿಸಿಮೆಯ್ದಡವಿ
ನಂದಿನಾಥಂಗಿಂತೆಂದಂ॥

ಕಂ॥ ನಲಿದೆನ್ನಯಪೂಜೆಗೆತಂ। ದಲರಂನಿಜರಮಣಿ ಮುಡಿಯಲೆಂದೆ
ತ್ತಿಲ್ಕೋ। ಮಳಕರಮಂ ಕಡಿದನೆನ। ಲ್ಕಲಿಕುಳ ಚಂಗಂಗೆ ಸರಿಯದಾ
ರೀಧರೆಯೊಳ್‌॥ ೧೨

ವ॥ ಎಂದೀಪರಿಯೊಳಿಂಮಧುರಂ ಕೊಂಡಾಡುತ್ತೊಲವಿಂ ತಾಂಬರಿಸಿ
ದದಿವ್ಯ ವಿಮಾನದೊಳ್ಕುಳಚಂಗ ಮಾಹೇಶ್ವರನಂಕುಳ್ಳಿರಿಸಿ ನಿಯಾಮಿ
ಸಿದಾಗಳ್‌॥

ಕಂ॥ ಬಿಡದೆಕರೆವರಳ ಮಳೆಯೊಳ್‌। ಮೃಡಭಕ್ತಂಬೆರಸು ದಿವ್ಯಪು
ಷ್ಪಕಮಾಗಳ್‌। ಪೊಡೆನಮರಪಟಹರವದೊಳ್‌। ಸಡಗರದಿಂ ರಜತಗಿರಿ

ಗೆ ಬಂದುತ್ತಾಗಳ್॥ ೧೩॥

ವ॥ ಅಂತುಬಂದ ಕುಳಚಂಗಮಾಹೇಶ್ವರಂಬೆರಸು ಗಿರಿಜಾರಮಣಂ ಪರಮೋತ್ಸಾಹದಿಂ ಪ್ರಮಥಗಣಂಗಳ್ಸಹಿತೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಕುಲಿಶಧರಂಪೊಗಳುತ್ತಿರೆ। ಕಲಿಕುಳಚಂಗರ್ಗೆ ಮೆಚ್ಚಿ ಗಣಪದಮಂಕೊಟ್ಟೋಲವಿಂ ಮೆರೆವಾಗಳ್ಗಿರಿ। ನಿಳಯನೆನಿಪ್ಪ ಭವನೆಸೆದನಾ ಸ್ವಾಮಿಕೆಯೊಳ್॥ ೧೪॥

ಗದ್ಯ ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ಕುಳಚಂಗ ಮಾಹೇಶ್ವರಕಥಾವೃತ್ತಾಂತಂದ್ವಿಚತ್ವಾರಿಂಶದಾಶ್ವಾಸಂ॥

...ಶ್ರೀ...

## ನಾಲ್ವತ್ತು ಮೂರನೆಯಆಶ್ವಾಸಂ

### ಕಲಿಕಂಭ ಮಾಹೇಶ್ವರವೃತ್ತಾಂತಂ

ಅಂಬುಜಸಂಭವನುತಕಲಿ। ಕಂಭರವೀರಕ್ಕೆ ಮೆಚ್ಚಿ ಗಣಪದಮಂ ಸಾ। ಡಂಬರದಿನಿತ್ತುಮೆರೆವಾ। ಶಾಂಭವಿ ವಲ್ಲಭನೊಲ್ದು ಪಾಲಿಕೆನಮ್ಮಂ॥ ೧

ಅತಿಲಸಿತ ಚೋಳಧರೆಯೊಳ್। ಸಿತಕಂಠಾಗಾರದಿಂ ಮಹಾಸದ್ಭಕ್ತ। ಪ್ರತತಿಗಳಚೆಲ್ವಿನಿಂದು, ನ್ನತತಿರುಮರೆಯೆಂಬ ಸತ್ಪುರಂಕರಮೆಸೆಗುಂ॥ ೨।

ತಿರುಮರೆಯೆಂಬಾಪುರದೊ। ಳ್ವರಜಂಗಮಲಿಂಗಭಕ್ತಿಯಂ ನೆರೆತಾಳ್ದಿ। ದರದಿಂ ಮನ್ನಿಯುವಂಶದ। ಕರಿಕಂಭನೆನಿಪ್ಪ ಭಕ್ತ ನೆಸೆವುತಿರ್ದಂ॥

ವ॥ ಮತ್ತಮಾ ಕಲಿಕಂಭಂಮಾಳ್ಪ ಜಂಗಮಭಕ್ತಿಯೆಂತೆಂದೊಡೆ॥

ಮ॥ ಅನುರಾಗಂಮಿಗೆ ಮಜ್ಜನಂ ವಸನಮುಂ ಭೂಷಾಳಿಮಾಲ್ಯಾನುಲೇಪನಮಾರೋಗಣೆಚಾರು ಕಾಮಿನಿಲಸತ್ಸಂಗೀತಸಾರಂ ಸುವಾ

ಘನವೆಂದೆಂಬೆಸೆವಷ್ಟ ಭೋಗದೊದವಂ ಸಜ್ಜಂಗಮಂಗಳಿನೆಟ್ಟನೆ ಮಾ
ಡುತ್ತಿರ್ಪ ತ್ರಿಪುರಘ್ನನಲ್ಲಿ ಕಲಿಕಂಭಾಖ್ಯಂ ಮಹಾಶ್ಚರ್ಯದಿಂ॥ ೪॥

ವ॥ ಅಂತು ಕಲಿಕಂಭಮಾಹೇಶ್ವರಂ ಕಾರಣಮೂರ್ತಿ ಲಿಂಗಶಿಕ್ಷಾಮೂರ್ತಿ ಲಿಂಗಭವದೂರಮೂರ್ತಿ ಲಿಂಗಪಾದೋದಕ ಪ್ರಸಾದದಾತೃಮೂರ್ತಿ ಲಿಂಗಶಿವತಾತ್ಪರ್ಯ ಭೋಗಮೂರ್ತಿ ಲಿಂಗಮೆಂದೆನಿಪ ಜಂಗಮಂಗಳ್ಗೆ ಮಹಾಭಕ್ತಿಯಿಂ ಮನವಾರೆ ಘನಂ. ಸಮೆಯಲ್ಕೆ ಸರ್ವಭೋಗಂಗಳಂ ಭೋಗಿಸಲ್ಕಿಂತು ದಾಸೋಹಂ ಭಾವಮನಳವಟ್ಟು ತನ್ನುವಿನಹಂಕಾರವಳಿದುಟ್ಟ ಮಹಾಪ್ರಸನ್ನತೆಯುಂ ಪಡೆದು ಜಂಗಮಲಿಂಗಾರ್ಚನ ವ್ಯಾಪರಿಯೆಂದ ರಿಪುತ್ತ್ರಂ ಜಂಗಮಭಕ್ತನೆನಿಸಿ ಪಲವುವತ್ಸರಂ ಬೆಸಕೆಯ್ಯುತಿರ್ದನಂತುಮಲ್ಲದೆಯುಂ॥

ಚಂ॥ ಪುರಹರಭಕ್ತನಪ್ಪ ಕಲಿಕಂಭರಜಂಗಮಭಕ್ತಿಗಂದು ಸಾವಿರ
ದಿ ನೆಗಳ್ದು ತದ್ನೃಪದ ಭಟ್ಟನೆನಿಪ್ಪ ವನೊರ್ವನಂದು ಬಂಧುರತರ
ಜಂಗಮತ್ವಮದು ಲೇಸೆನುತಂ ಬೆಸಕ್ಕೈಯಲಾರದಾ। ಸುರದೊಳವಿಟ್ಟು
ಪೋಗಿವರಜಂಗಮವೇಷವನಾಂತನರ್ಥಿಯಿಂ॥ ೫॥

ವ॥ ಅಂತು ಮುನ್ನಂ ಭಟ್ಟನಾಗಿರ್ದಂ ಬಿಟ್ಟು ಪೋಗಿಪ್ಪತ್ತು ವರುಷಕ್ಕೆ ಮರಪಿಕ್ಕಿ ರುದ್ರವೇಷಧಾರಿಯಾಗಿ ಮತ್ತನೇಕಲಿಂಗಮೂರ್ತಿಗಳಪ್ಪ ಜಂಗಮಲಿಂಗಂಗಳಂ ಕೂಡಿಕೊಂಡು ಸಾಡಂಬರದಿಂದಾ ಕಲಿಕಂಭಮಾಹೇಶ್ವರನರಮನೆಯುಂ ಪೊಗಲ್ಕಾಗಳ್॥

ಕಂ॥ ಗುಡಿತೋರಣದಿಂದಿದಿಗೊರ್ಗಂ! ಡೊಡಲಂ ಶಿವಶರಣರಡಿಗ
ಳೊಳ್ಸಲವಿಂ ಸೈ। ಗೆಡಪಿ ಶರಣಾರ್ಥಿಯೆನುತಂ। ಕಡುನೇಹದಿ ಪರ್ಚ
ಕುಳ್ಳಿರಿಸಿದಂ ಭಕ್ತಂ॥

ವ॥ ಅಂತು ಕುಳ್ಳಿರ್ದ ಶರಣಜನದೊಳ್ ಮಣಿಹಾರಮಧ್ಯದೊಳ್ತರಳಮೊಪ್ಪುವಂತೆ ಪೊಸತಾಗಿ ವೇಷಮಂ ತಾಳ್ದು ಬಂದ ಜಂಗಮಂಗಳ್ಗೆ ಮಂಗಳವೆನಿಸುತ್ತಿರ್ದನಾಗಳ್॥

ಕಂ॥ ಮಿಸುಪವರಜಡೆಯ ನುಡದ್ಧ। ಳಸಿದವಿಭೂತಿಯ ನನೇಕ
ರುದ್ರಾಕ್ಷೆಗಳಂ। ಪೊಸಕಾಶಾಂಬರದಿಂ ರಾಜಿಸುವಾ ಜಂಗಮಮೂ
ರ್ತಿ ಪಿರಿದೆಸೆದಿರ್ಕುಂ॥ ೬

ವ॥ ಅಂತೆಸೆವ ಪೊಸಜಂಗಮದ ಪಾದಮಂ ತೊಳೆದರ್ಚಿಸಿ ಕಲಿಕಂಭ

ಮಾಹೇಶ್ವರಂ ತನ್ನರಸಿಯುಮಂ ಪ್ರಿಯದಿಂ ಕರೆದಿಂತೆಂದಂ||

ಚಂ|| ಹರವರಮೂರ್ತಿಯಪ್ಪಿರಿಯರಂ ಪ್ರಿಯನೊಲ್ದಿರಗೆಂದೆನಲ್ಕೆ ನಿ| ರ್ಭರದೊಳೆ ನೋಡಿ ಕಂಡರಿದು ಮುನ್ನ ಕಟೆನ್ನಯ ಗೇಹದಲ್ಲಿ ಕಿಂ| ಕರನೆನಿಸಿರ್ಪವಂಗೆ ತಲೆವಾಗುವಳಲ್ಲದಿ ಟಕ್ಕೆ ತಾಂ ನಗು| ತ್ತಿರದೆ ಮಗುಳ್ದು ತತ್ಸತಿಗೆ ಕೋಪಿಸಿದಂ ಕಲಿಕಂಭನೆಳ್ತಿಯಿಂ||

ವ|| ಅಂತು ಕೋಪಾಟೋಪನಾಗಿ ಕಲಿಕಂಭವೀರ ಮಾಹೇಶ್ವರನಿಂತೆಂದಂ||

ಪು| ಪರಸಂಮುಟ್ಟೆ ಸುವರ್ಣವಾದ ಬಳಕಂ ಕಾಬೊರ್ನ್ನದೆಂದೆಂಬರೇ| ಹಗನಂತಾಳ್ದರ ಭಕ್ತರೊಳ್| ಕುಲಮುಮಂ ಶೀಲಮುಮಂ ವಿಚಾರಿಪ್ಪುದೇ| ಪರಶೈವಾಗಮ ಕೋವಿದರ್ನಿರುತಮೆಂದಂದಾಗಳಾ ಬೋಧದಿಂ ಕಲಿಕಂಭಂ ಸರಿಜಂಗಮಕ್ಕೆರಗಳೆಂದು ಪ್ರೇಕವಂತಾಳ್ದಿದಂ||

ವ| ಅಂತು ಪ್ರೇಕದಿಂ ಕಡುಮುಳಿದು ಕಿಡಿಕಿಡಿಯಾಗಿ ಘುಡಿಘುಡಿಸುತ್ತಾಗಳ್||

ಕಂ|| ಮೃಡಮೂರ್ತಿಯಪ್ಪ ಜಂಗಮ| ದಡಿಗೆರಗದೆ ನಿಂದೆಗೆಯ್ದಳೆಂದತಿ ಛಲದಿಂ| ಮಡದಿಯ ತಲೆಯಂ ಖಡ್ಗದಿ| ಕಡಿದುರ್ಬಿದಿರೆರ್ದನಾಗಳಾ ಕಲಿಕಂಭಂ|| ೧೦

ವ|| ಅಂತು ನಿಜಪ್ರಾಣಲಿಂಗಮಪ್ಪ ಜಂಗಮದ ನಿಂದೆಗೆಯ್ದಳೆಂದು ತನ್ನರಸಿಯ ಸಿರಮಂ ಕಡಿದ ಗಣಾಚಾರ್ಯ ಶೀಲನೆಂಪ ನಿಜ ಕಲಿಕಂಭಮಾಹೇಶ್ವರನ ಭಕ್ತಿಯ ನಿಷ್ಠೆಗೆ ಮೆಚ್ಚಿ ಗಿರಿಜಾರಮಣಂ ನಿಜಮೂರ್ತಿಯಂ ತೋರಿದಾಗಳ್||

ಮಂದಾರವೃತ್ತಂ|| ಚಾರುಜಟಾಜೂಟಂ ನದಿರೌದ್ರಂ ಮೌಳಿತಸುತಂ ಪನ್ನಗರಾಜಂ| ಸ್ಮೇರದ ಪಂಚಾಸ್ಯಂ ದಶದೋರ್ವಿಸ್ತಾರದಿನೊಪ್ಪೆಲ್ಕೊಪ್ಪಿದನೀಶಂ||

ವ|| ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರಮಾನಂದರಸಾಬ್ಧಿಯೊಳೋಲಾಡಿ ಪದಕಮಳಯುಗಳದೊಳಗೊಡಲನೀಡಾಡಿ ಪರವಶನಾಗಿರ್ಪ ಕಲಿಕಂಭಮಾಹೇಶ್ವರನಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿಸಿ ಮೊಯ್ದುಡವಿಬೋಳೈಸುತ್ತಂ ನಂದಿಕೇಶ್ವರನೊಳ್| ಲೋಕೇಶ್ವರನಿಂತೆಂದಂ||

ಘನಮೆಂದೆಂಬೆಸೆವಪ್ಪ ಭೋಗದೊದವಂ ಸಜ್ಜಂಗಮಂಗಳಿನೆ ಟ್ಟನೆಮಾ
ಡುತ್ತಿರ್ದು ತ್ರಿಪುರ್ದನಲ್ಲಿ ಕಲಿಕಂಭಾಖ್ಯಂ ಮಹಾಶ್ಚರ್ಯದಿಂ॥ ೪॥

ವ॥ ಅಂತಾ ಕಲಿಕಂಭಮಾಹೇಶ್ವರಂ ಕಾರಣಮೂರ್ತಿ ಲಿಂಗಶಿಕ್ಷಾ
ಮೂರ್ತಿ ಲಿಂಗಭವದೂರಮೂರ್ತಿ ಲಿಂಗಪಾದೋದಕ ಪ್ರಸಾದದಾ
ತೃಮೂರ್ತಿ ಲಿಂಗಶಿವತಾತ್ಪರ್ಯ ಭೋಗಮೂರ್ತಿ ಲಿಂಗಮೆಂದೆನಿಪ
ಜಂಗಮಂಗಳ್ಗೆ ಮಹಾಭಕ್ತಿಯಿಂ ಮನವಾರೆ ಘನಂ. ಸಮೆಯಲ್ಕೆ ಸರ್ವ
ಭೋಗಂಗಳಂ ಭೋಗಿಸಲ್ಕಿಂತು ದಾಸೋಹಂ ಭಾವಮನಳವಟ್ಟು ತ
ನ್ನುವಿನ ಹಂಕಾರವಳಿದು ಟ್ಟ ಮಹಾಪ್ರಸನ್ನತೆಯುಂ ಪಡೆದು ಜಂಗಮ
ಲಿಂಗಾರ್ಚನ ವ್ಯಾಪರಿಯೆಂದ ರಿಪುತ್ತಂ ಜಂಗಮಭಕ್ತನೆನಿಸಿ ಪಲವುವ
ತ್ಸರಂ ಬೆಸಕೆಯ್ಯುತಿರ್ದ ನಂತುಮಲ್ಲದೆಯುಂ!।

ಚಂ॥ ಪುರಹರಭಕ್ತನಪ್ಪ ಕಲಿಕಂಭರಜಂಗಮಭಕ್ತಿಗಂದು ಸ್ವಾಪರ
ದಿ ನೆಗಳ್ದು ತದ್ನೃಪದ ಭಟ್ಟನೆನಿಪ್ಪ ವನೊರ್ವನಂದುಬಂ'ಧುರುತರ
ಜಂಗಮತ್ವಮದು ಲೇಸೆನುತಂ ಬೆಸಕೈಯಲಾರದಾ। ಸುರದೊಳವಿಟ್ಟು
ಪೋಗಿವರಜಂಗಮ ವೇಷವನಾಂತನರ್ಥಿಯಿಂ॥ ೫॥

ವ॥ ಅಂತುಮುನ್ನಂ ಭಟ್ಟನಾಗಿರ್ದ ಬಿಟ್ಟು ಪೋಗಿಪ್ಪತ್ತುವರುಷಕ್ಕೆ
ಮರಪಿಕ್ಕಿ ರುದ್ರವೇಷಧಾರಿಯಾಗಿ ಮತ್ತನೇಕಲಿಂಗಮೂರ್ತಿಗಳಪ್ಪ
ಜಂಗಮಲಿಂಗಂಗಳಂ ಕೂಡಿಕೊಂಡು ಸಾಡಂಬರದಿಂದಾ ಕಲಿಕಂಭಮಾ
ಹೇಶ್ವರನರಮನೆಯುಂ ಪೊಗಲ್ಕಾಗಳ್॥

ಕಂ। ಗುಡಿತೋರಣದಿಂದಿದಿಗೊರ್ಂ! ಡೊಡಲಂ ಶಿವಶರಣರಡಿಗ
ಳೊಳ್ನಲವಿಂ ಸೈ। ಗೆಡಪಿಶರಣಾರ್ಥಿಯೆನುತಂ। ಕಡುನೇಹದಿ ಪೆರ್ಚಿ
ಕುಳ್ಳಿರಿಸಿದಂ ಭಕ್ತಂ॥

ವ। ಅಂತುಕುಳ್ಳಿರ್ದ ಶರಣಜನದೊಳ್ ಮಣಿಹಾರಮಧ್ಯದೊಳ್ತರಳ
ಮೊಪ್ಪುವಂತೆಪೊಸತಾಗಿ ವೇಷಮಂ ತಾಳ್ದು ಬಂದಜಂಗಮಂಗಳ್ಗೆ ಮಂಗ
ಳವೆನಿಸುತ್ತಿರ್ದನಾಗಳ್॥

ಕಂ। ಮಿಸುಪವರಜಡೆಯ ನುಡಿದ್ಧ। ಳಸಿದವಿಭೂತಿಯ ನನೇಕ
ರುದ್ರಾಕ್ಷೆಗಳಂ। ಪೊಸಕಾಶಾಂಬರದಿಂ ರಾಜಿಸುವಾ ಜಂಗಮಂ ದಮೂ
ರ್ತಿಪಿರಿದೆಸೆದಿರ್ಕುಂ॥



ವ॥ ಅಂತಸವಪೊಸಜಂಗಮದ ಪಾದಮಂ ತೊಳೆದರ್ಚಿಸಿ ಕಲಿಕಂಭ

ಮಾಹೇಶ್ವರಂ ತನ್ನರಸಿಯುಮಂ ಪ್ರಿಯದಿಂಕರೆದಿಂತೆಂದಂ॥

ಚಂ॥ ಹರವರಮೂರ್ತಿಯುರ್ವಿಗಿಳಿದುರಗಪ್ರಿಯನೊಲ್ದು ಬಗೆಂದೆನಲ್ಕೆನಿ| ರ್ಭರದೊಳೆನೋಡಿ ಕಂಡರಿದು ಮುನ್ನಕಟನ್ನಯ ಗೇಹದಲ್ಲಿ ಕಿಂ| ಕರನೆನಿಸಿರ್ದವಂಗೆತಲೆ ವಾಗುವಳಲ್ಲದಿಟಕ್ಕೆ ತಾಂನಗು| ತ್ತಿರದೆ ಮಗುಳ್ದು ತತ್ಸತಿಗೆ ಕೋಪಿಸಿದಂ ಕಲಿಕಂಭನೆತ್ತಿಯಂ॥ ೮

ವ॥ ಅಂತು ಕೋಪಾರೂಢನಾಗಿ ಕಲಿಕಂಭವೀರ ಮಾಹೇಶ್ವರನಿಂತೆಂದಂ॥

ಮ॥ ಪರಮಸಂಪ್ರಾಪ್ತಸುವರ್ಣವಾದ ಬಳಕಂ ಕಾಬೊರ್ನ್ನೆದೆಂದೆಂ ಬರೇ| ಹರನಂತಾಳ್ದರಭಕ್ತರೊಳ್| ಕುಲಮುಮಂ ಶೀಲಮುಮಂ ವಿಚಾರಿಪ್ಪುದೇ| ಪರಶೈವಾಗಮ ಕೋವಿದರ್ನಿರುತಮೆಂದಂದಾಗಳಾ ಬೋಧದಿಂ ಕಲಿಕಂಭಂ ಸರಿಜಂಗಮಕ್ಕೆರಗಳೆಂದುದ್ರೇಕವಂತಾಳ್ದವಂ॥

ವ॥ ಅಂತುದ್ರೇಕದಿಂ ಕಡುಮುಳಿದು ಕಿಡಿಕಿಡಿಯಾಗಿ ಘುಡಿಘುಡಿಸುತ್ತಾಗಳ್॥

ಕಂ॥ ಮೃಡಮೂರ್ತಿಯಪ್ಪ ಜಂಗಮ| ದಡಿಗೆರಗದೆ ನಿಂದೆಗೆಯ್ದಳೆಂದತಿ ಛಲದಿಂ| ಮಡದಿಯ ತಲೆಯುಂ ಖಡ್ಗದಿ| ಕಡಿದುರ್ಬಿದಿರೆರ್ದ ನಾಗಳಾ ಕಲಿಕಂಭಂ॥ ೯

ವ॥ ಅಂತು ನಿಜಪ್ರಾಣಲಿಂಗಮಪ್ಪಜಂಗಮದ ನಿಂದೆಗೆಯ್ದಳೆಂದು ತನ್ನರಸಿಯ ಸಿರಮಂ ಕಡಿದ ಗಣಾಚಾರ್ಯ ಶೀಲನೆಂಪ ನಿಜ ಕಲಿಕಂಭಮಾಹೇಶ್ವರನ ಭಕ್ತಿಮನಿಷ್ಠೆಗೆ ಮೆಚ್ಚಿ ಗಿರಿಜಾರಮಣಂ ನಿಜಮೂರ್ತಿಯಂ ತೋರಿದಾಗಳ್॥

ಮಂದಾರವೃತ್ತಂ॥ ಚಾರುಜಟಾಜೂಟಂ ನದಿರೌದ್ರಂ ಮಾಳುತ್ತಿರ್ಪಿತಂ ಪನ್ನಗರಾಜಂ| ಸ್ಮೇರದಪಂಚಾಸ್ಯಂ ದಶದೋರ್ವಿಸ್ತಾರದಿನೊಪ್ಪೆಲ್ಕೊಪ್ಪಿದನೀಶಂ॥

ವ॥ ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರಮಾನಂದರಸಾಬ್ಧಿಯೊಳೋಲಾಡಿ ಪದಕಮಲಯುಗಳದೊಳಗೊಡಲ ನೀಡಾಡಿ ಪರವಶನಾಗಿರ್ಪ ಕಲಿಕಂಭಮಾಹೇಶ್ವರನಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿಸಿ ಮೈದಡವಿ ಬೋಳೈಸುತ್ತಂ ನಂದಿಕೇಶ್ವರನೊಳ್| ಲೋಕೇಶ್ವರನಿಂತೆಂದಂ॥

ಕಂ॥ ವರಭವದಸುಖಶನೆಲಿ ಯೆ। ನಿವರಸಿಯನೀಕ್ಷಿಸದೆಜಂಗಮಕ್ಕೆ ರಗೆಳೆನು। ತ್ತುರುತರಕೋಪದೊಳಸಿಯಿಂ। ಶಿರವರಿದನೆನಲ್ಕಿವಂಗದಾದೊರ್ ರೆಥರೆಯೊಳ್॥ ೧೨

ವ॥ ಎಂದೀಶ್ವರಂಕೊಂಡಾಡುತ್ತಾಗಳ್॥

ಕಂ॥ ಧರೆಯುಂಬೆಳಗುತೆಬಂದಾ। ಸುರಪುಷ್ಪ ಕದಲ್ಲಿ ಕೊರ್ತರ್ಕಳಿಕಂಭರನಾ। ದರದಿಂಕುಳ್ಳಿರಿಸಿಶಿವಂ। ಕರುಣದಿ ನಿಯಮಿಸಿದ ನರಳಮಳೆಯೊಳಗಾಗಳ್॥

ಕರಿಕಂಘರ್ವೆಸತ್ತ್ಯಾ। ಸುರದನಿಮಿಷಪಟಹ ರವದಮಣಿಪುಷ್ಪಕಮಂ। ಬರಮುಂಬೆಳಗುತ್ತಿ ಭಾ। ಸುರರಾಪ್ಯಾಚಳಕೆ ಬಂದುದುತ್ಸವದಿಂದಂ॥ ೧೪

ವ॥ ಅಂತುಸಂತಸದಿಂ ಬಂದಕಲಿಕಂಭಮಾಹೇಶ್ವರಂ ಬೆರಸುಗಿರಿಜೆಯರಸಂ ಪ್ರಮಥಗಣಾನ್ವಿತ ಪೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಸ್ವರ್ಗಪತಿಮುಖ್ಯ ನಿರ್ಜರ। ವಗ್ರಂಪೊಗಳುತ್ತಿರಲ್ಕೆ ನೇವಿಂಕಲಿಕಂ। ಭರ್ಗಗಣಪದಮನಿತ್ತಾ। ಭರ್ಗಂಪಿರಿದೊಪ್ಪುತಿರ್ದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಮಾಣಿಕ್ಯಮಾಲ್ಯಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಸುಲಿಗೆರೆಯ ಪುರಾಧಿಪ ಶ್ರೀ ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ಕಲಿಕಂಭ ಮಾಹೇಶ್ವರಕಥಾವೃತ್ತಾಂತಂ ತ್ರಿಚತ್ವಾರಿಂಶದಾಶ್ವಾಸಂ

—ಶ್ರೀ—

ನಾಲ್ವತ್ತುನಾಲ್ಕನೆಯಆಶ್ವಾಸಂ

ತಂಡೇಶಮಾಹೇಶ್ವರಕಥಾವೃತ್ತಾಂತಂ

ಖಚರಸುರಕಿನ್ನರೋರಗ। ನಿಚಯಂಪೊಗಳುತ್ತಿರಲ್ಕೆ ತಂಡೇಶಂ ಗಂ। ದಃಶಳಿತಪಟಪಿರ ಕಾಟ್ಟಾ। ಸುಚರಿತ ಸೋಮೇಶನೊಲ್ದು ಪಾಲಿ

ಕೆನಮ್ಮಂ॥ ೧

ಸ್ವಾಗತೆ॥ ನೀಲಲೋಹಿತ ನಿವಾಸಮೆನಿಪ್ಪ। ಚೋಳದೇಶದೊಳ
ಗೂರ್ಜಿತ ಸಪ್ಪ। ಕ್ಕಾತ್ತಿಳಿತನೊಳ್ನೊಲ ವಿಂದೆಸೆಯುಲ್ಪ। ಲ್ಲೀಲೆಯೆಂಬವು
ರವಿದರ್ಪದೊಳ್ಪಿಂ॥ ೨

ಕಂ॥ ಅದುಕಾವೇರೀ ತಟದೊಳ್ನಿರೆ। ಪದೆದೊಪ್ಪುವುದಲ್ಲಿ ಸಿಂಪಿನೊ
ಳ್ಮುತ್ತೊಗೆವಂ। ದದಿಮೂರ್ಖವಿಪ್ರನು ದರದೊಳುದಯಿಸಿ ತಂಡೇಶ
ನೆಂಬಪೆಸರಿಂದಿರ್ದಂ॥ ೩

ಆತಂಡೇಶಂ ಕ್ರೀಡೆಯೊ। ಳೋತೀಶ್ವರಭಕ್ತ ರಾತ್ಮಜರಸಂಗತಿ
ಗಂ। ಗಾತಟದೊಳಮಳವಾಳ। ವ್ರಾತದ ಲಿಂಗಮನೆ ಮಾಡಿಪೂಜಿಸುತಿ
ರ್ದಂ॥

ವ॥ ಅಂತೀಪರಿಯೊಳ್ಮಳಲ ಲಿಂಗಂಗಳಂಮಾಡಿ ಪತ್ರಪುಷ್ಪಂಗಳಂತಂ
ದುಭಕ್ತಿಭಾವದಿಂ ಪೂಜೆಗೆಯ್ದು ತಮ್ಮ ಮನೆಯೆಂಬುದಂ ಮರೆದುಪಸಿ
ಪ್ರವುಂ ನೀರಳ್ಕೆಯುಮಂತೊರೆದುಶಿವಧ್ಯಾನದಿಂ ತಂಡೇಶನಿರಲ್ಕಂಡತಿ
ಮೂಢನಪ್ಪತಂದೆಕಂಡುಕಿಡಿಕಿಡಿಯೋಗಿ॥

ಕಂ। ಇವನಕಟ ಕೆಟ್ಟುಪೋದಂ। ಶಿವಭಕ್ತರಮಕ್ಕಳೊಡನೆಬಿಡದಾ
ಡಿಪೆನು। ತ್ತವಿವೇಕದಿ ನಾವಿಪ್ರಂ। ಭವನಕೆ ತಂಡೇಶನಂ ಕರಲ್ದೆಳೆ
ದೊಯ್ದಂ॥ ೫

ವ॥ ಅಂತಳೆದೊಯ್ದು ಲಪ್ರೊ ನೀಂಬೂದಿಯುಮರುಳ್ಗಳಮಕ್ಕಳೊಡನಾ
ಡಿ ಕೆಟ್ಟುಪೋಗದೆ ನಮ್ಮಾಯಾಕಳಪಿಂಡಮ ಕಾವುದೆಂದು ಪೇಳಲ್ಕೈ
ಕೊಂಡು ಮತ್ತಮಾಗಳ್ತಂಡೇಶಂತನ್ನಮನದೊಳಗಿಂತೆಂದಂ॥

ಕಂ। ಅಂತಾತಂಡೇಶಂ ಮುದ। ಮಂತಾಳ್ದು ಪ್ರ। ಗಳಪಿಂಡನಾಡಿಪನೆ
ವದಿಂ। ಕಾಂತಾರದೊಳೀಶನನೇ। ಕಾಂತದೊಳರ್ಚಿಸುವ ಚಿತ್ತದಿಂ
ಕೈಕೊಂಡಂ॥ ೬

ವ॥ ಅಂತುಕೈಕೊಂಡ ತಂಡೇಶಂ ವಿಭೂತಿರುದ್ರಾಕ್ಷೆಗಳನಾದುಷ್ಟಾ
ತ್ಮಕನಪ್ಪ ತಂದೆಕಾಣದಂತೆ ಬೈತಿಟ್ಟೆಂದು ನಿಶಿತಪರಶುವಂ ಪೆಗಲೊ
ಳಾಂತುಸಲ್ಲೀಲೆಯಿಂ ಗಡಣದಗೋವರ್ಗರನಾಕಳಪಿಂಡನಾಡಿಸಲ್ಕೆಪೊ
ರಪೊಟ್ಟಾಗಳ್॥

ಕಂ। ಗಡಣದಗೋವರ್ಗಸಹಿತಂ। ದಡವಿಗೆತಂಡೇಶನೆಯ್ದಿ ಗೋವಿ

ನಪಿಂಡಂ। ಬಿಡೆಮೇಯಿಸುತಂ ಗಂಗೆಯ। ತಡಿಗೆಯ್ತಂದಂ ವಿಹೋ
ಷ್ಟವಂ ಮಿಗಲಾಗಳ್॥

ವ॥ ಅಂತಾ ಕಾವೇರೀನದಿಯ ತಟಕೆಯ್ತಂದು ಜಳಕಂಬೊಕ್ಕು ವಿಭೂ
ತಿರುದ್ರಾಕ್ಷೆಗಳಂ ತಾಳ್ದು ಕೋಮಳಮಪ್ಪ ಮಳಲಲಿಂಗಮಂ ಮಾಡಿಪಲ
ಪಾಕಳಪಾಲಂ ಕರೆದು ಮಜ್ಜನಕ್ಕೆರೆದು ಕಕ್ಕೆಯ ಪೂಗಳಿಂ ಪೂಜಿಸೆಯು
ಪಂಚಾಕ್ಷರಿಯಂ ಜಪಿಸುತ್ತಂ ಬಲವಂದು ದಂಡನಮಸ್ಕಾರಮಂ ಮಾಡಿ
ಮನೋಭಾವದ ಭಕ್ತಿಯಿಂ ಪ್ರಸಾದಮಂ ಕೊಂಡು ತಂಡೇಶಂ ಪರಿಪರಿ
ಯುನಿಯಮಂ ನಡೆಸಲಿಸುತ್ತ ನಿರುತಿರ್ದನಂತುಮಲ್ಲದೆಯುಂ॥

ಕ॥ ಪಲವುದಿನದ ವಿಪ್ರಕುಮಾರದಿ। ನೊಲವಿಂದಂ ಮಳಲಲಿಂಗಮಂ ಪೂ
ಜಿಸಿನಿರ್ಮಳಭಕ್ತಿಭಾವದಿಂ ಸಲೆನಿಲೆ ತಂಡೇಶಂ ಮಹೇಶಭಜನೆಯೊ
ಳಿರ್ದ॥ ೮

ವ॥ ಅಂತೀಪರಿಯ ಭಜನೆಯೊಳ್ ತಂಡೇಶನಿರುತ್ತೊಂದು ದಿವಸದೊ
ಳ್॥

ಕಂ॥ ಆವಿನಪಿಂಡಂ ಕಾವೃತೆ। ಕಾವೇರಿಯ ನದಿಗೆಬಂದು ತಂಡೇಶಂ
ಸ್ಥಾಪ್ಪಿವದಿವಿಭೂತಿಯುಂ ತಳ್ತೆ। ಡಾವಾಳುಕಮಂ ತರಂಗದಿಂ ತೆಗೆದಾ
ಗಳ್॥ ೯

ಥಳಥಳಿಸಿ ಪೊಳೆವಮಳಲಿಂ। ಏಳಸಿತಲಿಂಗಮನೆ ಮಾಡಿ ಭಕ್ತಿಮಿಗ
ಲ್ಗೋ। ಕುಳಮಂ ನೆರೆಕರೆದು ಸುಧಾ। ಜಳದಭಿಷೇಕಮನೆ ಮಾಡಿದಂ
ತಂಡೇಶಂ॥ ೧೦

ಪುತ್ತುಮನಂತರಂ

ಕಂ॥ ವಿನುತದ್ರೋಣಂಗುಳ್ಳಂ। ವನಕುಂದಂ ಕಕ್ಕೆ ಯೆಕ್ಕೆಯೆಂಬಿವ
ರಲರಿಂ। ಮನವೊಲ್ದೊಲ್ದಾ ಲಿಂಗಾರ್ಚನೆಯುಂ ನೆರೆಮಾಡಿಮಾಡಿ ನಲಿ
ವುತ್ತಿರ್ದಂ॥

ಪರವಶದ ಭಕ್ತಿಯಿಂಬಂ। ಧುರಲಿಂಗದ ಮುಂದೆ ಕುಣಿದು ವಿಪ್ರ
ಕ್ಕೆಕರಂ। ಪೊರಳ್ದು ಬಲವಂದು ಭಕ್ತಂ। ಪಲಮುಧ್ಯಾನಮನೆ ತಾಳ್ದುಮೆ
ಯ್ಮರೆದಿರ್ದಂ॥

ವ॥ ಅಂತು ಶಿವಧ್ಯಾನದಿಂ ಮೆಯ್ಮರೆಯಲ್ಕಾಗಳೆ ಆಪನೆಯು ಗೋವ
ರ್ಗಂಡು ಪರಿವುಪೋಗಿ ತತ್ಪಿತಂಗೆ ನಿನ್ನ ಮಗನಾಕುಳಗಳಂ ಕರೆದು

ಪಾಲೆಲ್ಲವಂ ಚೆಲ್ಲಿಕೆಡಿಸುತ್ತಿರ್ದಪನೆಂದುಪೇಳಲಕ್ಕಾಮೂರ್ಖನಪ್ಪವಿಪ್ರಂ ಕೇಳ್ದು ಕಿಡಿಕಿಡಿವೋಗಿ ಮುರುಗುತ್ತಂ ಪರಿದುಪೋಗಿ ಕಾವೇರೀತೀರ ಕ್ಕೆಲ್ತಂದು ನೋಳ್ಪಗಳ್‌||

ಕಂ|| ಪಂಚಾಕ್ಷರಿಯಂ ಜಪಿಯಿಸು| ತಂಚೆಲಿಯಿಗಡೀಶನಿಷ್ಠೆಯಿಂದಿ ರ್ಪ ಮಹೋ| ದಂಚಿತಚಿತ್ತದಮಗನಂ ಚಂಚಳಮತಿಯುಪ್ಪ ಪಾಪಿವಿ ಪ್ರಂಕಂಡಂ|| ೧೩

ಚಂ|| ಮಗನಿದಿರಲ್ಲಿ ತೋರ್ಪತುಳ ವಾಳುಕಲಿಂಗಮನೆಂಟು ದಿಕ್ಕಿ ನೊಳ್| ಮಿಗೆಪರಿದಿರ್ಪ ಪಾಲಪೊನಲಂ ನೆರೆಕಂಡುಮಹೋಗ್ರಕೋ ಪದಿಂ| ಭುಗಿಲಿಪುವಕ್ಕಟೀವ್ಯಸನದಿಂ ಸುಧೆಯಂಬರಿಕೈದನೆಂದುಮುಂ ದಿಗೆ ಪರಿತಂದನಾದ್ವಿಜನುದಗ್ರತೆಯಿಂ ನೆರೆಪೊಯ್ಯನಲಕ್ಕರಿಂ||]

ಕಂ|| ಮುನಿದು ಘುಡುಘುಡಿಸಿ ಮಗನಂ|ಜನನುತಮಾಹೇಶವರ್ಗ ಮಂನಿಂದಿಸುತ್ತಂ| ಘನಪಾಪಿವಿಪ್ರನಾಮಾ| ಲಿನಲಿಂಗಮನಕ್ಕಟೊದೆ ದುಕೆಡಪಿದನಾಗಳ್‌|| ೧೫

ವ|| ಅಂತೊದೆದು ಕೆಡಪಲದಂಕಂಡು ತಂಡೇಶಂಕಡುದುಃಖದಿಂಮಿ ಡುಮಿಡನೆಮಿಡುಕಿ ಕೋಪದಿಂ ಘುಡುಘುಡಿಸಿಕಿಡಿಕಿಡಿಯೋಗಿ ಪತ್ತಿರಿ ರ್ದಕೊಡಲಿಯಂಕೊಂಡೆದಾರ್ಗಳ್‌||

ಕಂ|| ಕಡುಗೆರಳಿ ಕೊಡಲಿಯಿಂದಂ| ಕಡಗಿಶಿವ ದ್ರೋಹಿಯುಪ್ಪ ತಾ ತನತಲೆಯಂ| ಕಡಿದಿಕ್ಕಲ್ತಂಡೇಶಂ| ಗುಡುಪತಿಘರನೊಲ್ದು ರೂಪು ದೋರಿದನಾಗಳ್‌|| ೧೬

ತೋಟಕವೃತ್ತಂ|| ಸುರದೀರ್ಘಿಕೆಚಂದ್ರಮನಗ್ನಿಫಣಾ|ಧರನುಗ್ರ ವಿಷಂ ಭಸಿತಂಶಿವೆಬಂಧುರ ಪಂಚಮುಖಂ ದಶಬಾಹುಗಳೊ| ಪ್ಪಿರೆಶಂ ಭುನಿಜಾಕೃತಿಯಿಂಪೆಸೆದಂ|| ೧೭

ವ|| ಅಂತಾಖಂಡಪರಶುನಿಜಮೂರ್ತಿಯಂ ತೋರಲ್ಕಂಡು ತಂಡೇ ಶಂಚರಣಕಮಲಮನಪ್ಪಿಕೊಂಡು ಬಿಡದೆಪರಮಾನಂದಾಶ್ರುಜಲಭರಿತ ನಯನನಾಗಿಮುರದ್ವೇರಗಿರ್ಪಾಗಳ್‌||

ಕಂ|| ಖಂಡೇಂದುಮೌಳಿಕೃಪೆಯಿಂ| ತಂಡೇಶನ ನಿಷ್ಠೆಗೋತುಪಿಡಿ ದೆತ್ತಿಕರಂ| ಕೊಂಡಾಡಿ ಪ್ರಮಥಾದಿನೋವುತ್ತೆ| ನಂದಿಗೆ ನಗ್ಗಶಾಹಿತನು ಜೆಗಂದಿಂತೆಂದಂ ೧೮

ಅಸದಳದಿನೆನ್ನ ನೊಲ್ದು| ಚೇಸುತಮಿವಂತಂದೆ ಯೆಂದು ನೋಡಿ
ದನೇನಿಂ| ಡಿಸಿದನೆ ತಲೆಗಡಿದನೆನು| ತ್ತಸವಾಕ್ಷಂ ಮೆಚ್ಚಿಪೊಗಳ್ದನಂ
ದೋಃವಿಂದಂ||

ವ|| ಅಂತುಮೆಚ್ಚಿಕೊಂಡಾಡುತ್ತಮಾಗಳ್||

ಕಂ|| ವರಕುಸುಮವೃಷ್ಟಿವೆರಸಂ| ಬರದಿಂದೇಳ್ತಂದಮಣಿ ವಿಮಾ
ನದೊಳತ್ಯಾ| ದರದಿಂ ತಂಡೇಶನನೊ| ಲ್ದಿರಿಸಿ ಶಿವಂನಿಯಮಿಸಲ್ಕೆಚಗಿ
ದುತ್ತಾಗಳ್||

ಕಂ|| ದಿಕ್ಕಿನೊಳುರು ಪಟಹಧ್ವನಿ| ತೆಕ್ಕನೆತೀವಲ್ಕೆ ಮಣಿವಿತಾನಂ
ಕೈಲಾ| ಸಕ್ಕಾತಂಡೇಶಂ ಬೆರ| ಸಕ್ಕಜದಿಂಬಂದುಪೊಕ್ಕುದತಿಸಂಭ್ರ
ಮದಿಂ|| ೨೦

ವ|| ಅಂತುಬಂದ ತಂಡೇಶಂ ಬೆರಸುಕೈಲಾಸ ಸಭಾಮಂಟಪದೊಳ
ಖಿಳಗಣಸಮೇತಂ ಗಿರಿಜಾವರ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾ
ಗಳ್||

ಕಂ|| ವೃಂದಾರಕ ರುಷಿಯೆನಲರ| ವಿಂದಭವಂ ಬಿಡದೆಪೊಗಳಲಾ
ತಂಡೇಶಂ| ಗಂದುಗಣಪದಮನಿತ್ತಾ| ನಂದದಿಶಿವನೆಸೆವುತಿರ್ದನಾಸ್ಥಾ
ಯಿಕೆಯೊಳ್||

ಗದ್ಯ ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ
ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ತಂಡೇಶ ಮಾಹೇಶ್ವರಕಥಾವೃ
ತ್ತಾಂತಂಚತುಶ್ಚತ್ವಾರಿಂಶದಾಶ್ವಾಸಂ||

...ಶ್ರೀ...

## ನಾಲವತ್ತೈದನೆಯ ಆಶ್ವಾಸಂ

### ಕೊಲ್ಪುಲಿಯಾಂಡಮಾಹೇಶ್ವರವೃತ್ತಾಂತಂ

ನಿಸುತಂಕೊಲ್ಪುಲಿಯಾಂಡಂ| ಗುರುತರಗಣಪದಮನಿತ್ತು ಮೆರೆದಗತೆ
ನಯಾ| ವರ[illegible] ಶಾ ... ಹೋಶನೊಲ್ದು

ಲಿಕೆನಮ್ಮಂ|| ೧

ವಿಳಸಿತ ಚೋಳಮಹೀಮಂ| ಡಳದೊಳ್ ಪರಶಿವನಭವನ ತತಿಯಿಂ ಭಕ್ತಾ| ವಳಿಗಳಸನ್ಮಂದಿರಸಂ| ಕುಳದಿಂ ತಿರುವಣ್ಣಮಾಲೆಯೆಂಬೂರೆಸೆಗುಂ| ೨|

ತಿರುವಣ್ಣಮಾಲೆಯೊಳ್ಪು| ಚ್ಚರಿತವ್ಯವಹಾರಿಯೆನಿಸುತಂ ನಿಜಧನಮಂ| ವರಜಂಗಮಕ್ಕೆಬೀರು| ತ್ತಿರುತಿರ್ಪಂ ಬಹುಳಯಶದಿ ಕೊಲ್ಪುಲಿಯಾಂಡಂ| ೩|

ಜಂಗಮಮೂರ್ತಿಗಳಂಶಿವ| ಲಿಂಗವೆನುತ್ತಂ ತಿಳಿಂದುಭಯಭಕ್ತಿ ಮಿಗ| ಲ್ಪಿಂಗದೆ ತಾಂ ಬೆಸಕೆಯ್ವು| ತ್ತಂ ಗುಣಗಣ ರಾಶಿಯಪ್ಪಕೊಲ್ಪುಲಿಯಾಂಡಂ| ೪|

ವ|| ಅಂತು ಕೊಲ್ಪುಲಿಯಾಂಡಂ ಲಿಂಗವಂತ ಜಂಗಮಂಗಳ್ಗೆ ತನುಮನಧನಂಗಳಲ್ಲಿ ವಂಚನೆಯಿಲ್ಲದೆ ಸನ್ಮಾನದಿಂ ಬೇಡಿತ್ತಂಕುಡುತ್ತಂ ಪಲವುವರುಷಂ ಹರುಷದಿನೀಪರಿಯೊಳಿರುತ್ತುಂ ದ್ವೀಪಾಂತರಕ್ಕೆ ತಾಂ ವ್ಯವಹಾರಕ್ಕೆ ಪೋಪುದ್ಯೋಗಮುಂ ತಾಳ್ದಿರ್ಪನ್ನೆಗಂ ಚೋಳಮಂಡಳದೊಳವರ್ಷಣವಾಗಿ ಬರಂಬೀಳ್ವುದನರಿದು ತನ್ನ ಮಾತೃಪಿತೃಗಳಂ ಕರೆದು ಪೊಡವಟ್ಟು ಕೈಗಳಂಮುಗಿದಿಂತೆಂದಂ|

ಮ|| ವಿಧಿತಂ ಚೋಳಧರಿತ್ರಿಯೊಳ್ನಿರಬರಂಬೀಳ್ವಂ ತುಟಾಗಿರ್ಪದಿಂ ತಿದರೊಳ್ಮಕ್ತಿಯ ನೀವಜಂಗಮಸಮೂಹಂ ಬಂದೊಡಾಸ್ಯವಿಲ್ಲದೆ ಧಾನ್ಯಂಗಳಿನರ್ಥದಿಂ ವಸನದಿಂ ಸಂತೃಪ್ತಿಯಂ ನೀವೆಪಾಳ್ಪುದೆನುತ್ತಂ ಪಿತೃಮಾತೃಗಳ್ಗುಸಿರ್ದನಾ ಭಕ್ತಂಮಹೋತ್ಸಾಹದಿಂ| ೫|

ಮತ್ತಮಾಗಳ್||

ಕಂ|| ಘನಭಕ್ತಿಯಿಂದೆ ನೆರಪಿದ| ಘನಮಂ ಬಹುಧಾನ್ಯಮಂ ಮಹಾಭಕ್ತೌಘ| ಕ್ಕನುನಯದಿ ನೀವುದೆನುತಂ| ಜನನಿಗೆ ಜನಕಂಗೆ ಪೇಳ್ದು ಕೊಟ್ಟಂಭಕ್ತಂ|| ೬೦

ವ|| ಅಂತಾ ಕೊಲ್ಪುಲಿಯಾಂಡಂ ತನ್ನರಸಿಯುಂ ಕರೆದಿಂತೆಂದಂ||

ಕಂ|| ಭರದಿಂ ಮನ್ಮಾತಾಪಿತೃ| ಪರಿಚರ್ಯಂಗೆಯ್ವುದೆನ್ನ ಶಿವಭಕ್ತರ್ಗಂ| ಪರದಿ ಬೆಸಕೆಯ್ವುದೆನುತುಂ| ನಿರವಿಸಿದಂ ತನ್ನಸತಿಗೆ ಕೊಲ್ಪುಲಿಯಾಂಡಂ||

ವ|| ಮತ್ತಮೀಬರದೊಳಿಂಗ ಜಂಗಮಂಗಳ್ಗೆ ಬೇಡಿತ್ತಂಕೊಟ್ಟು ಸು ಶಿಕ್ಷೆಯಿಂಗೆಯ್ವುದೆಂದು ತನ್ನ ತಾಯ್ತಂದೆಗಳಡಿಗೆರಗಿ ಬೀಳ್ಕೊಂಡು ನಿಜವ್ಯವಾಹಾರಕ್ಕೆ ಕೊಲ್ಲಿಪುರಿಯಾಂಡಂ ಪೊರಮಟ್ಟಾಗಳ್||

ಕಂ|| ಶರನಿಧಿಯೊಳ್ಮಿತ್ರಮನೇ| ರಿರದತಿ ವೇಗದೊಳೆ ಪೋಗಿದ್ವೀಪಂಗಳನಾ| ಹರಭಕ್ತಂ ಪೊಕ್ಕಲವಿಂ| ವರಮಣಿಮೌಕ್ತಿಕಮನರಸಿ ಕೊಳುತಿರ್ದಂ|| ೮

ವ|| ಮತ್ತಮಿತ್ತಲ್ ಚೋಳ ಮಂಡಲದೊಳವರ್ಷಣವಾಗಿ ಬರಂಬಿದ್ದು ಜಗಮೆಲ್ಲ ಮುರುಳ್ದು ಪೋಗುತ್ತಿರಲದರೊಳ್ಪುಟ್ಟಿಗಿಲ್ಲದೆ ಲಜ್ಜೆಗೆಟ್ಟು ಭವಿಗಳಪ್ಪ ಸಹಸ್ರಸಂಖ್ಯೆಯನಂತಕ ಕಾಡು ಬರಲ್ಕೊಲ್ಲಿಪುರಿಯಾಂಡರ ತಾಯ್ತಂದೆಗಳೆನಿಪ್ಪವಂ ವಿಚಾರದಿಂ ಲಿಂಗಜಂಗಮಕ್ಕೆಂಗು ಸಮೆದಿರ್ದ ಬಹುಳಧನಧಾನ್ಯವೆಲ್ಲಮಂ ಸವೆಯಲ್ಕೀಲಿಕ್ಕಿ ರಕ್ಷಿಸುತಿರ್ಪ ಸಮಯದೊಳ್||

ಕಂ|| ತಮಗಿರಿಸಿದ ಸರ್ವಧನಧಾನ್ಯಮದಿರ್ಪುದನೆಯ್ದೆ ಕೇಳ್ದು ಜಂಗಮನಿಕುರುಂಬ ಮೊಲ್ದು ಬರೆ ಕೊಲ್ಲಿಪುರಿಯಾಂಡನ ತಂದೆತಾಯ್ಗಳ್| ಕ್ರಮವನೆ ಚಿತ್ತದೊಳ್ತಳೆದು ನಂತರ ಮೇಲಣ ನಲ್ಮೆಯಿಂದವಿಂ| ನಿಮಗೆಪುಗಿಕ್ಕಲಿಲ್ಲೆನುತ ಮಂತವರಂ ಕಡುಗಾಯ್ದು ನೋಂಕಿದರ್||

ಕಂ|| ಪಿರಿದುಂ ನಚ್ಚಿ ದಮನೆಯೀ| ಗರಿಯಾಯ್ತೆ ಕಟೆಂದು ಮಿಲ್ಲನಮಗಾರುಂಟೇ| ಹರಭಕ್ತರೆನುತದೇಶಾಂ| ತರಕೆಲ್ಲಂ ಪರೆದುಪೋಯ್ತು ಜಂಗಮವಾಗಳ್||

ವ|| ಅಂತಾಲಿಂಗವಂತ ಜಂಗಮಂಗಳೆಲ್ಲಂ ದೇಶದೇಶಕ್ಕೆ ಪೋಗಲಿತ್ತಲ್ ಚೋಳದೇಶದೊಳ್ಮಳೆಬಂದು ಬರಂತಿಳಿಯಲ್ಪಿಂದಿರ್ದ ನೆಂಟರಿಪ್ಪತ್ತೆಲ್ಲಂ ಭವಿಗಳಪ್ಪ ಪರನೂರರೂರ್ಗೆ ಕಳುಪಿ ಕೊಲ್ಲಿಪುರಿಯಾಂಡನ ಸತೀಪುತ್ರರುಂ ತಾಯ್ತಂದೆಗಳುಂ ಸುಖದಿಂದಿರುತ್ತಿರಲ್||

ಕಂ|| ಭರದಿಂ ಕೊಲ್ಲಿಪುರಿಯಾಂಡಂ| ಪಿರಿದುಂ ಭಂಡಮನೆ ಕೊಂಡು ಪತ್ತಿರಪೊಂದು| ತ್ತಿರದೆ ಮುಗುಳ್ದೊಲವಿಂ ತ| ತ್ಪುರ ಕೇಸ್ತಂದಾಗಲಾತ್ಮ ಗೃಹಮಂಪೊಕ್ಕಂ||

ವ|| ಅಂತು ತನ್ನರಮನೆಯಂ ಪೊಕ್ಕು ತಾಯ್ತಂದೆಗಳಿಗಾನತನಾಗಿ ನಲ್ಮೆಯಿಂ ಷೇಮಕುಶಲವನಾರಯ್ದು ಪಿಂದಣ ಬರದೊಳೆನ್ನ ಲಿಂಗವಂತ

ಜಂಗಮಂಗಳ್ಗೆ ಹರುಷಮಪ್ಪಂತೆ ಬಿಸಿಕೆಯ್ದಿರೆ. ಎಂದು ಬಿಸಃ ಗೊಳಲ್ಕವರಿಂ ತಂದರ್॥

ಕಂ॥ ಪಿರಿದುಂ ನಂಟರ ಬಳಗಂ। ಪಿರಿದೆಲ್ಲಾ ಧನಗಳವರ್ಗೆ ತೀರ್ದುದು ಬಳಿಕೇ। ಶ್ವರಭಕ್ತರ್ಗಿಲ್ಲಾಯೆನ। ಲರಿಪತ್ತಿದ ತೆರದಿ। ಮರುಗಿದಂ ತದ್ಭಕ್ತಂ

ವ॥ ಅಂತು ಮನದೊಳ್ಮರುಗಿ ಕೊಲ್ಲಿಯಾಂಡಂ ತನ್ನ ತಾಯ್ತಂದೆಗಳ್ಗಿಂತೆಂದಂ॥

ಕಂ॥ ಇಳೆಯೊಳ್ಕಾಲ್ಪಿಕ್ಕಂತು। ಪ್ಯಲನಾಡಿದರೆಂಬಗಾದೆನಿಮಗಾದುದು ನಿ। ಮ್ಮಳಶಿವಭಕ್ತರ್ಗಿಕ್ಕದೆ। ಸಲೆಭವಿಗಳಿಗಿಕ್ಕಿ ವಸ್ತುಗೆಡಿಸಿದಿರೆಂದಂ। ೧೨।

ವ॥ ಎಂದು ಖತಿಗೊಳುತ್ತಂ ಕೊಲ್ಲಿಯಾಂಡಂ ತನ್ನ ಮನದಲ್ಲೀ ಸಂತೊಂದುಪಾಯಮಂ ನೆನೆದಂತವರ್ಗುಡಲಿತ್ತು ಕಳುವುವೆನೆಂದು ಕುಟಿಲದಿಂ ಕಿಂಕರರನಟ್ಟೆ ಕರಯಲ್ಕಾತರ್ಪಿಂಪಾ ನಂಟುಬಳಗಮನಾದರಿಸುತ್ತಿದ್ದಾಗಳ್॥

ಕಂ॥ ಬೇಗದಿ ತನ್ನಯ ಪೊದಳಿನ। ಬಾಗಿಲೊಳಾರ್ಪೋಗದಂತೆ ಕಾಪಂ ಪೇಳ್ದಂ। ತಾಗಳಸಿವಿಡಿದು ನಿಂದಂ। ನಾಗವಿಭೂಷಣನ ಭಕ್ತ ಕೊಲ್ಲಿಯಾಂಡಂ॥ ೧೪।

ವ॥ ಅಂತಸಿಯಂ ಜಡಿದಾಗಳ್॥

ಕಂ॥ ಮುಳಸಿಂ ಕೊಲ್ಲಿಯಾಂಡಂ। ಬೆಳಗೆಯ್ಯಂತರಿವಡಾವರಿಗನಂದದಿನು। ಜ್ವಳಿಪಸಿಯಿಂದಂ ಭವಿಗಳ। ಬಳಗಮನುಕ್ಕೆ ತರಿದು ಕೆಡಪಿದಂ ಧರೆಬೆದರಲ್॥ ೧೫।

ಶರಣರ ಧನಮಂ ತಿನವಂ। ದರೆನುತ್ತಂ ಕಾಯ್ದು ಭವಿಗಳೆಂದೆನಿಸುವ ನಂ। ಟರನುರೆ ತವಿಸಿದ ಭಕ್ತಂ। ಗುರುತರದಿಂ ಮೆಚ್ಚಿ ರೂಪುದೋರಿದನ ಭವಂ॥ ೧೬।

ಕಿರುನಾಗರತೆ ಱಡುಗೆಗಳಿಂ। ಕರೆಗೊರಲಿಂ ನೊಸಲಕಣ್ಣಿನಿಂ ಪಿರೆಯಿಂ ಬಾಂದೊರೆಯಿಂ ವಿಭೂತಿಯಿಂ ನೆರೆ। ಮೆರೆವಗಜಾರಮಣನಮಳ ಮೂರ್ತಿಯೊಳೆಸೆದಂ। ೧೭

ವ॥ ಅಂತೆ ಸವಮೂರ್ತಿಯಂ ಕಂಡು ತಾಳ್ದಿ ದರ್ಪಸಿಯಂ ಬಿಸುಟ್ಟು ಪರಮಾನಂದಭರಿತ ಹೃದಯನಾಗಿ ಭಯಭಕ್ತಿಯಿಂ ಚರಣದೊಳ್ಮೈಗೆಡೆದು

ಪರವಶಭೂತನಾಗಿರ್ಪ ಕೊಲ್ಪುಲಿಯಾಂಡನಂ ಕಾರುಣ್ಯದಿಂದೆತ್ತಿ ಕು ಳ್ಳಿರಿಸಿ ಮತ್ತಮಾತನ ಕೈಯಿಂಮಡಿದ ಭವಿಗಳಪ್ಪನಂಟರ್ಗೆ ಜೀವಮಂ ಕೊಟ್ಟೆತ್ತಿ ಗಂಗಾಧರಂ ನಂದಿನಾಥಂಗಂದಿಂತೆಂದಂ॥

ಕಂ॥ ಎನ್ನಯಶರಣರ್ಗಿರಿಸಿದ। ಹೊನ್ನಂಸಲಿತಿಂದರೆಂದು ನಂಟರನ ನಿತಂ। ತಾಂನೆರೆತವಿಸಿದ ನೆನಲೀಶನ್ನುತಭಕ್ತಂ ಗದಾರ್ಸಮಾನಂಭರ ಯೊಳ್॥ ೧೮।

ವ॥ ಎಂದಿಂದುಧರ ನಾನಂದದಿಂ ಕೊಂಡಾಡುತ್ತಂ ತಾಂಬರಿಸಿದದಿ ವ್ಯವಿಮಾನದೊಳ್ಕೊಲ್ಪುಲಿಯಾಂಡನಂ ಕುಳ್ಳಿರಿಸಿ ನಿಯಾಮಿಸಿದಾಗಳ್

ಕಂ॥ ಭೂತೇಶನಸದ್ಭಕ್ತಸ। ಮೇತಂ ಮಣಿಪುಷ್ಪಕಂ ನಭೋಂತ ಮನಾತ್ಮ। ದ್ಯೋತಿಯೊಳುರೆಬೆಳಗುತ್ತಂ। ಕೌತುಕದಿಂ ರಜತಗಿರಿಗೆ ಬಂದುತ್ತಾಗಳ್॥ ೧೯

ವ॥ ಅಂತುಬಂದು ಕೊಲ್ಪುಲಿಯಾಂಡಂ ಬೆರಸುಗಿರಿಶಂಗಣಾನ್ವಿತನಾ ನಂದದಿಂದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಕೊಲ್ಪುಲಿಯಾಂಡಂಗಹಿವರ। ತಳ್ಪಂಪೊಗಲಲ್ಕೆ ಪರಮಪದಮಂ ಕೊಟ್ಟಾ। ಗನಲ್ಪಗುಣವಾರ್ಧಿ ಬುಧಜನ। ಕಲ್ಪದ್ರುಮ ಶಂಭುಮೆರೆದ ನಾಸ್ಥಾಯಿಕೆಯೊಳ್॥ ೨೦।

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪ ಷಷ್ಟಿಪುರಾತನರಚಾರಿತ,ದೊಳ್ಕೊಲ್ಪುಲಿಯಾಂಡ ಮಾಹೇಶ್ವರ ಕಥಾ ವೃತ್ತಾಂತಂಪಂಚ ಚತ್ವಾರಿಂಶದಾಶ್ವಾಸಂ॥

—ಶ್ರೀ—

## ನಾಲ್ವತ್ತಾರನೆಯ ಆಶ್ವಾಸಂ

### ಕಳಚೆತ್ತಿಯೊಂಡ ಮಾಹೇಶ್ವರ ಕಥಾವೃತ್ತಾಂತಂ

ತ್ರಿದಶಜಯಜಯ ಯೆನೆಕೇ। ಳ್ವದಪಿಂ ಕಳಚೆತ್ತಿಯೊಂಡಗಂ ಬೊಲ
ವಿಂದ। ಗ್ಗದಗಣಪದವಿತ್ತೊ ಪ್ಪುವಸದ। ಮಳವಿಭುಸೋಮೇಶ ನೊಲ್ದು
ಪಾಲಿಕೆನಮ್ಮಂ॥ ೧।

ಸನ್ನುತಚೋಳಧರಿತ್ರಿಯೊ। ಳುನ್ನತಮಾಹೇಶವರ್ಗದಾಲಯತತಿ
ಯಿಂ। ರನ್ನದ ಲಿಂಗನಿಕೇತನ। ದಿಂನಾಡೆ ಕಣಂಜಿಯೆಂಬ ಪುರಮೆಸೆದಿ
ರ್ಕುಂ॥ ೨।

ಎನೆವಕಣಂಜಿಯಪುರದೊ। ಳ್ವನಿಯಂಸೂಡಿದನಭಕ್ತಿಯಂಪ್ರಕಟಿಸು
ತ। ರಸೆಯಂನಿಜಯಶದಿಂಧವ। ಳಿಸುತಂ ಕಳಚೆತ್ತಿಯೊಂಡನೆಂಬಂ ಮೆ
ರೆದಂ॥ ೩।

ವ॥ ಅಂತಾಕಳಂಜಿಪುರದೊಳ್ಮನ್ನೆಯ ಕುಲತಿಲಕನೆನಿಪ ಕಳಚೆತ್ತಿ
ಯೊಂಡಂ ಶಿವನಿಂದೆ ಗುರುನಿಂದೆ ಜಂಗಮನಿಂದೆಯೆಂಬಿವಂ ಕೇಳದಗ
ಣಾಚಾರತ್ವಮಂ ಪಿಡಿದು ದೂಷಕಜನ ವಿದ್ರಾವಣ ನೆನಿಸುತಿರ್ದನಂ
ತುಮಲ್ಲದೆಯುಂ॥

ಚಂ॥ ವರಗುರುಮರ್ತ್ಯನೆಂದು ಧರಣೀಸುತಲಿಂಗಮ ನಶ್ಮಮೆಂದು
ಸ। ಚ್ಚರಿತರೆನಿಪ್ಪ ಜಂಗಮ ಸಮೂಹ ಮದಂ ಕುಲಹೀನರೆಂದುಮಾ।
ಸುರದೊಳನಿಂದೆಗೆಯ್ದ ಘನದೂಷಕರಂ ಬಿಡದೊಕ್ಕಲಿಕ್ಕಿನಿ।ಷ್ಠುರತ
ರ ಜಿಹ್ವೆಯಂಪಿಡಿದು ಕೊಯ್ವುತಮಿರ್ಪ ನುಮೇಶಕಿಂಕರಂ॥ ೪

ಕಂ॥ ಪರಿಪರಿದುಚೋಳದೇಶದೊ। ಳರದೀಶ್ವರನಿಂದೆಗೆಯ್ವ ಕಾರ
ಸನೆಗಳಂ।ಪರಿದುಂಕೊಯ್ದುಡುಕುತ್ತಂ। ದುರಗಲಿ ಕಳಚೆತ್ತಿ ಯೊಂಡ
ನಿರ್ದಂಜಸದೊಳ್॥ ೫।

ವ॥ ಅಂತುಗಣಾಚಾರಿಯುಪ್ಪ ಕಳಚೆತ್ತಿಯೊಂಡ ನೀನಿಯಮಮಂ ಬಿ
ಡದೆ ಶಿವಲಿಂಗಪೂಜಾ ಪರನಾಗಿ ಜಂಗಮಪ್ರೇಮಿ ಯೆನಿಸುತ್ತ ಮಿರ್ದ
ನಂತುಮಲ್ಲದೆಯುಂ॥

ಕಂ॥ ಘನದೂಷಕವಧನೆನೆಂ। ದೆನಿಸುವ ಕಳಚೆತ್ತಿಯಾಖ್ಯ ಮಾ
ಹೇಶನತ। ನ್ಮನಮಂನೋಡಲ್ಕಭವಂ। ಜಿನದದಿನುದ್ದಂಡವೇಷದಿಂಪೇ
ಳ್ದಂದಂ॥ ೬।

ವ|| ಅಂತುಖಂಡಪರಶು ಮರ್ತ್ಯರೂಪಂದಾಳ್ದತಿ ಪ್ರಚಂಡವೃತ್ತಿಯಿಂ ಬಂದು ಕಳಚೆತ್ತಿಯಾಂಡರ ಸವಿಾಪದೊಳ್ನಿಂದಿರ್ದು ಪ್ರೇಕ್ಷಿಸಿ ನಿಂತೆಂದಂ|

ಚಂ| ವಸುಧೆಯಜೋಳಿಕರಂಬಿಡದೆ ಜಂಗಮಲಿಂಗವೆನುತ್ತೆ ಕಂಡು ನೀಂ ಮಸಣದೊಳಿರ್ಪ ಮಂಗಳನೆನಿಪ್ಪ ಕಪಾಲಿಯನೀಕನೆಂದು ಪೂಜಿಸಿವರುಳಾಗಿ ಪೋದೆಯಕಟೆಂದೆನುತೇಳಿಸಿ ನಿಂದಿರಲ್ಕೆ ಕೋಪಿಸಿ ಕಳಚೆತ್ತಿಯಾಂಡನಲಗಂ ಸೆಳೆದೆರ್ದೊ ಡುವೋಕ ನೋಡಿದಂ| ೭

ವ| ಅಂತುಕುಟಿಲ ವೇಷದೀಶ ನೋಡುತಿರ್ಪಾಗಳ್|

ಕಂ|| ಸೆಡೆದೆನಿತನೋಡಿದೊಡೆಬೆಂ| ಬಿಡೆನಾಂನಿಲ್ಲಿಲ್ಲಿ ಪೋಪೆಯೆನುತಟ್ಟಿಕೆಕಂ| ಜಡಿದು ಕಳಚೆತ್ತಿಯಾಂಡಂ | ಪಿಡಿಯೆಶಿವಂನಗುತೆ ರೂಪುದೋರಿದನಾಗಳ್| ೮|

ಉಪೇಂದ್ರವಜ್ರ|| ಸ್ರೋತಸ್ವಿನೀ ಕೈರವಬಂಧುಪಾವಕಂ|ವಾತಾಶನಂ ಭಸ್ಮಮತೀವವೇದಾತೀತಂ ಸುಪಂಚಾಸ್ಯದಿ ಪತ್ತುತೋಳ್ಗಳಿಂ ಘಟತೇಶನೊಪ್ಪಿರ್ದ ನತಿಪ್ರಮೋದದಿಂ| ೯|

ವ|| ಅಂತೊಪ್ಪುವದಿವ್ಯಮೂರ್ತಿಯಂಕಂಡು ಬೆಚ್ಚಿಬೆದರಿಬಾಯ್ವಿಡುತಕಟಕಟೆನ್ನಯ ಗಣಾಚಾರವಶೀಲಂ ನಿನ್ನ ಮೇಲೆ ಯಾಯಿತ್ತೆಯೆನುತಂ ಪರಿಚ್ಛೇದಿಸಿ ತನ್ನಂತಾಂಕೊಂಡು ಕೊಳಲೀಸಿ ಗೋಣಿಂಗೆಕಾರಮನಿಕ್ಕಿ ಸೆಳೆವಕೈಯುಂ ಪಿಡಿದುಕಾರುಣ್ಯಾಕರನಪ್ಪಶಿವಂಮಾಣಿಸಿ ಬೋಳೈಸುತ್ತಿರಲಾ ಕಳಚೆತ್ತಿಯಾಂಡ ವೀರಮಾಹೇಶ್ವರಂಕಿಂಕರ್ವಾಣತೆಯಿಂ ಚರಣದೊಳ್ಪೊರಳ್ದು ನಂಡಾಶ್ಯ ಪಯಃಕಣಂಗಳ್ಸೂಸುತ್ತ ತಿಪರವಶೀಭೂತನಾಗಿರ್ಪಾಗಳ್ ನಂದಿನಾಥಂಗಂದಿಂತೆಂದಂ||

ಕಂ|| ಮನಮಂ ನೋಡಲ್ಕೆಂದಾಂ| ಬಿನದದಿನಿಂದಿಸಿ ದೊಪಟ್ಟ ತನ್ನಯಛಲಕೆ| ನ್ನನೆಪಿಡಿದವಾೀರನಿವನೆಂ| ದೆನುತಂ ಕೊಂಡಾಡಿ ಪೊಗಳ್ದ ನಗಜಾರಮಣಂ| ೧೦|

ವ|| ಎಂದುಕೊಂಡಾಡುತ್ತುಂ ಕಳಚೆತ್ತಿಯಾಂಡವೀರ ಮಾಹೇಶ್ವರನಂ ತಾಂಪರಿಸಿದ ದಿವ್ಯಪುಷ್ಪಕದೊಳ್ಕುಳ್ಳಿರಿಸಿ ನಿಯಾಮಿಸಿವಾಗಳ್|

ಕಂ|| ಕಳಚೆತ್ತಿಯಾಂಡ ಸಹಿತಂಜಳರುಹಸಖನಂತೆ ಪೊಳೆಪಹೇಮವಿಮಾನಂ ಕಳಧೌತಗಿರಿಗೆ ಘನಪಥಂ| ಗಳವಾದ್ಯಂ ಪೊಳಗಲಿರದೆಬಂ

ದುತ್ತಾಗಳ್|
೧೧|

ವ|| ಅಂತುಬಂದಕಳಚೆತ್ತಿಯಾಂಡಂ ಬೆಗಸುಸಕಲಗಣ ಸಮೇತನಾನಂದದಿಂ ದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್|

ಕಂ| ದೂಷಕಸಂಕುಳಶರನಿಧಿ| ಶೋಷಣಕಳಚೆತ್ತಿಯಾಂಡಭಕ್ತಂ ಗತಿಸಂ| ತೋಷದಿಗಣಪದವಿತ್ತುಹಿ| ಭೂಪಶಿವಂಮೇಲಿವೃತಿರ್ದನಾಸಾಥಿಕೆಯೊಳ್|| ೧೨|

ದಗ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ಕಳಚೆತ್ತಿಯಾಂಡಮಾಹೇಶ್ವರಕಥಾವೃತ್ತಾಂತಂಷಟ್ಚತ್ವಾರಿಂಶದಾಶ್ವಾಸಂ||

...ಶ್ರೀ...

## ಸಪ್ತಚತ್ವಾರಿಂಶದಾಶ್ವಾಸಂ

### ಕಲಿಯ ನಾಯನ್ನಾರರ ವೃತ್ತಾಂತಂ

ಇಳೆಪೊಗಳೆಕಲಿಯನಾರ| ಗೂರ್ಲವಿಂ ಗಣಪದಮನಿತ್ತು ಮೆರೆದ ಮಹಾಮಂ| ಗಳನಿಳಯನೆನಿಪ ಸದ್ಗುಣ, ಜಲನಿಧಿ ಸೋಮೇಶನೊಲ್ದು ಪಾಲಿಕೆನಮ್ಮಂ|| ೧|

ಸರುಚಿರ ಚೋಳಾವನಿಯೊ| ಳ್ಪರಮಶ್ರೀಯಿಂ ಮಹೇಶಭಕ್ತರ ನಿಚಯೋ| ತ್ಕರಭಘನತರದಪೆಂಪಿಂ| ತಿರುವತ್ತೂರೆಂಬ ಸತ್ಪುರಂಕರಮೆಸಗುಂ|| ೨|

ಕೆಸಸಿಸಪಾಟಕೂಟ| ಪ್ರಾಸಾದಟನೆಸಿವಲಿಂಗನಿಳಯಂಪೆರಿದುಂ| ಭಾಸುತುಂ ಮಂಗಳದನಿ| ಘಾಸಂತಾನೆನಿಸುತಾಪುರಂಮೊಳ್ಪೆದಿರ್ಕುಂ|| ೩

ಪೆರಿದುಂಪೆರ್ಮೆಯೊಳೆಸೆವಾ| ತಿರುವತ್ತೂರೆಂದೆನಿಪ್ಪ ಪುರದೊಳ್ಮಾಹೇ| ಶ್ವರಮುಖದರ್ಪಣನೆನಿಸು| ತ್ತಿರುತಿರ್ದಂ ಕಲಿಯನಾರನೆಂಬಶಿವೈಕ್ಯಂ|| ೪|

॥ ಪಿರಿದೆನಿಪಷರ್ಗಡಿನ್ನತಿಯೊಳ್ಪೆಳಚಿಳಿತೀನದೈವರ್ಗದ್ದೇಳ್ಗೆಯೊ
ಳ್ಸ್ವರಕುಥರಂಗಭೀರತೆಯೊಳಂಬುಧಿ ಸತ್ಕಳೆಯೊಳ್ಸುಧಾಕರಂ। ಶರಣಜ
ನಕ್ಕೆ ಸಂತಸದಿನೀವೆಡೆಯೊಳ್ಸುರಭೂಜಮೆಂದುಮು। ವರ್ಗರನೆರೆಬಣ್ಣಿಸ
ಲ್ಕಲಿಯನಾರನೆನಿಪ್ಪ ಶಿವೈಕ್ಯನೊಪ್ಪುವಂ॥ ೫॥

ವ॥ ಮತ್ತಮಾ ಕಲಿಯ ನಾರನೆಂಬಭಕ್ತಂ ತಿರುವತ್ತೂರಧಿಪತಿಯ
ಪ್ಪ ಶಿವಲಿಂಗಕ್ಕೆ ನಾನಾವಿಧದಪೂಜೆಯುಂಮಾಡಿ ದಿನದಿನಪೊಳ್ಬುಂಡುಗ
ದೆಣ್ಣೆಯುಂ ಸವೆಯಲ್ಕಿರಾಜನಮಂ ಬೆಳಗುಪನಿಯಮಮುಂಪಿಡಿದುಪ
ರಮಮಾಹೇಶ್ವರನೆನಿಸುತ್ತಿರ್ದನಂತುಮಲ್ಲದೆಯುಂ॥

ಕಂ॥ ರಾಜಕಳಾಮೌಳಿಗನೀ। ರಾಜನಮನನೇಕ ಲಕ್ಷಮಂಬೆಳಗು
ತ್ತಿರ್ಪಾಜನನುತಮಾಹೇಶನ। ತೇಜೋಮಯಕೀರ್ತಿಪರ್ಬಿತೆಂಟುಂ
ದೆಸೆಯಂ॥ ೬।

ಪರಿಕಿಪೊಡೀಪರಿಯೊಳ್ವೀ। ಶ್ವರಮುರುವತ್ತಾಗೆ ಕಲಿಯುನಾರರವಿತ್ತಂ
ನಿರುತಂತೀರಿತ್ತೀಶನ। ಸುರುಚಿರ ಘನದೀಪ್ತಿಗಣ್ಣೆಗದನೇವೊಗಳ್ವಂ॥

ಚಂ॥ ಧನಮಿನಿತಿಲ್ಲದಂತೆ ನೆರತೀರ್ದುದು ಚೋಳಧರಿತ್ರಿಯಲ್ಲಿ ನೆ
ಟ್ಟನೆಸವೆಯಿತ್ತು ತೈಲಮುಭವಾಜ್ಞೆಯೊಳಂದು ವಿಪತ್ತಿಪತ್ತಿಮು। ನ್ನಿನ
ನಿಯಮಂಧಿಟಂನಡೆ ಯುದ್ಯೈದುಪವಾಸಘುದಾಗೆಚಿತ್ತದೊ। ಳ್ನಿನೆದಗಿದಾ
ಡಾಡಿದಂ ಕಲಿಯನಾರನ ಪಾರಕಳಾವಿಶಾರದಂ॥ ೮।

ವ॥ ಅಂತುಕಲಿಯನಾರಂ ಮನದೊಳ್ನೆನದಿಂತೆಂದ॥

ಕಂ॥ ಹರಹರಮುರುಳಾದೆಂಮು। ಚ್ಛರೀರದರುಣಾಂಬುವೆಂಬ ತೈಲಮಿ
ರಲ್ಕೀ। ಶ್ವರವರದೀಪ್ತಿಯ ನಿಯಮಂ । ಪಿರಿದೆಡೆವರಿಯಿತ್ತೆ ನುತ್ತಮ
ರುಗಿವನಾಗಲ್॥ ೯।

ವ॥ ಅಂತುಕಲಿಯನಾರಂ ತನ್ನ ತನುವಿನೊಳ್ತೈಲಮಂ ಕಂಡತನ್ನರಿ
ವಿಂಗೆ ತಾಂನೆರೆಮೆಚ್ಚಿ ಪಿಗ್ಗುತ್ತಿರ್ದು ವೀರಾಲಾಪದಿಂಪೊರಮಟ್ಟುಲಿಂ
ಗಗೇಹಕ್ಕೆಲ್ತಂದು ಪಳದಿಯಚಲ್ಲಣ ಮಂಬಿಗಿದುಟ್ಟು ಸರ್ವಾಂಗದೊ
ಳ್ವಿಭೂತಿಯನಿಟ್ಟು ರುದ್ರಾಕ್ಷಾಭರಣಮಂತೊಟ್ಟು ತಳಪತ್ತಿಪೊಳೆವ
ಕೂರಲಗನಲ್ಲಂಪಿಂಪಿಡಿದುಕೈಗೈದುಶಿವಾರ್ಚನೆಗುದ್ಯುಕ್ತನಾಗಿ॥

ಕಂ॥ ವರಜಲನಿಧಿಮುಜ್ಜವಕ್ಕರ। ದುರುಪರಿವಳಕಸುಸುಮಾಚಯದಿನ
ರ್ಚಿಸಿಳಕಾ ಗಿರಿಶಂಗೆತನ್ನನಿಯಮದ। ಪಿರಿಪಾರತಿಯೆತ್ತಲೆದುವಿ

ಗವುತ್ತಿರ್ದರ್॥ ೧೦॥

ಅವಧರಿಸಗಜಾಪತಿಯ। ಸ್ನವಯವದೊಳ್ದೀಪ್ತಿಗೆಣ್ಣೆಯಂ ದಿಟಕಿಂ
ತೋ। ಱುವೆನೆನುತೆ ಕಲಿಯನಾರಂ। ಜವದಿಂಬೊಬ್ಬಿರಿವು ತಲಗನೆತ್ತಿದ
ನಾಗಳ್॥ ೧೧॥

ಚಂ॥ಸೆಲೆಗಳಸಂದ ನೆತ್ತಿಮಿದಿದಾರ್ದಿಸರಿದು ಱುಕ್ಕಿವೆನೆತ್ತರಿಂದೆಕೋ।ಪ್ಪುರಿ
ಗಪೊಳ್ದರ್ದ ಬತ್ತಿಗಳರಾಶಿಗಳಂ ನೆನೆಯಿಕ್ಕಿ ಮುನ್ನಿನೋಲ್। ತರ
ತರದಿಂದೆ ದೀಪ್ತಿಗಳನಾಗಳೆಪೊತ್ತಿಸಿತಾಂನಿವಾಳಿಸು। ತ್ತರರೆಯೆನುತ್ತೆ
ಮಾಕಲಿಯನಾರನುಮಾಪತಿನೋಡಲೊಪ್ಪಿದಂ॥ ೧೨॥

ವ॥ ಮತ್ತಮಾಕಲಿಯನಾರಂ ನೇಮಡಬತ್ತಿಗೆಣ್ಣೆಯಿಲ್ಲದೆತನ್ನರುಧಿರ
ದಿಂ ಪೊತ್ತಿಸಿರ್ದ ಮೂಲೆದೀವಿಗೆಗಳೊಪ್ಪಿರ್ದುವೆಂತೆಂದೊಡೆ

ಕಂ॥ ರತ್ನಾಕರನೊಲವಿಂಬರೆ। ರತ್ನಂಮಿಗೆಭಕ್ತಿಯಿಂ ಶಿವಂಗರ್ಪಿಸಿ
ದಾ। ರತ್ನಸಮೂಹಮುಶಾನೆಳೆ। ನೂತ್ನಜ್ಯೋತಿಗಳೆಪರ್ಬಿ ಬೆಳಗಿದು
ವಾಗಳ್॥ ೧೩॥

ವ॥ ಅಂತುತೊಳಗುವ ದೀಪ್ತಿಗಳಬೆಳಗಿನೊಳ್ಮನ ದನುರಕ್ತಂಪೊಣ್ಮೆ
ತ್ತಂಬಂತೆ ಕಲಿಯನಾಕಂ ತನುವಿಂದುಣ್ಮುವರಕ್ತದಿಂಕೆಂಪುವೆತ್ತೊ ಪ್ಪು
ವಲಗನೆತ್ತಿನರ್ತಿಪ್ಪಾಗಳ್॥

ಕಂ॥ ರೌದ್ರರಸಮೂರ್ತಿಯಾಭ ಕ್ತ್ಯುದ್ರೇಕದಿನೆಸೆವಕಲಿಯನಾ
ರಗೊರ್ಲವಿಂ। ದದ್ರಿರಿಪುಪೊಗಳುತಿರಲಾ। ರುದ್ರಂಮಿಗೆ ಮೆಚ್ಚಿಮೂ
ರ್ತಿಯಂತೋರಿಸಿದಂ॥ ೧೪॥

ಜಡೆಯುನದಿಫಣೆಯುಚಂದ್ರಂ।ಕಿಡಿಗಣ್ಣುರಗೊರಲಹೀಂದ್ರಕುಂಡಲ
ಯುಗ್ಮಂ। ಕಡುಮೆರವೆಯ್ದು ಮೊಗಂಗಳ್। ನಿಡುದೊಳ್ಪೊತ್ತೆ ಸೆಯ
ಲೊಪ್ಪಿದಂಗಿರಿಜೇಶಂ॥ ೧೫॥

ವ॥ ಅಂತೊಪ್ಪುವಗಿರಿಜೇಶನದಿವ್ಯ ಮೂರ್ತಿಯಂಕಂಡುಕಲಿಯನಾ
ರರುರ್ಬಿ ಪೆರ್ಚಿಪಿಗ್ಗುತ್ತಂಚರಣಂಗಳೊಳ್ಪೊರಳ್ದಾನಂದಾ ಶ್ರುಗಳ್ಸುರಿ
ವುತ್ತಂ ಪರವಶೀಭೂತನಾಗಿಪಾರ್ಗಳ್।

ಕಂ॥ ಕರುಣದಿನೆತ್ತಿಶಿವಂಕು। ಳ್ಳಿರಿಸಿಕರಾಂಭೋಜದಿಂದೆಮೆಯ್ದುಡ
ವುತ್ತಂ। ಕರದಿಂದೆಬೋಳವಿಸಿತ। ಚ್ಛರಣನಕಲಿತನ ವನಂದುನಂದಿಗೆ
ಮಡಿದಂ। ೧೬।

ನಿಯಮದತೈಲಂತೀರ್ದೊಡೆ| ಭಯಮಿಲ್ಲದೆತನ್ನ ರುಧಿರದಿಂದೀಪ್ತಿಗ
ಳಂ| ನಯದಿಂಬೆಳಗಿದ ನೆನಲಾ| ರಯಮೀತನ ಪೋಲ್ಸಮಾನರಿಂದಂಗಿ
ರಿಕಂ|| ೧೭|

ವ|| ಎಂದುಪೊಗಳ್ದು ಕೊಂಡಾಡುತ್ತಂತಾಂಬರಿಸಿದದಿವ್ಯವಿಮಾನದೊ
ಳ್ಕಲಿಯನಾರರಂ ಕುಳ್ಳಿರಿಸಿ ಗಿರಿಜೆಯರಸಂನಿಯಾಮಿಸಲ್ಕಾಗಳ್||

ಕಂ|| ದಿವಿಜಾನಕರವದೊಳ್ತ|ಜ್ಜೈವಭಕ್ತಂಬೆರಸುದಿವ್ಯಪುಷ್ಪಕವತ್ಯು
ತ್ಸವದೆ ರಜತಾದ್ರಿಗನುವಿಂ| ನಿವಹಂಪೊಗಳುತ್ತಿರಲ್ಕೆ ಬಂದುತ್ತಾಗ
ಳ್|| ೧೮|

ವ|| ಅಂತುಬಂದಕಲಿಯನಾರ ವೀರಮಾಹೇಶ್ವರಂಗೊಡಿಗಣಂಗಳ್ವೆರ
ಸು ಹರುಷದಿಂದೊಡ್ಡೋಲಗಂಗೊಟ್ಟು ಕುಳ್ಳಿರ್ದರಾಗಳ್||

ಕಂ|| ಕಲಿಕಲಿಯನಾರಭಕ್ತಂ| ಗೊಲವಿಂದಸ್ಖಲಿತ ಪದಮನಿತ್ತೋ
ವಿದನಿ| ಮೃಳಶಿವನಖಿಳ ಪ್ರಮಥಾ| ವಳಿಯೊಳ್ಪಿರಿದೊಪ್ಪುತಿರ್ದನಾ
ಸ್ಥಾಯಿಕೆಯೊಳ್|| ೧೯|

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮ
ರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಕಲಿಗೆರೆಯ ಪುರಾಧಿಪ ಶ್ರೀ
ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ
ಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳ್ಕಲಿಯನಯ್ನಾರ ಮಾಹೇಶ್ವ
ರಕಥಾವೃತ್ತಾಂತಂಸಪ್ತಚತ್ವಾರಿಂಶದಾಶ್ವಾಸಂ

—ಶ್ರೀ—

## ನಾಲ್ವತ್ತೆಂಟನೆಯಆಶ್ವಾಸಂ
### ಕಣ್ಣಂಬುಲ್ಲ ನಂಬಿಯೆಂಬರ ಕಥಾವೃತ್ತಾಂತಂ

ಧಾರಿಣಿ ಪೊಗಳುತ್ತಿರೆಗಂ। ಭೀರ ಕಣ್ಣಂ ಬುಲ್ಲ ನಂಬಿಗಳ ಲಲಿತ ಪದಮಂ॥ ಕಾರುಣ್ಯಾಬ್ಧಿ ನಿತ್ತುಮರೆಲೋ। ಧ್ಧಾರಕ ಸೋಮೇಶನೊಲ್ದು ಪಾಲಿಕ್ಕೆನ್ನ ಮ್ಮಂ॥ ೧।

ಮಣಿರಂಗವೃತ್ತಂ॥ ಚೋಳಮಂಡಳದೊಳ್ಕಳವುಕ್ಕೆ। ತಾಳಿಕ್ಕೆರ್ಗೆ ರ ಚೂತವನಂಭ। ಕಾತ್ತಲಯಂ ಶರಣವರ್ಗಕ್ಕೆಯಲ್ಲಿ। ಲೀಲೆಯಿಂದೆಕ ಣ್ಣಂಬುಲ್ಲರೆಸೆದಿಕ್ಕುರ್ಗಂ॥ ೨।

ಕಂ॥ ಕನಗಮುಖಾ ಕಲಶದಿಂದಂ। ಕನಕಶಿವಾಲಯದಿನೆಸೆವಕಣ್ಣಬೂ ಕೊಳಪ್ಪಿ। ವನತರ ಭಕ್ತಶಿರೋಮಣಿ, ಯೆನಿಸಿಕಣ್ಣಂಬುಲ್ಲನಂಬಿಯೆಂಬಂ ಮೆರೆವಂ॥ ೩।

ಶಿರಿದೆಸೆವಕಣ್ಣಂಬೂರೊಳ್। ಭರದಿಂದಂ ಪುಟ್ಟಿವಾಳಿದರ್ಧವನವನೀ॥ ಶ್ವರಭಕ್ತಗಿರೀವೃತ್ತಾ। ಪರದಕಣ್ಣಂಬುಲ್ಲನಂಬಿ ಯೆಂಬಂಮೆರೆವಂ ॥೪।

ವ॥ ಅಂತೀಪರಿಯ ಸ್ವಭಾವಸ್ವರೂಪದೊಳಿರು ತ್ತೊಂದುದಿವಸಂಗಹನಾಂ ತರಕ್ಕೆ ಪೋದೆಡೆಯೊಳೊಂದು ಶಿವಲಿಂಗಾಲಯಮಂ ಕಂಡೊಳಯಿಂಕೆ ಪೋಗಿತಲ್ಲಿಂಗಕ್ಕೆ ಸಾಷ್ಟಾಂಗದಂಡಪ್ರಣತನಾಗಿ ಕೈಮುಗಿದೆಲೆದೇವಾ ಇನಿತುದಿನಂ ನಾನರಿಯದೆ ಕತ್ತಲೆಯೊಳಿರುತಿರ್ದೆ ನಿನ್ನಿಂದುವೊದಲಾ ಗಿನಿಚ್ಚನಿಚ್ಚಂ ನಾಂಬಂದು ಕಣ್ಣಂಬುಲ್ಲದೀಪ್ತಿಯಂ ಮಾಳ್ಪೆನೆಂದಾನಿ ಯಮಮಂಪಿಡಿದು ಕಣ್ಣಂಬುಲ್ಲನಂಬಿ ಪರಮಸುಖದಿಂದಿರುತ್ತಿರ್ದ ನಂ ತುಮಲ್ಲದೆಯುಂ॥

ಕಂ॥ ಪುಲ್ಲಶರರಿಪು ಸೆನಾ ಸಾ। ಪುಲ್ಲದಿನಲವಿಂಪಪೂಜೆಯಂಮಾಡಿಕಣ್ಣಂ। ಬುಲ್ಲಿನನಿಬ್ಬಿಯುಮಸ್ತತ್ತು ತ್ತಲ್ಲಿಕಣ್ಣಂಬುಲ್ಲನಂಬಿ ಪೆಸರಿಂದಿರ್ದಂ॥ ೫॥

ವ॥ ಅಂತೀಪರಿಯೊಳ್ನಿಚ್ಚನಿಚ್ಚಂ ತಾಂಕೊಂಡುಪೋದ ಕಣ್ಣಂಬುಲ್ಲ ಕೊಡುಗಳಿಂದೀಪ್ತಿಗಳಂ ಬೆಳಗಿ ತಲ್ಲಿಂಗಕ್ಕೆ ಪೂಜೆಯಂಮಾಡಿನಲಿದಾಡಿ ಪಾಡಿ ಬೆಳಗಪ್ಪನ್ನೆವರಂ ಕಣ್ಣಂಬುಲ್ಲನಂಬಿ ಮಾಹೇಶ್ವರಂಜಾಗರಧೂ ರ್ಯ ನಿಯಮಮಂಪಿಡಿದು ಪಲವುವಸ್ತರ ಮಿರುತಿರ್ದ ನಂತುಮಲ್ಲದೆ ಯುಂ॥

ಕಂ॥ ಇರುತಿರುತೊಂದುದಿನಂದಿನ। ಕರನಸ್ತಮಿಸಲ್ಕೆ ತನ್ನನೇಮ

ದವುಲ್ಲಂ| ಭರದಿಂತಂದಾಶಿವಮಂ| ದಿರದೊಳ್ದೀಪ್ತಿಯ ನೆಬೆಳಗಿದಂ ತ
ದ್ಭಕ್ತಂ|| ೬|
ವ|| ಅಂತಾಭಕ್ತಂ ಕಣಂಬುಲ್ಲಿನ ಬೆಳಗಿನೊಳ್ವಿಭೂತಿ ರುದ್ರಾಕ್ಷಂಗ
ಳಂತಾಳ್ದಾಗಳ್||
ಚಂ|| ಪರಿಮಳಪುಷ್ಪಸಂಕುಳದಿ ನರ್ಚಿಸಿ ಭಕ್ತಿಮಿಗಲ್ಕೆನರ್ತಿಸು|ತ್ತಿ
ರೆ ಮನಮಂನಿರೀಕ್ಷಿಸಲುಮಾಪತಿ ತನ್ನಯುಮುಂದೆ ಬೆಳ್ಪನಾ| ಳ್ದರಿವು
ತಮಿರ್ಪ ಪುಲ್ಲಪೊರೆಯಂಬೆ ಳಗಾಗದಮುನ್ನಮೆಯ್ದೆನಿ| ರ್ಭರದೊಳಿ
ತೀಚೆ-ದೀಪ್ತಿನ ಸುಮಾಸುತಿರಲ್ ಶಿವಭಕ್ತನಳ್ಕಿದಂ|| ೭
ಕಂ|| ಬೆಳಗಾಗದಮುನ್ನಮೆಪು| ಲ್ಫಳಿಲನೆತೀರಿತ್ತು ದೀಪ್ತಿನೆಲಪೋ
ದೊಡೆಮಂ| ಗಳೆಯುರ ಸನೆಂತು ತಾಂಕ|ಲ್ತಲೆಯೊಳಗಿರ್ಪನೆನುತಮು
ರೆ ಚಿಂತಿಸಿದಂ|| ೮|
ಮನದೊಳ್ಚಿಂತಿಸುತಾಂಕಂ| ಡೆನುಪಾಯವನೀಗಳಿಂತು ಪುಲ್ತೀ
ರ್ದೊಡಮೇ| ನನಿಶಂತ್ಯೆಲದಿ ಬಳೆಧೀ| ಘನಜಕುರದದೀಪ್ತಿಯಂಶಿವಂ
ಗರ್ಪಿಸುವೆಂ|| ೯|
ವ|| ಎಂದುಕಣಂಬುಲ್ಲಷಂಬಿ ತನ್ನಮನದೊಳ್ನಿಶ್ಚಯಿಸಿ ನಿಂದಿರ್ದಾ
ಗಳ್||
ಚಂ|| ಒದವಿದಭಕ್ತಿಯಿಂದೆ ನಿಜಮಸ್ತಕಕೇಶಪ ನೊಬ್ಬಿಸಲ್ಕೆಯು|
ಟ್ಟದಮಿಗೆಸೀಳ್ದು ಸುತ್ತಿಯುಬಬೆಂಪೆನುತಾದುರ್ದ ಮಹೇಶನೋಡೆನು|
ತ್ತದಿರದೆ ಚುರ್ಚಿ ದಂಧಗಿಲು ಧಂಗಿಲುಮುಂಗರೆವುತಿರಲ್ಕೆಸನ್ಮದದಿ
ನಿವಾಳಿಸುತ್ತಗಿದು ಘೀಯೆಸುತಿರ್ದ ನುಮೇಶಕಿಂಕರಂ|| ೧೦|
ಮತ್ತಂ||
ಕಂ|| ಘುರಿಘುರಿಲಿನೆ ತಲೆನವಿರ| ಯ್ದುರಿದುಶಿರಂಪೊತ್ತಿಪೊಗೆಯ ಛಿಳಛಿ
ಳಲೆನಲ| ಬ್ಬರಿಸುತೆ ನರ್ತಿಪಶರಣಂ| ಗುರುಕೃಪೆಯಿಂಶಂಭುರೂಪು
ದೋರಿದನಾಗಳ್|| ೧೧|
ಜಟೆಗಳ್ಸುರನದಿಚಂದ್ರಂ|ನಿಟಲದಕಣ್ಣಾಣಿವಿಭೂತಿಕರಿವರಚರ್ಮಂ
ಸ್ಫುಟಮಾಗಿರಂಜಿಸಲ್ಧೂ| ರ್ಜಟಿ ದಶಭುಜ ಪಂಚಮುಖದಿ ನೊಪ್ಪಿ
ದನಾಗಳ್|| ೧೨|
ವ|| ಅಂತೊಪ್ಪುವ ದಿವ್ಯಮೂರ್ತಿಯಂಕಂಡು ಮಹಾಜ್ಯೋತಿರ್ಮ

ಯನಾಗಿಪ ಕಣ್ಣಂಬುಲ್ಲನಂಬಿಮಹೇಶ್ವರಂ ಭಯಭಕ್ತಿಯಿಂ ಚರಣ
ದೊಳ್ಪೊಡೆವಡೆದು ಪರವಶನಾಗಿರ್ಪಾಗಳ್ ಶಿವಂಕಾರುಣ್ಯದಿಂ ಪಿಡಿದೆತ್ತಿ
ಕುಳ್ಳಿರಿಸಿತನ್ನ ಮೃತಹಸ್ತದಿಂಮಸ್ತಕವಂನೇವರಿಸಿಮೈದಡವಿಬೋಳೈ
ಸುತ್ತಂ ನಂದಿನಾಥಂಗಿಂತೆಂದಂ||

ಕಂ|| ಒಲವಿಂತನ್ನಯನೇಮದ| ಫುಲುಮುರಿದುಕಿ ತೀರಿಕೆಂಡುರಿತ್ತಿ,
ಯೊಳೆನಗಂ| ತಲೆನವಿರನುರುಪಿ ಬೆಳಗಂ| ಸಲೆಮಾಡಿದಿವಂಗ ದಾಸರ್ಗ
ಮಾನಂಥರೆಯೊಳ್|| ೧೩|

ವ|| ಎಂದುಕೊಂಡಾಡುತ್ತಂ ತಾಂಬರಿಸಿದದಿವ್ಯ ವಿಮಾನದೊಳ್ಕಣ್ಣಂ
ಬುಲ್ಲನಂಬಿಯುಂ ಕುಳ್ಳಿರಿಸಿಶಿವಂ ನಿಯಾಮಿಸಲ್ಕಾಗಳ್||

ಕಂ|| ಅನಿಮಿಷರು ಘೊಯೆನುತಿಲ್ಭೂ| ವಿನುತಕಣ್ಣಂಬುಲ್ಲನಂಬಿ ವೆರ
ಸತಿಭರದಿಂ| ಘನಮಣಿಪುಷ್ಪಕವಿರದ| ತ್ಯನುನಯದಿಂ ರಜತಗಿರಿಗೆಬಂ
ದುತ್ತಾಗಳ್|| ೧೪|

ವ|| ಅಂತುಬಂದಕಣ್ಣಂಬುಲ್ಲನಂಬಿ ವೆರಸು ಗಣಂಗಳ್ಸಹಿತೀಶ್ವರನೊ
ಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ|| ಗಂಧರ್ವರ್ಫೊರ್ಗಳಲ್ಸುರ| ಸಿಂಧುಕಣ್ಣಂಬುಲ್ಲನಂಬಿಮಾಹೇಶಂ
ಗಂ. ಸೀಥ.ರವದನನಪದವಿ| ತ್ತಂದಾಪುರವಿಜಯ ನೆಸೆದನಾಸ್ಥಾಯಿಕೆ
ಯೊಳ್|| ೧೫||

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಪಿಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರ ಚಾರಿತ್ರದೊಳ್ಕಣ್ಣಂಬುಲ್ಲನಂಬಿ ಮಾಹೇಶ್ವರ ಕಥಾ
ವೃತ್ತಾಂತರ ಅಷ್ಟಚತ್ವಾರಿಂಶ ದಾಶ್ವಾಸಂ||

—ಶ್ರೀ—

## ನಾಲ್ವತ್ತೊಂಭತ್ತನೆಯ ಆಶ್ವಾಸಂ
## ಕಡವೂರಿ ಕಾರಿಗಳ ವೃತ್ತಾಂತಂ

ಕಂ॥ ಘನಶಗಣಮುಖಕಮಲರವಿ, ಯೆನಿಸುವ ಕಡವೂರಕಾರಿಗಕ್ಷೆಯುಪದಮಂ। ಮನವೊಲ್ದುತ್ತಮಪದಮಂ ಸುಖಿ। ಪನನಿಧಿಸೋಮೇಶನೊಲ್ದು ಪಾಲಿಕೆನಮ್ಮಂ॥ ೧।

ನುತಚೋಳೋರ್ವರೆಯೊಳ್ವಿ। ಶ್ರುತಯಶದಿಂ ಭಕ್ತಜನದ ಶಿವಮಂದಿರದಿಂ। ದತಿರಂಜಿಸುತಂ ಪಿರಿದುಂ। ನ್ನತಿಯಿಂ ಕಡವೂರನಿಪ್ಪ ಸತ್ಪುರವಿರ್ಕುಂ॥ ೨

ಪಿರಿದೊಪ್ಪುವ ತತ್ಪುರದೊಳ್। ಶ್ವರಮಂ ನವಶೃಂಗಿಸಾಥ ನೆನಿಸುತ್ತಂ ಸ। ಚ್ಚರಣರಮೇಳದೊಳಿರ್ಪಂ। ನಿರುತಂ ಕಡವೂರ ಕಾರಿಯೆಂಬ ಶಿವೈಕ್ಯಂ॥ ೩॥

ಪರಿಹಾಸಚರ್ಚೆಯಿಂ ಭ। ಕ್ತರನಾಸೆಗಿಸುತ್ತಮಿರ್ಪ ನೇಮವನಾಂತಿರ್ದ। ಸ್ವರನಂ ಬಿಡದರ್ಚಿಸುತಾ, ದರದಿಂ ಕಡವೂರ ಕಾರಿಯಿರ್ಪಂ ಜಸದೊಳ್॥ ೪।

ಕಂಡಶಿವೈಕ್ಯನಗುತಿರೆ ಚಂಡಿಕೆ ಮಂಕವಿಮುಕ್ಕೋಡಕೆಯುಂ ನಾಸಿಕಮುಂ। ಪೆಂಡಿಸಿ ಕುಣಿಸುತ್ತಂ ಗುಣ। ಮಂಡನ ಕಡವೂರ ಕಾರಿ ಬಿನದದ ದಿನಿಶಂ॥ ೫॥

ವ॥ ಅಂತೀಪರಿಯ ನಿಯಮಂಪಿಡಿದಿರುತ್ತಮೊಂದು ದಿವಸಂ ಸಿಂಹಾಸನದೊಳಿರ್ಪ ಶರಣರ ಸಭೆಗಾನಂದದಿಂ ಬಂದು ಶರಣಾರ್ಥಿ ಯೆನುತ್ತಂ ಕುಳ್ಳಿರ್ದ ಕಡವೂರಕಾರಿ ಪರಿಹಾಸಚರ್ಚೆಯಿಂದಿರುತಿರ್ಪಾಗಳ್ ಶಿವಭಕ್ತರನಲ್ಲದೆ ಕೇಳಿಸೆನೆಂಬ ಶಿವದಾಸನಪ್ಪ ನರ್ತಕನೊರ್ಬಂ ತನ್ನ ಸಂಪ್ರದಾಯಮುಂ ಬೆರಸು ಬಂದು ನೋಡನುಟ್ಟು ನಿಂದಿರ್ದು ಕಹಳೆಗಿರುಗಟೆ ತಾಳಕಂಸಾಳವಾದ್ಯ ರಚನೆಗಳುಂ ಸಂಭ್ರಮದಿಂ ತೋರುತಿರ್ಪವಸರದೊಳ್।

ಕಂ। ತನುವಿನವಿಭೂತಿಮೂಗಿನ। ಕೊನೆಯೊಳ್ ಲತ್ತೆ ದಾಪತಿರ್ಪ ರುದ್ರಾಕ್ಷಿಗಳಂ। ಘನಹಾಸ್ಯ ರಸಮನೋದವಿಸು। ತನುಪಮ ಕಡವೂರ ಕಾರಿಯಿರ್ದನದಾಗಳ್॥ ೬॥

ವ॥ ಅಂತು ಜಟ್ಟ... ಕಡವೂರಕಾರಿ... ಸ್ವಭ... ಜನಮುಂ ನಗಿಸು

ತ್ತನಿಃರಲ್ಕಿದೇರ ಸಂಭ್ರಮಮೆಂದೆಸೊಡಿದೆ ನೋಡೆಯುರ್ಕೇಳ್ದಿ ಪರರಿನಿಂ
ದು ಕೇಳಿಸಿದಪೆನೆಂಬ ನರ್ತಕನಿಂತೆಂದಂ॥

ಮ॥ ಶರಣೌಘಂದಿಟಮಿಂದುಕೇಳ್ವನಟಕೇಳ್ನಿಂದು ಕೇಳಿಪ್ಪ
ನಂ॥ ಬೆರಡೆಂದುಂ ಘಟಮಿಪ್ಪುದಲ್ಲ ಪೊಡೆಯರ್ಚಿತ್ತ್ವಸಲಿಂದೋ ತು
ನಿಂ॥ ನಿರುತಂಕೇಳಿಸು ನಾಳೆಗೊಂದುನುಡಿದಾ ಮಹೇಶ ಸಂದೋಹ
ಮಂ ಭರದಿಂದಂ ಕಡವೂರ ಕಾರಿ ನಗಿಸುತ್ತಿರ್ದಂಮಹೋತ್ಸಹದಿಂ॥

ವ॥ ಅಂತೀಪರಿಯೊಳ್ ಶರಣಜನಮಂ ನಗಿಸುತ್ತಾನಗೆಯ ಸೊಬ
ಗಂ ಶಿವಂಗರ್ಪಿಸುತಂ ಕಡವೂರ ಕಾರಿ ಮಾಹೇಶ್ವರಂ ಸದ್ಭಕ್ತಿಯಿಂದಿ
ರುತಿರಲ್ಕಿವಂ ಕೈಕೊಂಡಾನಂದದಿಂ ತಚ್ಛಿವೆಗೆ ಕೈಲಾಸಸ್ಥಾನದೊಳಿಂ
ತೆಂದಂ॥

ಕಂ॥ ಜಗದೊಳ್ನಗೆನೆಂಬಪರಂ॥ ನಗಿಪಂಗಡಭಕ್ತನೋರ್ಬ ನವನಂ
ನೋಡ॥ ಲ್ಕಗರಾಜತನೂಭವೆನೆ॥ ಟ್ಟಗೆಪೋಪಂ ನಾಪೆನುತ್ತ ಮಿರ್ದಂ
ಗಿರಿಕಂ॥ ೮॥

ವ॥ ಅಂತಿರ್ದಗಜೆವೆರಸು ಕೈಲಾಸಾದ್ರಿಯಂ ಪೊರಮಟ್ಟು ಚೋಳ
ಮಂಡಳಮಂ ನಿರೀಕ್ಷಿಸುತ್ತಂಬಂದು ಕಡವೂರಂ ಪೊಕ್ಕಾಗಳ್॥

ಕಂ॥ ಶರಣಸಭಾಜನವತ್ಯಾ॥ ದರದಿಂ ಕಡವೂರಕಾರಿ ನಗಿಸುವಬಿನ
ದ॥ ಕ್ಕಿರುಚಿತ್ತವಿತ್ತು ಮುದದಿಂ॥ ದಿರಲಿತ್ತಲುಮಾಲಿ ಕುಹಕವೇಷದೆ
ಬಂದಂ॥ ೯॥

ಭಸಿತದಿರುದ್ರಾಕ್ಷೆಗಳಿಂ॥ ಪೊಸಕಾಷಾಂಬರದಿ ಮಿಸುಪಜಡೆಯಿಂದೊ
ಪ್ಪಿ॥ ತ್ತುಸವಾಕ್ಷ ನಗಜೆವೆರಸು॥ ಲ್ಲಸದಿಂಪರಜಂಗಮಾಕೃತಿಯೆಸೊಳೆರ್ತಂ
ದಂ॥ ೧೦॥

ವ॥ ಅಂತುಶಿವಂಗಿರಿಜೆ ವೆರಸು ಕುಹಕವೇಷದಿಂ ಜಂಗಮವಾಗಿಬಂ
ದು ನೋಡುತ್ತಿರಲ್ಕಲ್ಲಿರ್ದ ಶರಣರ್ಕಂಡು ಶರಣಾರ್ಥಿಯೆನುತ್ತೆರ್ದು
ಕೋಗಿಕೈಗೊಟ್ಟುತಮ್ಮ ನಡುವೆಕುಳ್ಳಿರಿಸಿ ಸನ್ಮಾನಿಸುತ್ತಿರ್ಪಾಗಳ್

ಕಂ॥ ಸುರಲತೆಪೊರೆಯೊಳ್ಸೊಗಯಿಪ ಹರಿಚಂದನದಂತೆರಮಣಿವೆರ
ಸೊಪ್ಪುವಭಾ॥ ಸುರಜಂಗಮ ಲಿಂಗಕ್ಕಾದರದಿಂ ಕಡವೂರಕಾರಿ ಯಾ
ನತನಾದಂ॥

ವ॥ ಅಂತಾಡಂಪತಿಗಳಪ್ಪ ಜಂಗಮಂಗಳೆ ಶರಣಾರ್ಥಿಯೆಂದೆನುತ್ತಂ

ಕೈಮುಗಿದು ಪೆಂಮೆಟ್ಟಿ ನಿಂದಿರ್ದು ತಚ್ಛರಣಸಭಾಜನಮಂ ನಾನಾಪ
ರಿಯಿಂ ನಗಿಸುತ್ತಾ ನಗೆಯ ಸೋಗಸಂ ಕಡವೂರಕಾರಿ ಶಿವಂಗಪ್ಪಿಸು
ತಿರ್ಪಾಗಳ್‌।

ಕಂ॥ ಪರಿಹಾಸಚರ್ಚೆಗೆಲ್ಲಂ। ಶರಣರ್ನಗುತಿರ್ದ ರವರೊಳಾದಂಪತಿ
ಗಳ್ನಿರುತಂ ನಗದಿರ್ಪನುಪಂ। ಪರಿಕಿಸಿ ಕಡವೂರಕಾರಿ ಮನದೊಳ್ನೆ
ನೆದಂ॥ ೧೨

ವ॥ ಎಂದುಮನದೊಳೊಂದು ಪಾಯಮಂ ನೆನೆದಾಗಳ್‌।

ಮ॥ ಭರದಿಂದರ್ದಿದಿರಾಗಿ ಪೋಗಿ ನಗೆನೆಂದಿರ್ದಿರ್ಬರಂ ನೋಡುತ
ಚ್ಛರಿಯಿಂದೇಂ ಶರಣಾರ್ಥಿ ಯೆಂದು ನಿಮಗಿಂತೀಯುಪ್ಪೆಯುತ್ತರ್ಂಗಿಯು
ಪ್ಪರೆಪೇಳ್ದೀವಯಿನಲ್ಕಿನಾಣ್ಬುತಭಪಂ ಗೌರೀಶಮೋತಂನಗು। ತ್ರಿಕಾಲ
ಗಳ್ಕಡವೂರಕಾರಿನಗೆಯಂ ಲಿಂಗಾರ್ಪಣಂಮಾಡಿದಂ॥ ೧೩

ಕಂ॥ ಅಂತೆಸವಹಾಸ್ಯರಸಮಂ। ಸಂತಸದಿಂ ಭಕ್ತನರ್ಪಿಸಲ್ಕೈಕೊಂ
ಡಾ। ಕಂತುಹರನೋತುಶರಣರ। ಸಂತತಿಬೆರಗಾಗೆ ರೂಪುದೋರಿದ
ನಾಗಳ್‌॥ ೧೪

ಉತ್ಸಾಹವೃತ್ತಂ॥ ತರುಣಕಿರಣರಸೆವನಿಳಪ ಜೇಜೆಜೇಗಳೊಳ್ಳ
ರ। ಪರಮಸುಖದಿನಿರ್ಪ ದಿವಿಜಗಂಗೆ ಬಾಲಚಂದ್ರಮಂ ಮರುತಮಿ
ತ್ರನಹಿವಿಷಂ ವಿಭೂತಿಗೌರಿರಂಜಿಸಲ್‌। ಗಿರಿಕನ್ಯೆದು ಮೊಗದಿಪತ್ತು
ತೋಳ್ಗಳಂದಮೊಪ್ಪಿದಂ॥ ೧೫

ವ॥ ಅಂತಾಸಭಾಮಧ್ಯದೊಳ್ಮರ್ತ್ಯರೂಪಮನುಳಿದುನಿಜದಿವ್ಯಮೂ
ರ್ತಿಗಳಂ ತೋರಿಸಿದ ಗೌರೀಪರಮೇಶ್ವರರಂಕಂಡು ಭಯಚಕಿತಹೃ
ದಯನಾಗಿ ಪರಮಭಕ್ತಿಯಿಂ ಚರಣಂಗಳೊಳ್ಪೊರಳ್ದು ನಲಿವುತ್ತಿರ್ಪ
ಕಡವೂರಕಾರಿಗೋತು ಭೃಂಗಿನಾಥಪ್ರಿಯನಪ್ಪ ಗಂಗಾಧರಂ ಪಿಡಿದೆ
ತ್ತಿ ಕುಳ್ಳಿರಿಸಿ ಮೆಯ್ದಡವಿ ಬೋಳೈಸುತ್ತಂ ನಂದಿನಾಥಂಗಂದಿಂತೆಂ
ದಂ॥

ನಗೆನೆಂಬಫಲವನಾಂಪಿಡಿದ। ದನಗಜೇಂದ್ರತನೂಜೆ ವೆರಸಿಬಂದಿರಲೆನ್ನಂ
ಮಿಗೆನಗಿಸಿದ ನಿವನೆನೆಮಾ। ಜಗದೊಳ್ಕಡವೂರಕಾರಿಗಾದೊರೆಧ
ರೆಯೊಳ್‌॥ ೧೬

ವ॥ ಎಂದುಕೊಂಡಾಡುತ್ತಂ ತಾಂಬರಿಸಿದ ದಿವ್ಯವಿಮಾನದೊಳ್ಕ,

ಸಿಸಿ ಕಡವೂರಕಾರಿಮಾಹೇಶ್ವರನಂ ಗಿರಿಜೇಶಂ ನಿಮಿಷ್ಠಾಮಿಸಲ್ಕಾಗಳ್
ಕಂ॥ ಬೋರೆಂಡು ಕರವಕುಸುಮಾ। ನ್ಸಾರದಿಕಡವೂರಕಾರಿವೆರಸಂ ತಾಗಳ್।ಚಾರುತರಮಣಿವಿಮಾನಂ। ತಾರಾದ್ರಿಗೆಬಂದುದಮರಧುಂಧುಭಿರವಪೊಳ್॥ ೯೭॥
ವ॥ ಕಡವೂರಕಾರಿಸಮೇತಂ ಸಕಲಗಣಂಗಳ್ವೆರಸು ಗೌರೀರಮಣ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥
ಕಂ॥ ಕಡವೂರಕಾರಿಗಾಗ। ಳ್ಕಡುನೇಹಂಮಿಕ್ಕುದಿವಿಜನುತಗಣಪದಮಂ। ಸಡಗರದಿನಿತ್ತು ಮೆರೆದಾವೃಡನೊಲವಿಂದೊಪ್ಪ ತ್ರಿದ್ದನಾಸ್ಥಾಯಿಕೆಯೊಳ್॥
ಗದ್ಯ ಇದುಸಕಲಸುರನಿಕರಮುಕುಟಮಾಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಸುಲಿಗೆರೆಯ ಪುರಾಧಿಪ ಶ್ರೀ ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ಕಡುವೂರಕಾರಿ ಮಾಹೇಶ್ವರಕಥಾವೃತ್ತಾಂತಂಏಕೋನಪಂಚಾಶದಾಶ್ವಾಸಂ

—ಶ್ರೀ—

ಐವತ್ತನೆಯ ಆಶ್ವಾಸಂ

ತಿರುನೀಲಕ್ಕರ ಕಥಾವೃತ್ತಾಂತಂ

ತಿರುನೀಲನಕ್ಕ ಶಿವೈಕ್ಯಂ। ಗುರುಕೃಪೆಯಿಂ ದೇವವಿನುತಗಣಪದಮಂಕೊ। ಟ್ಟರವಿಂದಭವವಿನುತಪುಲಿ।ಗೆರೆವರ ಸೋಮೇಶನೊಲ್ದುಪಾಲಿಕ್ಕೆನಮ್ಮಂ॥ ೧।
ಚಂ॥ ವಿಲಸಿತಲಿಂಗಭಕ್ತಿಯುತವರ್ಮಣೆಯೆಂದೆನಿಸಿರ್ಪಚೋಳಮಂಡಲದೊಳನೇಕ ದೀರ್ಘಿಕೆ ತಟಾಕಚಯಂ ಧವಳೇ ಕ್ಷುವಾಟಸಂ।ಕುಲಮುಳ್ಳ ನಂದನಾವಳಿ ನೆಗಳ್ತೆಯಶಾಲಿ ಯುಗರ್ದೆಗಳ್ತನಂ। ಗೊಳಿಪರ ಶಾಂತಿಮಂಗಳವೆನಿಪ್ಪ ಪುರಂಪಿರಿದೊಪ್ಪಿತೋಱುಗುಂ॥ ೨।

ಕಂ|| ಪಿರಿದೆಸೆವಶಾಂತಿಮಂಗಳ| ಪುರಪ್ರೊಳ್ಸಲ್ಲೀಲೆಯೆಂಬ್ಬಪೆಂಢ್ತಿವೆರಸಾ,ದರದಿತಿರುನೀಲನಕ್ಕಂ|ಗಿರಿಶನನರ್ಚಿಸುತ್ತಮಿರ್ಪ್ಪನತಿಮುದದಿಂದಂ|

ವ|| ಅಂತುನಿಜಪತ್ನಿ ವೆರಸುತಿರುನೀಲನಕ್ಕಮಾಹೇಶ್ವರಂ ದಿನದಿನದೊಳ್ನಾನಾಪುಷ್ಪನಿಕರದಿಂ ಶಾಂತಿಮಂಗಳಪುರಾಧೀಶನಪ್ಪ ಶಿವಲಿಂಗಮಂ ಭಕ್ತಿಭಾವದಿಂದರ್ಚಿಸುತ ಮಿರ್ಪನಂತುಮಲ್ಲದೆಯುಂ||

ಕಂ| ಒಂದುದಿನದುದಯದೊಳ್ನಾ| ನಂದದಿನಾಭಕ್ತನೊಸೆದುತ್ತಂದಂನಲವಿಂ| ಕೆಂದಾವರೆಬೆಳ್ದಾವರೆ ಪೊಂದಾವರೆಯೆಂಬ್ಬ ಪಲವು ಕುಸುಮಾವಳಿಯುಂ ೪

ವ|| ಅಂತುನಾನಾಪರಿಯ ಕುಸುಮಂಗಳಂ ನಿಜಗೃಹಕ್ಕೆ ತಂದಲ್ಲಂ ಕೊಂಡು ತನ್ನಸತಿಯಪ್ಪಸಲ್ಲೀಲೆ ವೆರಸುತಿರುನೀಲನಕ್ಕಮಾಹೇಶ್ವರಂ ಶಾಂತಿಮಂಗಳ ಪುರಾಧೀಶನಪ್ಪ ಶಿವಲಿಂಗವೆಡೆಗೆಯ್ತಂದು ಸವಿನಯದೊಳ್ಪದ್ಮಾಸನದೊಳ್ಕುಳ್ಳಿರ್ದಾಗಮೋಕ್ತಯಿಂ ವಿಭೂತಿರುದ್ರಾಕ್ಷೆಗಳಂ ತಾಳ್ದಿರ್ದಗಳ್||

ಕಂ|| ಪಿರಿದುಂಸಂಭ್ರಮದಿಂದಂ| ಶರಣಂನಲವಿಂದೆ ಮಜ್ಜನಕ್ಕೆರೆಯಲ್ಕಾ| ಪರಲಿಂಗದಮೇಲಣಬಂ, ಧುರಕುಸುಮದ ಪೂಜೆಯುಂ ವಿಸರ್ಜಿಸ-ಪಾಗಳ್|| ೫||

ವಿಲಸಿತಲಿಂಗದಮೆಯ್ಯೊ| ಳ್ಸಲಂದಿಪರಿವುತ್ತಿರಲ್ಕೆ ಸಲ್ಲೀಲೆಮಹಾಕುಳಚೆಸ್ತೆಯಾಗಿನೋಡು| ತ್ತಲೆಲೇತೆಗೆತೆಗೆಯೆನುತ್ತ ಬಾಯಿವ್ವಡುತಿರ್ದಳ್|| ೬

ಚಂ|| ನೆರೆಲಲಿತಾಂಗನಪ್ಪ ಶಿವಲಿಂಗದಮೇಲೆ ಸೆಲಂದಿಬಿರ್ದುದಕ್ಕೆ ಕೊಳಿಡರಿಂ ಪುಗಲ್ಗೆಳೊಗೆ ಧಳ್ಕದೆಘಾಣವೆನುತ್ತೆ ಚಿತ್ತದೊಳ್ಮರುಗಿಕರಾಗ್ರದಿಂ ಫೊರಸಿಕಣ್ಬನಿಗಳ್ಸುರಿವುತ್ತೆ ಸುಯ್ದುತೂ| ಪಿರಿವುತೆಮಂತ್ರಿಸುತ್ತಳಲುತಿರ್ದ ಉಮಾಪತಿಭಕೆ ದುಃಖದಿಂ|| ೭

ಕಂ|| ಕಡುನೇಹದಿ ತೂಪಿರಿವು| ತ್ತೊಡಲಂ ಪೊಸೆದೇಲಿಬಿರ್ದುಪೊಕ್ಕುತ್ತಿರ್ಪ| ಮಡದಿಯನಂತಾನಿಜಪತಿ, ಪ್ಯಾಡಭವನದೆ ಕೋಪದಿಂದೆ ನೋಂಕಿದನಾಗಳ್| ೮

ವ|| ಅಂತು ಶಿವಲಿಂಗದಮೇಲು ಗುಳ್ಳೆಡಿಯುಲ್ದಾತ್ತ ಪಿರಿದಲೆಂದು ನಿಜಸತಿಯುಂ ಪೊರವಡಿಸಿ ತಾಂ ...ಡಿತಾಂತಂ

ದನಾನಾ ಪರಿಯ ಪುಷ್ಪಂಗಳಿಂ ಶಿವಲಿಂಗಕ್ಕರ್ಚನೆಯಂಮಾಡಿಪೊಡಮ
ಟ್ಟು ನಲಿದಾಡಿಪಾಡಿ ತಲ್ಲಿಂಗಗೇಹದಿಂ ಪೊರಮಟ್ಟುಬರ್ಪಾಗಳಲ್ಲಿ ನೆರೆ
ದಿರ್ದಶಿವಭಕ್ತರ್ಗೆ ಸಲ್ಲೀಲೆಯಿಂತೆಂದಳ್||

ಕಂ|| ಮೃದುತನುವಪ್ಪೆನ್ನಯಲಿಂ| ಗದಮೇಲೆ ಸೆಲಂದಿನೀರಿಡೇ ಪ್ಪಿಗು
ಳ್ಗಳ್ತಾ| ಮುದಮಿಪುವೆಂದಾಂ ಮಂತ್ರಿಸು| ವುದನೀಪತಿಕಂಡು ತವರಿ
ದಂಗೃಹದೀಂದಂ|| ೯

ವ|| ಎಂದುಶಿವಭಕ್ತರ್ಗೆ ದೂರುತ್ತಿರ್ಪಸಲ್ಲೀಲೆಯೆಂಬ ಸತಿಯಂಪರಿ
ಭಾವಿಸುತ್ತುಂ ನಿಜಗೃಹಕ್ಕೆ ತಿರುನೀಲ್ನಕ್ಕ ಮಾಹೇಶ್ವರಂಬಂದು ಶಿವ
ಧ್ಯಾನದಿಂದಂ ತಾನಿರುಳೊಳ್ಕಣ್ಮುಚ್ಚಿರಲ್ಕನಸಿನೊಳ್ ಶಿವಂಬಂದಿಂತೆಂ
ದಂ||

ಚಂ|| ಪರಮಶಿವೈಕ್ಯ ಕೇಳ್ಸೆಲದಿಯೆನ್ನಯ ಮೇಲದುನೀರಿಡಲ್ಕೆತೂ|
ಪಿರಿಸುತೆನಿನ್ನ ಪತ್ನಿಯಿಗೆನೇಹದಿಮಂತ್ರಿಸೆನೀಂತೆರಳ್ದುಮಾ. ಸುರದೊ
ಳೆ ತಚ್ಛಿವಾಲಯುದಿ ನೂಂಕಿದೆಯಕ್ಕಟ ಎನ್ನ ದೇಹದೊ| ಳ್ಪರಿದುಪುಗು
ಳ್ಗಳುದ್ಭವಿಸಿದಪ್ಪುವು ನಿಟ್ಟಪುದೆಂದನಾಶಿವಂ|| ೧೦|

ವ|| ಎಂದುಸ್ವಪ್ನಮುಖದೊಳ್ ಶಿವಂಪೇಳಲ್ಕಾತಿರುನೀಲ್ನಕ್ಕಮಾಹೇ
ಶ್ವರಂ ಬೆಚ್ಚಿದಂತೆದ್ದು ಬೆಳಗಪ್ಪಾಗಳ್ನಿಜಪತ್ನಿಯಂ ಕರೆದೊಡಗೊಂ
ಡು ಶಿವನಿಳಯಕ್ಕೇಳ್ತಂದೊಳಪೊಕ್ಕು ಶಿವಲಿಂಗದ ಸಮೀಪದೊಳಿರ್ದ
ದಂಕುಳ್ಳಿರ್ದು ನಿರ್ಮಾಲ್ಯಮಂ ವಿಸರ್ಜಿಸಿ

ಕಂ|| ಕೈಯೊಳ್ದೀಪಿಕೆಯಂಪಿಡಿ| ದಯ್ಯೋಶಿವಮೂರ್ತಿ ನೋಂದಿತೆಂ
ದಾಲೋಕಂ| ಗೆಯ್ವಲ್ಲುತ್ತುಬಿಂಪುಗುಳ್ಗಳ್| ಮೆಯ್ಯೊಳಿರಲ್ಕಂಡು ಭಕ್ತೆ
ಭೊಪ್ಪೆನೆಬಿರ್ದಳ್|| ೧೧

ವ|| ಅಂತುಬಿರ್ದ ನಿಜಪತ್ನಿಯಂಕಂಡು ಮನದೊಳ್ಬೆಚ್ಚಿ ಶಿವನೆನಗೆ
ಕನಸಿನೊಳ್ಪೇಳ್ದ ಮಾತೇದಿಟಮಾದುದೆನುತ್ತುಂತಿರುನೀಲ್ನಕ್ಕಮಾಹೇ
ಶ್ವರಂ ನಾನೇತರ್ಕೀಕೆಯಂ ಶಿವನಿಳಯದಿಂ ನೂಂಕಿದೆ ನಕ್ಕಟೆನು
ತ್ತುಂ ತನ್ನ ಬುದ್ಧಿಗೆ ತಾಂಖತಿಗೊಳುತಿರ್ಪಾಗಳ್ ಶಿವಂ ತದ್ದಂಪತಿಗ
ಳ ಮೇಲೆಕರುಣಮಂಮಾಡಿ ನಿಜಮೂರ್ತಿಯಂ ತೋರಲ್ಕಾಗಳ್||

ವನಮಯೂರವೃತ್ತಂ|| ಪಿಂಗಳಜಟಾಮಕುಟಚಾಪಗೆ ನೆಗಲ್ದಾ| ತಿಂ
ಗಳನಲಂ ಫಣಿವಿಷಂ ಭಸಿತವಸ್ತ್ರ| ತ್ರ್ಯಂಗದಶಬಾಹು ವರಪಂಚಮು

ಖಮೊಪ್ಪಲ್ಮಂಗಳೆಯುಗಂಡನೊಲವಿಂ ದೆಸೆವುತಿರ್ದ೯ಂ|| ೧೩|

ವ|| ಅಂತೆಸೆವಸರ್ವಮಂಗಳಾಪತಿಯ ದಿವ್ಯಮೂರ್ತಿಯಂ ತದ್ದಂಪತಿಗಳ್ಕಂಡು ಭಯಭಕ್ತಿಯಿಂ ಪರಮಾನಂದರಸದೊಳೋಲಾಡಿ ಪದದೊಳ್ಪೊರಳ್ದು ಮೆಯ್ಮರೆದಿರ್ಪಾಗಳ್||

ಕಂ|| ಆಮುಗ್ಧಭಕ್ತರಂ ಸತ್ಪ್ರೇಮದಿಪಿಡಿದೆತ್ತಿ ಕುಳ್ಳಿರಿಸಿಬೋಳೈಸು| ತ್ತಾಮಹಿತಕರುಣ ವಾರಿಧಿ| ಸೋಮೇಶಂಮೆಚ್ಚಿ ನಂದಿನಾಥಂಗೆಂದಂ|| ೧೪|

ಸೆಲದಿಯುದೆಸೆಯಿಂದೆನ್ನಯ| ಲಲಿತಾಂಗಂನೊಂದುದೆಂದು ನೇಹದಿನೆನ್ನಂ| ಸಲೆಮಂತ್ರಿಸಿದೀಭಕ್ತ| ಗಿ=ಳೆಯೊಳಗಾರ್ಸದೃಶರೆಂದನಾಗಿರಿಜೇಶಂ|| ೧೫

ವ|| ಎಂದಾಮುಗ್ಧ ಭಕ್ತರಪ್ಪ ತದ್ದಂಪತಿಗಳಂ ಸದಾಶಿವಂ ಕೊಂಡಾಡುತಿರ್ಪಾಗಳ್||

ಕಂ|| ಧರೆಯಂಬೆಳಗುತ್ತಂಬಂ|ದುರುಮಣಿಪುಷ್ಪಕದೊಳಾ ಶಿವೈಕ್ಯರನತ್ಯಾ| ದರದಿಂಕುಳ್ಳಿರಿಸಿ ಮಹೇ| ಶ್ವರನಾಗಳ್ನಿಯ ಮಿಸಲ್ಕೆ ಚೆಗಿದುತ್ತಾಗಳ್|| ೧೬

ಮೊಳಗುವದುಂದುಭಿಘೋಷದ| ಮಳೆಮೆಯ್ಯಲ್ಮುಗ್ಧಭಕ್ತರಂ ತಳೆದಿರ್ಪಾ| ತೊಳಗುವಮಣಿಪುಷ್ಪಕವದು| ಕಳಧೌತಾಚಳಕೆ ಬಂದುದುತ್ಸವದಿಂದಂ||

ವ|| ಅಂತುನಿಜಸತಿವೆರಸುಬಂದತಿರುನೀಲ್ನಕ್ಕ ಮಾಹೇಶ್ವರಂಗೂಡಿ ಪ್ರಮಥಗಣಸಮೇತಂ ಧೂರ್ಜಟಹರುಷದಿಂ ದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ಪರಮಗುಣನಿಧಿಯೆನಿಪ್ಪಾ! ತಿರುನೀಲ್ನಕ್ಕಗೆ ರಮಣಿವೆರಸೊಲವಿಂದಂ| ನಿರುಪಮಗಣಪದಮಂಶಂ| ಕರನೊಲವಿಂದಿತ್ತು ಮೆರೆದನಾನ್ಸಾಯಿಕೆಯೊಳ್|| ೧೭|

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚೆಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪತ್ರಿಷಷ್ಟಿ ಪುರಾತನರ ಚರಿತ್ರೆಯೊಳ್ ತಿರುನೀಲ್ನಕ್ಕ ಮಾಹೇಶ್ವರಕೆ

ಥಾವೃತ್ತಾಂತಂ ಪಂಚಾಶದಾಶ್ವಾಸಂ||

...ಶ್ರೀ...

ಐವತ್ತೊಂದನೆಯಆಶ್ವಾಸಂ

ನೈಶಭಕ್ತರಕಥಾವೃತಾಂತಂ

ಘನಮಹಿಮನೈಶಭಕ್ತ। ರ್ಗನುಪಮಗಣಪದಮನಿತ್ತು ಮೆರೆವೊಪ್ಪುವ ಪಾ। ವನಮೂರ್ತಿಸತ್ಯನಿಧಿವರ। ಮುನಿನುತಸೋಮೇಶನೊಲ್ದು ಪಾಲಿಸನಮ್ಮಂ|| ೧

ಪೆಸರ್ವೆತ್ತಿಕೋಳಧರೆಯೊ। ಳ್ಮಸುನಿಯಕಳಸಂಗಳೀಶಭವನದಿಭಕ್ತ।ಪ್ರಸರದವರ ನಿಳಯಂಗಳ। ನಸೆದಿರ್ಪುದುತಿರುವನಂದಪುರಮದು ಪೆಂಪಿಂ|| ೨

ಅತಿರುವನಂದಪುರದೊಳ್। ಪ್ರೀತಿಮಿಗಲ್ನೆಯ್ದು ನವ್ಯ ದಿವ್ಯಾಂಬರಮಂ। ಭೂತೇಶನಭಕ್ತರ್ಗಿ। ತ್ತೋತಿರ್ಪಂ ನೈಶಭಕ್ತನತಿಮುದದಿಂದಂ|| ೩

ಮತ್ತಮಾತಂಗೆ

ಪರಿಪೂರ್ಣಶಶಿಗೆ ಚಂದ್ರಿಕೆ। ಪಿರಿದೆಸೆವಂತೊಲ್ದುನೈಶ ಭಕ್ತರ್ಗತಿಸಚ್ಚರಿತೆ ಪತಿಹಿತವೆಯೆಂಬಾ। ವರನಾಮದಪತ್ನಿ ಯಿರ್ಪಳುತ್ಸವದಿಂದಂ|| ೪

ವ|| ಅಂತೆಸೆವಕಾಂತೆವೆರಸು ಸಂತಸದಿಂದಿರುತಂ ನೈಶಭಕ್ತಂ ತಾಂ ನೆಯ್ದು ದೇವಾಂಗವಸ್ತ್ರಂಗಳಂ ಕಂತುಹರಭಕ್ತಸಂತತಿ ಗಿತ್ತುವರೇನಂ ಕರುಣಿಸಿಕೊಟ್ಟಧನಮಂ ತಂದುಲಿಂಗಮೂರ್ತಿಗಳಪ್ಪ ಜಂಗಮಂಗಳ್ಗೆ ಪಿಂಗದೆ ಮನೋಭಾವದಿಂ ಬೆಸಕೆಯ್ವುತ್ತಿರ್ದ ಸಂತುಮಲ್ಲದೆಯುಂ||

ಕಂ|| ಇಂತೀತೆರದಿಂ ಜಂಗಮ। ಸಂತತಿಗಂ ಕಾಂತೆವೆರಸು ಬೆಸಕೆಯ್ವುತ್ತಂ। ಸಂತಸದಿನೈಶಭಕ್ತಂ। ಕಂತುಹರಾರ್ಚನೆ ಯೊಳಿರುತಮೊಂದಂನೆಗಳ್ದಂ|| ೫

ವ॥ ಧರೆಯೊಳ್ಮನ್ನಾ ಪವಂನೆಯ್ದುದಪೊಸತೆನಿಪತ್ಯಂತಸೌಂದರ್ಯ
ದಿವ್ಯಾಂ| ಬರಮುಂನೆಯ್ದುಟ್ಟವತ್ತ್ರ್ಯೆಪಡತೊವೆ ನೀಡಾಡಿಪೆಂಲೋಕ
ವೆಲ್ಲಂಪಿರಿದಾಶ್ಚರ್ಯಂಬಡುತ್ತಿರ್ಪನೆಗಮುಡಿಸುವೆಂ ತಾನೆನ ... ಸ
ಕ್ಕಾ|ದರದಿಂದಂನೈಶಭಕ್ತಂವಿಲಸಿತಗು ... ದಿಂನೆಯ್ದ ... ದ್ಯಕ್ತನಾದಂ॥
ವ॥ ಅಂತುದ್ಯಕ್ತನಾಗಿ ವಿಪುಳವಪ್ಪಪಟ್ಟುನೂಲಂತೆಗೆದು ಪರಿಪರಿ
ಯಚಿತ್ರಪತ್ರಂಗಳ ನಾಣೆಯಂಗಳಂಕಟ್ಟಿಶ್ವೇತಪೀತಹರಿತಕೃಷ್ಣಮಾಂ
ಜಿಷ್ಠಮೆಂಬಬಣ್ಣಂಗಳಂಮಾಡಿ ನ ಣ್ಪುಗೆಯ್ದಾಗಳ್॥
ಚಂ॥ ಸುರುಚಿರ ಸದ್ಗುಣಾವಳಿಗಳಿಂಪೆಮಹೋನ್ನತಚಿತ್ರಪತ್ರಪೊ
ಳ್ಕರಮೆಸೆಯಲ್ಕೆ ತನ್ನಮನದುತ್ಸವಮುಂ ತದುಪೆರ್ಚಲೊಂದುವ| ತ್ಸರ
ಮೊಲವಿಂದೆ ನೆಯ್ದಿರದೆ ಪೆಟ್ಟಸಿನುಂಪಿಸಿ ನೈಶಭಕ್ತನೀ| ಶ್ವರನಪದಕ್ಕೆ
ವಸ್ತ್ರವರಮಾಯ್ತೆನುತಿರ್ದ ಸತೀವಹರ್ಷದಿಂ॥ ೭
ವ॥ ಅಂತೊಂದುವತ್ಸರಂ ನೆಯ್ದು ರಮ್ಯವಪ್ಪದೇವಾಂಗವಸ್ತ್ರದೊಳ್ಪಂ
ನೋಡಿ ನಿಜಸತಿವೆರಸು ನೈಶಭಕ್ತಂ ಹಾರೈಸುತ್ತತಿ ಭಕ್ತಿಮಿಗೆ ಮನಂ
ಪುಟ್ಟೆ ಶಿವಂಗೆತಕ್ಕುದೆಂದುಸಮರ್ಪಿಸಲ್ಕಾತ್ಮಜ್ಯೋತಿನಿದರ್ಶನಮಂ
ಬುದಂ ಪ್ರತಿಷ್ಠಿಸುವಾಗಳ್॥
ಕಂ॥ ಕಿರುಗೆಜ್ಜೆಗಳೊತ್ತರಧಿ| ಮಿರುಗುವಪುಲಿಪೊವಲ ಚೆಲ್ಲಣಂಭ
ಸಿತಂ ಕಣ್ಮೆರೆಯಲೊಪ್ಪಿನ ಜಡೆಗಳ್| ನೆರೆಬೋಳೆಯ ರಾಯತನ
ದಿ ಬಂದಂಗಿರಿಶಂ ೮
ವ॥ ಅಂತುಕುಟಿಲತ್ವದಿಂ ಧೂರ್ಜಟಿ ನಾಷದಂತಂ ಬೋಳೆಯರಾ
ಯತನದಿಂ ದಡಬಡಿಸುತ್ತಂ ಮನೆಯಬಾಗಿಲೆಳ್ನಿಂದಿರಲ್ನೈಶಭಕ್ತಂ
ಕಂಡಾಗಳ್॥
ಕಂ॥ ವರಸತಿವೆರಸಾನೈಶಂ| ಹರಹರಮನದಲ್ಲಿ ಬಯಸುತಿರ್ದಾ ಶಶಿ
ಶೇ| ಖರನೇಜಂಗಮರೂಪಿಂ| ಡಿರದೊಲವಿಂ ಬಂದನೆನುತಮಾನತನಾ
ದಂ॥ ೯
ವ॥ ಅಂತಾಗಳ್ನೈಶಭಕ್ತಂ ನಿಜಸತಿವೆರಸು ಪಡಕಮಳಕ್ಕೆರಗಿ ಕೈ
ಗೊಟ್ಟೊಳಯಿಂಕೆ ಕರೆದೊಯ್ದು ಭಯಭಕ್ತಿಯಿಂ ಪೀಠಮನಿಕ್ಕಿ ಕು
ಳ್ಳಿರಿಸಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮುಂಕೊಂಡು ನೀರಾಜ
ನಮನೆತ್ತಿ ... ॥

ಕಂ॥ ನರಸುರಲೋಕದೊಳಿಂತೀ। ವರವಸ್ತ್ರವಪೂರ್ವವೆನುತೆ ಸೀಳ್ದಿ
ರ್ಕ್ಕುಡಿಯಂ। ವರಜಟೆಯುಂ ನಡುವಂಸಾ। ದರದಿಂದಂಸುತ್ತೆ ಮೆಚ್ಚಿತ್ತ
ನ್ನು ನಿಯಾಗಳ್॥ ೧೦

ತಾರಮಹೀಧರನಾಥಂ। ತಾರೇಶಕಿರೀಟವೆಂಬುದಂ ಪ್ರಕಟಸುತಂ
ತಾರಮನೊಂದಂ ತೆಗೆದತಿ ಕಾರುಣ್ಯದಿ ನೈಶಭಕ್ತ ಹಸ್ತದೊಳಿತ್ತಂ॥

ವ॥ ಅಂತಾಬೋಳೆಯು ರಾಯನತಿಸಂಭ್ರಮದಿ ನೊಂದುತಾರಮಂ
ನೈಶಭಕ್ತಂಗೆ ಮನವಮಂನೋಡಲ್ಕೆಂದು ಕುಡಲ್ಕಾಗಳ್॥

ಕಂ॥ ಸತಿಯುವ ನು ತನ್ನವ ನಂ। ಮತಿಮಿಗಿಲೊಂದಾಗಿನ್ನೈಶಭಕ್ತಂ
ನಲಿದು। ಬರ್ಪತೆಮಿಗೆಮೆಚ್ಚುತ್ತಿರಲಾ। ಶಿತಿಕಂಠಂಮೆಚ್ಚಿ ರೂಪುದೋ
ರಿದನಾಗಳ್॥ ೧೨

ತರಣಿಸುಧಾಕರಹುತವಹ। ಮರುದಂಬರಭೂಜಲಾತ್ಮಕಂ ತಾನೆ
ನಿಸೀ। ಶ್ವರನಯ್ದು ಮೊಗದಿನತಿಬಂ। ಧುರತರ ದಶಭುಜದಿನೆಸೆದನಂ
ದೊಲವಿಂದಂ॥

ವ॥ ಅಂತುತಾಂಪಿಡಿವಿರ್ದ ಬೋಳೆಯರಾಯತನದವೇಷಮನುಳಿದು
ಮೆಚ್ಚಿ ನಿಜಸ್ವರೂಪಮಂತೋರಿದ ಶಿವನಚರಣಕಮಲಂಗಳ್ಗೆ ಸತಿವೆರ
ಸು ನೈಶಭಕ್ತಂ ಪೊರಳ್ದು ಪರಮಾನಂದಾಶ್ರುಗಳುಣ್ಮುತಂಪರವಶದಿಂದಿ
ರ್ಪಾಗಳ್॥

ಕಂ॥ ಪದಕೆರಗಿದದಂಪತಿಗಳ। ನೊದವಿದಕೃಪೆಯಿಂದಮೆತ್ತಿ ಕಾಳ್ಕೆ
ಸಿಸಿಮಹಾ। ಮುದದಿಂಮೆಯ್ದುಡವುತ್ತಂ। ಸದಮಳಶಿವನೋತು ನಂದಿ
ಗಂದಿಂತೆಂದಂ॥ ೧೪

ಹರಿದಂಬರನೆನಿಪೆನ್ನಂ ವರವಸ್ತ್ರಮನುಡಿಸಿದಮುರ್ದದಂ ಮಿಗಲದ
ಕಾ। ನಿರದೊಂದು ತಾರವಿಣಾಯ।ಲ್ಪಿರಿದೊಳ್ಪಂಪಡೆದರಿವರ್ಗ ದಾದೊರ
ರೆಧರೆಯೊಳ್॥ ೧೫

ವ॥ ಎಂದಾನೈಶಭಕ್ತನಂ ಸತಿಸಹಿತಂಪೊಗಳ್ದು ಕೊಂಡಾಡುತ್ತಂ ಶಿ
ವಂ ತಾಂಬರಿಸಿದ ದಿವ್ಯವಿಮಾನದೊಳ್ ಕಾರುಣ್ಯದಿಂದವರಂಕುಳ್ಳಿರಿಸಿ
ಸಿಯಾಪಿಸಿದಾಗಳ್॥

ಕಂ॥ ಸುರರಲತಾಂತಾಸಾರದೊ। ಳುರುತರಮಣಿ ಖಚಿತಪುಷ್ಪಕಂ
ದಂಪತಿಗ। ಳ್ವೆರಸಾಗಸಕ್ಕೆಸೆವಾ। ತ್ತಿರದೆಳ್ತಂದತ್ತು ರಜತಭೂ

ಧರಕ್ಕಾಗಳ್॥ ೧೬।

ವ॥ ಅಂತುಸತಿವೆರಸುಬಂದನೈಶಭಕ್ತಾನ್ವಿತಂ ಸಕಲಗಣೋಪೇತಂ ಭೂತನಾಥ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ॥ ಸತ್ಯನಿಧಿನೈಶಭಕ್ತ। ರ್ಗತ್ಯಂತಪ್ರೇಮದಿಂದೆ ಗಣಪದಮುಮನಾ। ದಿತ್ಯರ್ವೊಗಳಲ್ಕೊಟ್ಟಾ ಮೃತ್ಯುಂಜಯ ನೆಸೆವುತಿರ್ದನಾ ಸ್ಥಾಯಿಕೆಯೊಳ್॥ ೧೭

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀ ಮತ್ಪ್ರತಿ[illegible] ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ್ರದೊಳ್ನೈಶಭಕ್ತ ಮಹೇಶ್ವರ ಕಥಾವೃತ್ತಾಂತವೇಕಪಂಚಾಶ ದಾಶ್ವಾಸಂ॥

—ಶ್ರೀ—

## ಐವತ್ತೆರಡನೆಯಆಶ್ವಾಸಂ

## ಸಾಂಖ್ಯನಾರರಕಥಾವೃತ್ತಾಂತಂ

ಅಖಿಲಗಣಮುಖಿಯೆನಲ್ಕತ । ಮಖಮುಖ್ಯರ್ವೊಗಳೆ ಸಾಂಖ್ಯನಾರರ್ಗಂಷ ॥ಣ್ಮುಖನುತಗಣಪದವಿತ್ತತಿ। ಸುಖಮಯಸೋಮೇಶನೊಲ್ದು ಪಾಲಿಕೆನಮ್ಮಂ ॥೧

ಇಂದ್ರವಜ್ರವೃತ್ತಂ॥ ಪುರಾರಿಯಾವಾಸವೆನಿಪ್ಪಚೋಳೋ। ರ್ವ್ಯಾಂತದೊಳ್ಪೇರ್ಮೆಯನಾಂತು ಭಕ್ತೋ । ತ್ಕರಾ ಲಯಾನೀಕದಚೆಲ್ವಿನಿಂದಂ ।ನಿರಂತರಾರೂರೆಸೆವುತ್ತಮಿರ್ಕುಂ ।೨॥

ಕಂ। ಪುರದಪೊರವೊಳಪೊಳತಿಬಂ । ಧುರನಂದನ ಮಿಕ್ಷು ವಾಟಕೇದಾರಂಸ ॥ತ್ಸರಸಿ ತಟಾಕಂದೀರ್ಘಿಕೆ । ಪಿರಿದೊತ್ತರದಿಂದೆ ಪೆಂಪುವಡೆದೆಸೆದಿರ್ಕುಂ ।೩।

ಆವೆಡೆಯಂ ನೋಳ್ಪೊಡೆಲಿಂ ಗಾವಾಸಂಗಳ ಸುವರ್ಣ ಕಳಶಪ್ರಭೆಗ

ಳ್ |ತೀವಿರೆತತ್ಪುರದೊಳ್ದಿವ|ವೇವರ್ತಿಸುತಿರ್ಪುದದರೊಳದನೇ ಪೊಗಳ್ವೆಂ| ||೪||

ನಿರುತದಿನಿಂತೆಸೆವಾತ|ತ್ಪುರದೊಳ್ಮವಭಕ್ತ ಜನದಕರುಗಾವುತ್ತೀ| ಶ್ವರಪದಕಿಂಕರ ನೆನಿಸು|ತ್ತಿರುತಿರ್ಪಂ ಸಾಂಖ್ಯನಾರನೆಂಬಾಭಕ್ತಂ

ಪುರವೆಳಗರುಗಳ ನೊಯ್ದು | ದರದಿಂದಂ ಕಾಯ್ದುಗಳಿಸಿದೊಡವೆ| ಯುನದನೀ | ಶ್ವರಭಕ್ತರ್ಗೀವುತ್ತೀ| ಪರಿಯಿಂದಂ ಸಾಂಖ್ಯನಾರನೊಲ್ದಿರುತಿರ್ಪಂ| ೬

ರಸೆಯೊಳ್ಮನ್ನಾವೇಪೂ ಜಿಸಲಿಲ್ಲೀಪರಿಯೊಳೆಂಬ ಪೊಸ ನಿಯಮವನಾ| ಲಸದಮಳಭಕ್ತಿಯಿಂದ| ರ್ಚಿಸುತಿರ್ಪಂ ಸಾಂಖ್ಯನಾರನಗಜಾಪತಿಯಂ| ೭

ಉದಯದೊಳೆರ್ದ್ದ ರದೆತಟಾ | ಕದಜಳದೊಳ್ಮಿಂದುವಿುಸುಪರುದ್ರಾಕ್ಷೆಗಳಂ |ಸದಮಳಭಸಿತಮನಾಂತತಿ,ಮುದದಿಂದಾ ಸಾಂಖ್ಯನಾರನಂತೆಯೆಗೆಯ್ದಂ ೮

ಅತಿಭಕ್ತಿಯ ಸದ್ಭಾವೋ |ನ್ನತಿಯಂಸಲ್ಲಲಿತಮಪ್ಪ ಕಲ್ಲಿಂದಂಭೂ | ನುತಲಿಂಗಮನೋತರ್ಚಿಸಿ,ಮತಿಮಿಕ್ಕಂಸಾಂಖ್ಯನಾರನಾನತನಾದಂ

ವ|| ಅಂತಾನತನಾಗಿ ಪರಮಾನಂದಾಶ್ರುವಾರಿಗಳ್ತುಳ್ಕಾಡೆ ಭಕ್ತಿರಸದೊಳೋಲಾಡಿ ಕೊಂಡಾಡಿ ತಲ್ಲಿಂಗಮಂ ಬಿಡ ಲಾರದೆತಾ ನುಬ್ಬೆಗದಿಂ ಸಾಂಖ್ಯನಾರಂ ಬೀಳ್ಕೊಂಡು ತನ್ನಮನೆಗೇ ಲ್ತಂದು ಮಾಹೇಶ್ವರರ್ಗೆರಸುಲಿಂಗಪ್ರಸಾದಮಂ ಕೊಂಡೀಪರಿ ಯನೇಮದಿಂ ದಿರು ತಿರ್ದನಂತು ಮಲ್ಲದೆಯುಂ|

ಕಂ|| ದಿನದಿನಗೊಳರ್ಚಿಸಿದಕ| ಲ್ಲಿನಿತುಂನಿರ್ಮಾಲ್ಯಮೆಂದು ಬೀಸಾಡುತನೆ| ಟ್ಟನೆಪೊಸ ಕಲ್ಲಂತಂದ, ರ್ಚನೆಗಳನಾ ಸಾಂಖ್ಯನಾರ ನೊಲವಿಂಮಾಳ್ಪಂ||

ಚಳಿಯೆನ್ನದೆಬಿಸಿಲೆನ್ನದೆ| ಮಳೆಯೆನ್ನದೆ ಸರಿದುಪೋಗಿ ಪೊಸತೆನಿಸುವಕ ಲ್ಗಳನರಸಿತಂದುಸಲೆಸದ|ಮಳಲಿಂಗಮನರ್ಚಿಸುತ ಮಿರ್ಪಂ ಭಕ್ತಂ|| ೧೧

ಈತೆರದಿಪಲವುದಿವಸಂ| ಭೂತೇಶನನರ್ಚಿಪಲ್ಲಿಕಲ್ಗಳ್ ಚೋಳೋರ್ವೀತಳಪೊಳಗಿಲ್ಲೆನಿಸುತೆ| ಪ್ರೀತಿಯುನಿಯಮಮನೆ ಬಿಡದೆನಡೆಯಿಸು

ತಿರ್ದ೯ಂ|| ೧೨
ವ|| ಅಂತೀಪರಿಯೊಳ್ಪೃಥ್ಭಕ್ತಿ ಯುಕ್ತನಪ್ಪ ಸಾಂಖ್ಯನಾರಂ ಮನೋ ಭಾವದಿಂ ತಲ್ಲಿಂಗಮನರ್ಚಿಸುತ್ತಿರ್ದ ನಂತುಮಲ್ಲದೆಯುಂ||
ಉ| ಒಂದುದಿನಂ ಕರಂಪಸಿದುಣಲ್ಕೆನುತಂ ಸಿ...ಮಂದಿರಕ್ಕೆತಾಂ| ಬಂದಗಲಲ್ಲಿ ಕಲ್ಲಿರುತೆ ಬೆಟ್ಟ ಪರ್ವೊ...ಕ್ಕೆ ನೆದೆದ್ದು ಸುಯ್ದುದೇ ನಿಂದಕ ಟೇಪಾಸಂದೊರಕಿತೀಶ್ವರನರ್ಚನೆ ಯಿಲ್ಲದೆಂದು ಕೋ| ಪಿಂದಮೆಸಾಂ ಖ್ಯನಾರ ನಿರದೆಯ್ದಿದ ನಶ್ಮಲತಾಂತ ಕಳ್ಕರಿಂ|| ೧೪
ವ| ಅಂತುನಾಲ್ದೆಸೆಗೆ ಪರಿದುಪರಿದು ಕೋಪ...ಳಾಕ್ಮ ಮನರಸುತ್ತಿ ರ್ಪಗಳ್|
ಕಂ| ಹರನಾತನನುನದನುವಂ| ಪರಿಕಿಪೊಡಾದೇಶದೊಳಗೆಕಿರು ಕ ಲ್ಲುಗಳುಂ| ದೊರಕದತೆರನಂಪಾಡ, ಲ್ಪರಿಪರಿದೀಕ್ಷಿಸುತಮಿರ್ದನದನೇ ವೊಗಂಕ್ವೆ' ೧೫
ಪತ್ತ್ಕೆ ಡು ಸೋಜನನಮನರ| ಸುತ್ತ್ಕೆಲ್ಕಂತಲ್ಲಿ ಕಲ್ಲುಕಾಣದೆ ತನಗಿ| ರ್ಪತ್ತುಪವಾಸಮದಾಗಲ್| ಚಿತ್ತದೊಳಂದಳ್ಕದ ರಸುತಿರ್ದ೦ಭಕ್ತಂ
ಮ| ಘನಲಿಂಗಾರ್ಚನೆಯಿಲ್ಲದೊರ್ಕುಡುತೆ ನೀರಂಕೊಳ್ಳದೀಪಾಳ್ಕೆ ಯಿಂ| ತನಗಿರ್ಪತ್ತುಪವಾಸ ಮಾಗಲೊಲವಿಂ ನೋಡುತ್ತೆಬರ್ಪಲ್ಲಿಲೋ ಚನಕತ್ಯದ್ಭುತ ಮಾವುತಿರ್ಪ ಪೊಸಪೆರ್ಗಲೊಂದು ಸಿಕ್ಕಲ್ಕೆಭೋಂ ಕೆ ನೆ ಪೊತ್ತುಬರ್ಪತೆ ಸಾಂಖ್ಯನಾರ ನಿರದೇಲ್ತಂದಂ ಮಹೋತ್ಸಾಹದಿಂ||
ವ|| ಅಂತುಸಾಂಖ್ಯನಾರುಂಬಂದು ಶಿವಭವನಮಂ ಪೊಕ್ಕುಬರ್ಪಿಕೊ ಪ್ಪುತ್ತಾನಂದ ಮಯನಾಗಿಭಯಭಕ್ತಿಯಿಂದಾಗಳಿಂತೆಂದಂ||
ಕಂ| ಗಿರಿವರತನಯಾಪತಿಯುಮ| ಧರಿಯಿಪುದಿಪತ್ತು ದಿನದನಿಸುಮ ಪಕಲ್ಲಂ| ಭರದಿನೆನುತೆ ಸ್ತಿಪಾಯ್ಕುಲ್| ಕರಪಿಂಪಿಡಿಜೋತುರಾಪುದೋ ಶಿವನಾಗಳ್|
ಇಂದ್ರವಜ್ರವೃತ್ತಂ|| ಗಂಗಾಂಬುಚಂದ್ರಂ ವಿಷಮಾಕ್ಷಿ... ಗಳ್ಪಣೀಂದ್ರಂ ದಶಬಾಹುಗಳ್ಮಾ| ತಂಗಾಜಿನ ಭ... ಕಂಗೊಪ್ಪೆಗೌರೀಶ ನೊಪ್ಪ ತಿರ್ದ೯ಂ|
ವ| ಅಂತುಸದಾಶಿವಂ ನಿಜಮೂರ್ತಿಯೆಂ ತೋರ ...ಸಾಂಖ್ಯನಾರಂ ಕಂಡು ... ಗೆ ...ಮಯ್ಮರೆದು ...ನಾ...ಳ್ಪೊಳ್ತನಿಶೆ

ಮಿಗೆಸದ್ಭಾವದಿಂದೀಕ್ಷಿಸುತಿರ್ಪಾಗಳ್॥

ಕಂ॥ ಮನವೊಲ್ದೀಶ್ವರನಾಸಾಂ।ಖ್ಯನಾರರಂಕರುಣದಿಂದೆಪಿಡಿ ದೆತ್ತಿಕರಂ। ತನುದಪವಿಬೋಳಳಯಿಸಿ ಬಳ। ಕನುರಾಗದಿನಪ್ರಿಜಾತೆ ಗಂದಿಂತೆಂದಂ॥ ೧೯।

ಘನನಿಷ್ಠೆಯಿಲ್ಲದಲರ। ರ್ಚನೆಯೊಲರ್ಗಳ್ಕಲ್ಲುನಿಷ್ಠೆಯಿಂ ಪೂಜಿಸಿದೀ। ತನಕಲ್ಲೇರಿಂ ಮಿಗಿಲೆನ। ಗೆನುತಿರ್ದಂ ಗಿರಿಜೆಯೊಡನೆ ಗಿರಿಜಾನಾಥಂ॥

ವ॥ ಎಂದಾಸಾಂಖ್ಯನಾರರ ಮಹಾಭಕ್ತ್ಯುದ್ರೇಕದ ನಿಷ್ಠೆಯುಂಖಂಡೇಂದು ಶೇಖರಂಕೊಂಡಾಡುತ್ತು ಮಿರ್ಪಾಗಳ್॥

ಕಂ॥ ಇಳೆಗಲರಮಳೆಗಳಲ್ದುಗೆ। ಮಿಳಿರ್ವವೃಷಭ್ವಜ ಸಮೇತಮಣಿಪುಷ್ಪಕವಮಾ। ಗಳೆಬರೆಕುಳ್ಳಿರಿಸಿವನೊಳ್। ಗೊಲಪಿಂದಂಸಾಂಖ್ಯನಾರರಂ ಪ್ರಮಥೇಶಂ॥ ೨೧

ವ॥ ಅಂತಾಪುಷ್ಪಕದೊಳ್ಸಾಂಖ್ಯನಾರರಂ ಕುಳ್ಳಿರಿಸಿಭಕ್ತವತ್ಸಲನಪ್ಪ ಶಿವಂನಿಬಾಮಿಸಲ್ಕಾಗಳ್॥

ಕಂ॥ ಸುರದುಂದುಭಿಗಳ್ಮೊಳಗು। ತ್ತಿರಲಾಕಾಶಮನೆಬೆಳಗುತಂ ಶಿವಭಕ್ತಂ। ಬೆರಸಾಮಣಿಮಯುಪುಷ್ಪಕ। ವಿರದೇಳ್ತಂದುತ್ತು ರಜತಗಿರಿಗುಸ್ಸವದಿಂ॥ ೨೨

ವ॥ ಅಂತೇಳ್ತಂದಾಸಾಂಖ್ಯನಾರವಮಾಹೇಶ್ವರಂ ಬೆರಸುಗಿರಿಶಂತತ್ಕೈಲಾಸ ಸಭಾಮಂಟಪದೊಳೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ನಿಷ್ಠೆಬಿಡದೋತುಕಲ್ಲಿಂ ದಿಟ್ಟೊಲಿಸಿದ ಸಾಂಖ್ಯನಾರಮಾಹೇಶಂಗಂ। ಪಟ್ಟದಗಣಪ ದಮಂಸಲೆ।ಕೊಟ್ಟೊಲವಿ ಂದೀಶನೆಸೆದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ತುಲಿಗೆರೆಯ ಪುರಾಧಿಪ ಶ್ರೀಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳ್ಸಾಂಖ್ಯನಾರ ಮಾಹೇಶ್ವರಕಥಾವೃತ್ತಾಂತಂದ್ವಿಪಂಚಾಶದಾಶ್ವಾಸಂ

—ಶ್ರೀ—

## ಐವತ್ತು ಮೂರನೆಯ ಆಶ್ವಾಸಂ
## ಚೆರುಪುಲಿಯಾಂಡರ ಕಥಾವೃತ್ತಾಂತಂ

ಬಲರಿಪುಪೊಗಳುತ್ತಿರೆ ಚೆರು ಪುಲಿಯಾಂಡಂಗಮರವಿನುತಗಣಪದಮಂ ಕೊ|ಟ್ಟೊಲವಿಂದಂ ಮೆರೆದಘಹರ |ಪುಲಿಗೆರೆಸೋವೋಶನೊಲ್ದು ಪಾರಿಕನಮ್ಮಂ ||೧||

ನೆರೆಮೆರೆವ ಚೋಳಧರೆಯೊ | ಳ್ಮರುಗುವ ಕಳವೆಗಳ ಗರ್ದೆವನವಲ ದೋರ್ಗಂಟಂ|| ಕರೆಗಳೆನಿಪ್ಪ ಪರೆಸವಿಂ| ಚೆರಪುತ್ತೂರುಂ ಕರಂವಿರಾಜಿಸುತಿರ್ಕುಂ|| ೨

ಉತ್ತಮಭಕ್ತರ ಮನೆಗಳ| ವೊತ್ತದಿ ಪೊಂಗಳಸದ ಭವಭವನ ಪ್ರಸರಂ|| ಬಿತ್ತರದಿ ತುಂಬಿದಾ ಚೆರು| ಪುತ್ತೂರದು ಪೆಂಪುವೆತ್ತು ಕರಮೆಸವಿರ್ಕುಂ|| ೩||

ವ|| ಅಂತಾ ಚೆರುಪುತ್ತೂರೊಳ್ಚೆರು ಪುಲಿಯಾಂಡಂ ಸದ್ಗುರು ಕಾರುಣ್ಯದಿಂದಂತನ ಗತಿಭಕ್ತಿಯಂಕುರಿಸಿ (ಜಂ) ಜನನಂ ನಾಸ್ತಿ (ಗ) ಗಮನಂ ನಾಸ್ತಿ (ಮ) ಮರಣಂ ನಾಸ್ತಿ ಯೆನಿಪ್ಪ ಶಿವಮೂರ್ತಿಗಳಪ್ಪ ಜಂಗಮಂಗಳ ಮೇಲಿನ ನೇಹಮತಿಶಯಂ ಪೆರ್ಚೆ ಪರಮೋತ್ಸವದಿಂದಿರುತಿರ್ದನಂತುಮಲ್ಲದೆಯುಂ|

ಕಂ|| ಚೆರಪುತ್ತೂರೊಳ್ಭಕ್ತಿಯ| ನೆರವಣಿಗೆಯ ನಿಳೆಗೆ ತೋರುತಂ ಜಂಗಮಮಂ| ಕರಗೊರಲನೆಂದು ಭಾವಿಸಿ | ಚೆರುಪುಲಿಯಾಂಡಾಖ್ಯಭಕ್ತನೆಸೆವುತ್ತಿರ್ದಂ| ||೪||

ವರವಸ್ತ್ರಂ ಸತ್ಕನಕಾ| ಭರಣಂ ರುದ್ರಾಕ್ಷೆ ನವಕಮಂಡಲು ಕೊಡೆ ಬಂ|ಧುರಪಾದುಕೆಯೆಂಬವನೀಶ್ವರಭಕ್ತಂಗೆ ನೀವುತಿರ್ದನಾವೇಳೆಯುಂ||

ವ|| ಅಂತಾ ಚೆರುಪುಲಿಯಾಂಡಂ ನಿಚ್ಚಂ ನಿಚ್ಚಂ ಶಿವಲಿಂಗಪೂಜೆಯಂ ಮಾಡಿ ಬಂದ ಲಿಂಗವಂತ ಜಂಗಮಂಗಳ ಪಾದತೀರ್ಥಮಂ ಕೊಂಡೊಳ್ಪದನುಂಡೀ ಪರಿಯಿಂ ಪಲವು ವತ್ಸರವಿರುತ್ತಿರ್ದನಂತುಮಲ್ಲದೆಯುಂ|

ಕಂ| ಘನಭಕ್ತರ ಪಾದಜಳಂ| ತನಗಧಿಕ ಸನ್ಮಾನಪಾನಮುವರೊಳ್ಪ ದೆಭೋ|ಜನವಾಗಿ ಜಂಗಮ ವೆಜೀ|ವನಮೆನಿಸುತ್ತಿರ್ದನೋತು ಚೆರುಪುಲಿಯಾಂಡಂ| ೬

ವ|| ಅಂತೀ ಪರಿಯೊಳ್ಮಹಾಜಂಗಮ ಪ್ರಾಣಲಿಂಗಿಯಾಗಿ ಬಾಳುತ್ತಿರ್ಪ

ಚೆರುಪುಲಿಯಾಂಡರ ಮಹಾಭಕ್ತಿಯನುಪಮಂ ನೋಡಲ್ಕೆಂದು ವಿನೋದಶೀಲನಪ್ಪ ಸದಾಶಿವನಾ ಚೆರುಪುತ್ತೂರಿಂಗೆ ಶಿವಭಕ್ತರಾ ರುಂಬಾರದಂತೆ ಮಾಪರಿಭಾವಿಸುತ್ತಿರ್ದನ್ನೆಗಂ॥

ಚಂ। ಭರದಿ ಚಕೋರಿ ಗಿರಿಜೊನ್ನದೊದವಂ ಕಮಳಂ ಕರವಿತೇಜದೇಳ್ಗೆಯಂ
ಪರಭೃತಮುದ್ಧ ಚೈತ್ರರುತುವಂ ಜಡವಂ ನಿಧಿಯಂ ಪದಾಳಿಭಾ। ಗ್ಯತ
ಕುಸುಮಂಗಳಂ ಬಯಸುವಂತಿರಲುತ್ತಮಜಂಗಮಂಗಳಂ। ಪಿರಿದರಸು
ತ್ತಿ ಬಾರದಿರೆ ಬಾಯ್ಬಿಡುತಿರ್ದನುಮೇಶಕಿಂಕರಂ ೭

ಕಂ। ಅವಗುಣವನೇನನೆನ್ನೊಳ್। ಶಿವಭಕ್ತರ್ಕಂಡರಕಟ ಬಾರರೆನು
ತ್ತುತ್ಸವವಳಿದಳಲುತ್ತಾ ಹಾ। ರವನುರೆ ತೊರೆದಿರ್ದನಮುಮ ಚೆರುಪುಲಿ
ಯಾಂಡಂ ೮

ಮಾರಾರಿಯ ಜಂಗಮ ಪುತತಿ। ಬಾರದಿರಲ್ಕಿತ್ತ ಪತ್ತೆಂಟುಮುಪವಾಸದಿಗೌ।
ರೀರಮಣಧ್ಯಾನಮನಾಂ। ತೋರಂತಿರುತಿರ್ದನಮುಮ ಚೆರುಪುಲಿಯಾಂ
ಡಂ। ೯।

ವ॥ ಅಂತೀಪರಿಯೊಳಾ ಚೆರುಪುಲಿಯಾಂಡಂ ನಿಜಪ್ರಾಣಮಪ್ಪ ಲಿಂಗಜಂಗಮಂಗಳ್ಬಾರದಿರೆ ಮೂವತ್ತೆಂಟುಪವಾಸಮಾಗಿ ತನ್ನಾತ್ಮನಂ ನಿವೇದಿಸುವೆನೆಂದು ಬಗೆವ ಸಮಯದೊಳ್ಪಂಡಂತರಿಕ್ಷದೊಳ್ನಿಂದು ನೋಡುತ ಶಿವಂಗೆ ಪಾರ್ವತಿಯಿಂತೆಂದಳ್।

ಕಂ। ಭಾವಿಪ್ರೊಡೀ ಭಕ್ತಂ ತ। ಜ್ಜೀವಮನೊಪ್ಪಿಸಿದಬಳಿಕ ನೀನೊಲಿ
ದುಪೆಕೇಳ್। ನ್ಯಾವನ್ನ ಒರಂ ಸರಸವೆ। ದೇವಯೆನುತ್ತೋತು ಗಿರಿಜೆನುಡಿ
ದುಲ್ಕಾಗಳ್॥ ೧೦

ವ॥ ಅಂತು ಗಿರಿಜೆ ನುಡಿಯಲ್ಸದಾಶಿವಂ ಕೇಳ್ದು ತದ್ಭಕ್ತನಮೇಲೆ ಕರುಣಂ ಮಾಡಿಪೊರವಟ್ಟಾಗಳ್॥

ಕಂ॥ ಪುಲಿದೊವಲುಡೆ ಭಸಿತಂ ಕುಂ। ಡಲಮುರುರುದ್ರಾಕ್ಷಲಾಕು
ಳಂ ಕೆಂಜಡೆಗಳ್। ಸಲೆಮೆರೆಯಲೀಶನಾಗ। ಳ್ನಲವಿಂ ಜಂಗಮಾಕೃತಿ
ಯೊಳೇಳ್ತಂದಂ॥ ೧೧

ವ॥ ಅಂತು ಜಂಗಮಾಕೃತಿಯೊಳೇಳ್ತಂದಾ ಸದಾಶಿವನಂ ಚೆರುಪುಲಿಯಾಂಡಂ ಕಂಡು ಜೀವಂ ಬಂದಂತಿದಿರೆದ್ದು ಸಾಷ್ಟಾಂಗವೆರಗಿ ಪೊಡಮಟ್ಟವರ್ಕೈಗೆ [illegible] ಕುಳ್ಳಿರಿಸಿದ

ತ್ತಮಾಗಳ್॥

ಕಂ॥ ಚರಣಪ್ರಕ್ಷಾಳಂಗೆ। ಯ್ದಿರದೊಲವಿಂಭಕ್ತಿಯಿಂದೆಪಾಪೋ
ದಕಮಂ।ಧರಿಯಿಸಿಸುರುಚಿರಕುಸುಮೋತ್ಕರವಿಂದರ್ಚಿಸಿದನಂದುಚಿ
ರುಪುಲಿಯಾಂಡಂ॥ ೧೨।

ವ॥ ಅಂತರ್ಚಿಸಿದಚಿರುಪುಲಿಯಾಂಡಗಭಕ್ತಿನಿಷ್ಠೆಗೆಮೆಚ್ಚಿ॥

ಕಂ॥ ಅನುಪಮಶಿವನಂತಾಗ। ಳ್ಳನಕೃಪೆಯಿಂ ತಚ್ಛಿವೈಕ್ಯನಾಂತಥ
ಲಕ್ಷ್ಮಂ। ದನುನಯದಿಂದಂತಾಗಳ್। ಮುನಿನಿಕರಂ ಪೊಗಳೆತೋರಿದಂ
ನಿಜರೂಪಂ॥ ೧೩

ಕೆಂಜಡೆಬಾಂದೊರೆಯಿಂದೆಥ। ನಂಜಯುನಹಿಪಂ ವಿಷಂವಿಭೂತಿಕ
ಪಾಲಂ। ಕುಂಜರಚರ್ಮಂಶೂಲಂ। ರಂಜಿಸಲಭವಂ ಸ್ವರೂಪದಿಂದೆ
ಸೆದಿರ್ದಂ॥ ೧೪

ವ॥ ಅಂತೆಸೆದಿರ್ದಗಿರಿಜೇಶನ ದಿವ್ಯರೂಪಮಂಕಂಡು ಭಯಚಕಿತ
ಹೃದಯನಾಗಿ ಪದಕಮಲದೊಳ್ಬೀಳ್ವ ಗಡೆಮುಪರವಶೀಭೂತನಾಗಿರ್ಪಚಿ
ರುಪುಲಿಯಾಂಡರಂ ಶಿವಂಪಿಡಿದೆತ್ತಿ ಕುಳ್ಳಿರಿಸಿ ಕರುಣದಿಂಬೋಳೈಸು
ತ್ತಾಗಳ್ ೧೫

ಕಂ॥ ಕರೆಗೊರಲಂ ಕೃಪೆಯಿಂದಂ।ಚಿರುಪುಲಿಯಾಂಡನ ಮಹೋಗ್ರ
ಭಕ್ತಿಗೆಮನಸೊಳ್। ನೆರೆಮೆಚ್ಚಿ ಪಂಚಮುಖದಿಂ। ನೆರವಣಿಗೆಯಭಲದ
ಬಲ್ಪನುಮೆಗಂದುಸಿರ್ದಂ॥

ಜಂಗಮವೆತನ್ನ ಭಾಗದ।ಲಿಂಗವೆನುತ್ತಿರ್ದಫಲಕೆಬಾರದಿರಲ್ಕೆಂ।ನಂ
ಗವನರ್ಪಿಪೆನೆನಲೀ ತಂಗಾಪದೊರೆ ಯೆಂದನುಮೆಗೆ ವೃಷಭಪತಾಕಂ
ವ॥ಎಂದಾಭಕ್ತಿಯಫಲಮಂಕೊಂಡಾಡುತ್ತಂ ತಾಂಬರಿಸಿದ ದಿವ್ಯಪುಷ್ಪ
ಕದೊಳ್ ಚಿರುಪುಲಿಯಾಂಡನಂ ಕುಳ್ಳಿರಿಸಿಗಿರಿಶಂನಿಯಾಮಿಸಲಾಗಳ್

ಕಂ॥ ಸುಲಲಿತಪುಷ್ಪಕಮದುಚಿರುಪುಲಿಯಾಂಡಂ ಬೆರಸುಗಗನಮಂ
ಬೆಳಗುತ್ತಂ। ಕಳಧೌತಾಚಳದರಮನೆ। ಗೊಲವಿಂದಂ ಬಂದುದಮರ
ದುಂದುಭಿರವದಿಂ॥

ವ॥ ಅಂತಾನಂದದಿಂಬಂದ ಚಿರುಪುಲಿಯಾಂಡಾನ್ವಿತಂಖಂಡೇಂದುಶೇ
ಖರಂ ಪ್ರಮಥಗಣಂಗಳ್ಪೆರಸೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಅನುನಯದಿಂ ಚಿರುಪುಲಿಯಾಂ। ಡನಭಕ್ತಿಯ ಫಲಕೆ ಮೆಚ್ಚಿಗ

ಣಪದಮಂಕೊ| ಟ್ಟನವಷ್ಪನನಘನದ್ವಯ|ನನುಪಮಶಿವನೆಸೆವುತಿರ್ದ
ನಾಸ್ಥಾಯಿಕೆಯೊಳ್|| ೧೮

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ್ರದೊಳ್ಪಿರುಪುಲಿಯಾಂಡಭಕ್ತ ಮಾಹೇಶ್ವರ ಕಥಾವೃತ್ತಾಂತಂತ್ರಿಪಂಚಾಶದಾಶ್ವಾಸಂ||

—ಶ್ರೀ—

## ಐವತ್ತನಾಲ್ಕನೆಯಆಶ್ವಾಸಂ

### ಅಚ್ಯುತರಕಥಾವೃತ್ತಾಂತಂ

ಆಶ್ಚರ್ಯದಸದ್ಭಕ್ತಿಯ| ನಿಶ್ಚಯಮುಳ್ಳಚ್ಯುತರ್ಗೆ ಗಣಪದವಿತ್ತಂ|ಭ
ಕ್ತಿರಪತಾಕಪಿತನುತ ನಿಶ್ಚಳಸೋಮೇಶನೊಲ್ದು ಪಾಲಿಕೆನಮ್ಮಂ||೧

ಪರನನೆಲೆವನೆಯೆನಿಪ್ಪಾ| ವರಚೋಳಾವನಿ ಯೊಳುದ್ಘಕೇದಾರದಿ
ಸೀ| ಶ್ವರಗೃಹಸಂತತಿಯಿಂದಂ| ತಿರುಚೆನ್ನಾಡೆಂಬ ಸತ್ಪುರಂರಂಜಿಸು
ಗುಂ|| ೨

ಪರಮೈಶ್ವರ್ಯದಿನೆಸೆದಾ| ಪುರದೊಳ್ಶಿವಭಕ್ತತತಿಗೆ ಬೇಡಿತನೀ
ವುತ್ತುರು ತತ್ಕೀರ್ತಿಯನಾಂತಾ| ಪರದಿಂದಚ್ಯುತಸಮಾಖ್ಯಭಕ್ತಂ
ಮೆರೆವಂ|| ೩

ಸುರಮಣಿಯುಂ ಸುರತರುವುಂ| ಪರಿಶ್ರಮಂಗಳನುಮೆರೆಯ ದೀವೆನೆ
ನುತ್ತಂ| ಹರಭಕ್ತರೆರೆವಧನಮಂ| ಪಿರಿದೀವುತ್ತಿರ್ಪ ನಚ್ಯುತಾಖ್ಯಯ
ಭಕ್ತಂ|| ೪

ಚೌ|| ಘನಬಳವಂತನೆಂದೆನಿಸುವಚ್ಯುತನಾಪುರದೊಳ್ಕಡಂಗಿಜಾ|
ಜಿನಮುಖದಿಂದನೇಕಧನಮಂ ಬಿಡದಾರ್ಜಿಸಿ ಲಿಂಗಜಂಗಮ |ಕ್ಕನವ
ರತಂ ಸಮರ್ಪಿಸುತ ವಿರ್ಪ ರಿದೆಂತೆನೆನೇಮವಾಗಿನೆ| ಟ್ಟನೆಶಿವಭಕ್ತ

ಕೊಳ್ಪ್ರಿಯದೆ ಕೂಡಿರುತಿರ್ಪನುದಾರವೃತ್ತಿಯೊಳ್‌| ೬

ವ|| ಅಂತಾಪುರದೊಳಂತೀನಿಯಮಮಂ ಪಿಡಿದುಪಲವುಕಾಲ ವಿರುತ್ತೊಂದುದಿವಸದೊಳಚ್ಯುತ ಮಾಹೇಶ್ವರಂ ಬಿಸದದಿಂ ದ್ಯೂತಶಾಲೆಯೊಳ್ಪೊಕ್ಕು ನೋಳ್ಪಾಗಳ್‌||

ಚಂ|| ಕುರುಧರಣೀಶನುಗ್ರ ಸಮರಾಂತ್ಯದ ಪೊಲ್ಕಿರೆಕರ್ಣಹೀನರುಂ| ಸಿರಿಪಿರಸಾರ್ದಪಾಂಡವರ ಪೋಲ್ಪದಪಿಲ್ಲ ದರಾಂಮಹೇಶನಂ|ಸ್ಮರಿಯಿಸದಿರ್ಪ ಪೋಲ್‌ಹೃದಯಶೂನ್ಯರುಮುನ್ನತಮಾನ್ಯರುರ್ಬಿಯಂತಿರೆ ಕರಮಿಲ್ಲದರ್ನೆರೆದು ಜೂಜಿನಶಾಲೆಯೊಳರ್ದುದಳ್ಕರಿಂ|| ೬

ವ|| ಅಂತೆಸೆವಜೂಜುಗಾರರಮಧ್ಯಪ್ರದೇಶದೊಳ್ಕುಳ್ಳಿರ್ದರವಣೆಯುಳ್ಳ ಜೂಜುಗಾರರೊಳ್ಕೂಡಿ ಯಿಕ್ಕಲ್‌ಜೂಜಿನ ತವದಾಯಂಪರಪಿದಾಗಳ್‌

ಚಂ|| ಪರವಕಪರ್ದವಂದಿಭಗಣಂಗಳ ಪೋಲ್ತೊಪ್ಪಿರಳುತ್ತಿರಲ್ಕೆಶಂ|ಕರಶರಣಾಬ್ಧಿಯಂಬಿಡದೆಪೆರ್ಚಿಸುತಂ ಜಸಮೆಂಬಜೋನ್ನಮಂಪಸಪುತೆ ಪೆಂಪುವೆತ್ತು ಪರಿಪೂರ್ಣಸುಧಾಕರನಂ ತಿರಚ್ಯುತ| ರ್ಪಿರಿದೆಸೆವುತ್ತೆಜೂಜನೊಸೆದಾಡುತ ಮಿರ್ದನುದಗ್ರವೃತ್ತಿಯೊಳ್‌|| ೭

ಕಂ|| ತಿಗಳಿಳಜಾಗರವೆಂಬ ಚಟ್ಟಗಳಂ ಪಿಡಿದೆರ್ದು ಜೂಜುಗಾರರನನಿತಂ| ಸೊಗಯಿಸುವನಂದಿಯಟ್ಟಂ| ಮಿಗೆಗೆಲ್ದಬ್ಬರಿಸುತಿರ್ದ ನಚ್ಯುತನಾಗಳ್‌|| ೮

ಒಂಪೇಮುಟ್ಟಿಯೊಳಾಡ ವ| ಮಂದಿಯನುರೆಗೆಲ್ದು ತಂದವಿತ್ತಮನನಿತಂ| ಬಂದಶರಣರ್ಗೆ ಕುಡುತಾ| ನಂದದಿನಚ್ಯುತ ಸಮಾಖ್ಯನಿಪ್ಪಂ ಜಸದೊಳ್‌|| ೯

ವ|| ಅಂತೀಪರಿಯೊಳ್ಜೂಜಿನೊಳ್ಗೆಲ್ದಾ ಧನಮನನಿತಂಶಿವ ಭಕ್ತರ್ಗೀವುತ್ತಂ| ಪರಮಸುಖದಿಂದಚ್ಯುತ ಮಾಹೇಶ್ವರನಿರುತಿರ್ದ ನಂತುಮಲ್ಲದೆಯುಂ|

ಕಂ|| ಒಂದುದಿನಮಚ್ಯುತಂಸಾ| ನಂದಂಮಿಗೆಬಂದು ದ್ಯೂತಶಾಲೆಯೊಳಿರ್ಪಾ| ಮಂದಿಯೊಡನತುಳಸಂಭ್ರಮದಿಂದಂ ಜೂಜಿನವಿನೋದದಿಂದಿರಲಾಗಳ್‌|

ಚಂ|| ಪರಮಣಿಭೂಷಣಾವಳಿಗಳಂ ಸೆರೆತೊಟ್ಟುದು ಕೂಲಮುಟ್ಟವಿಸ್ತರಿತವಿಭೂತಿಯಿಟ್ಟುವೆರವುತ್ತೆ ಮಹಾವ್ಯವಹಾರಿಯೊಬ್ಬನಾದ

ಕದೊಳೆಜಾ ಜನರ್ಥಿವಿುಗಲಾಡಲೆನುತ್ತ ವೆಬಂದನೆಂಬವೊಲ್| ಪರಮ
ಮಹೇಶನಚ್ಯುತನ ಜೂಜಿನಶಾಲೆಗೆ ಬಂದನಳ್ಕರಿಂ|

ವ| ಅಂತುಜಟಾಸ್ಥಿ ಮಾಲಾಭರಣಮಂ ಬೈತಿಟ್ಟುಮರ್ತ್ಯವೇಷ ದಿಂ
ಬಂದೀಶ್ವರಂಗಚ್ಯುತಂ ಭಕ್ತಿಭಾವದಿಂಪೊಡಮಟ್ಟುಕೈಗಳಂಮುಗಿದು
ಬಿಜಯಂಗೆಯ್ವುದೆಂದು ಕರೆದುಕುಳ್ಳಿರಿಸಿದಾಗಳ್|

ಕಂ| ಎಲೆಭಕ್ತ ನಿನ್ನಜೂಜಿನ| ಗೆಲದೆಸವಂಕೇಳ್ದು ದೂರ ದಿಂದಂಬಂ
ದೆಂ| ಚಲದಿಂ ಪಾಂನಿನ್ನಂಭೂ| ತಳಕರಿಯಲ್ಗೆಲ್ವೆ ನೆಂದುಪಶುಪತಿನುಡಿ
ದಂ| ೧೨

ವ| ಎಂದುನುಡಿದ ವಿನೋದೈಕಶೀಲನ ಪ್ರ ಕುಟಲವೇಷದೀಶನೊಳ
ಚ್ಯುತಂಭಕ್ತಿಭಾವದಿಂ ನಗುತ್ತಿಂತೆಂದಂ|

ಕಂ| ಮದನಹರನಲ್ಮೆಯಿಂಸೋ| ಲದಾಟವಿಾಕ್ಷಿಸು ವೊಡೆನ್ನನೆಂ
ದುಂ ನೆರೆಗೆ| ಲ್ಲದಪೆರ್ಚಿನಾಟನಿಮ್ಮದು| ವಿದಿತವೆನುತ್ತ ಚ್ಯುತಂಬಿ
ಪಂಗಿಂ ನುಡಿದಂ| ೧೩

ಛಲದಿಂದಗೆಲ್ದು ನಿಮ್ಮಾ| ವಿಲಸಿತಮಣಿಭೂಷಣಂಗಳಂ ಕೊಂಡಾ
ನಿಂ| ದೊಲವಿಂದೆನ್ನಯಭಕ್ತ| ವಳಗೀವೆನೆನುತ್ತೆ ನುಡಿದನಚ್ಯುತ
ನಾಗಳ್| ೧೪

ವ| ಅಂತಿದಿರ್ಕೊಳ್ನುಡಿದಚ್ಯುತನಗೆಲವಿನಛಲಕ್ಕಂ ಶಿವಭಕ್ತಿಗಂದಾಭ
ಗರ್ಗಂ ಮೆಚ್ಚಿತುರ ವಣಮಂ ತೋರಿಕವಡೆಯಂ ಪರಪಿಜೂಜಂ ಕೈ
ಕೊಂಡಿರ್ಪಾಗಳ್|

ಕಂ| ಎಂದುಂಗೆಲವಂಮಾಡುವ| ನಂದಿಯಪೊಸತಚ್ಚು ವಿಡಿದು ಶಿವಶ
ರಣನುತಾ| ನಂದಂವಿುಗಜೂಜಿನೊಳಂ| ದಿಂದುಕಳಾಧರನ ನಚ್ಯುತಂ
ನೆರೆಗೆಲ್ದಂ| ೧೫

ವ|| ಅಂತುಕೌತುಕಂವಿುಗೆ ಭೂತೇಶನಂ ದ್ಯೂತಕೇಳಿಯೊಳ ಚ್ಚು
ತಗೆಲ್ದುಬ್ಬರಿಸುತಿರ್ಪಾಗಳ್

ಕಂ|| ಜಗವುಂಗೆಲ್ವೆನ್ನಂನೆ ಟ್ಟಗೆಗೆಲ್ದನುದಾರಶೀಲನಚ್ಯುತನೆನುತಂ|
ವಿುಗೆಮೆಚ್ಚಿ ಕರುಣದಿಂದಂ| ಮೃಗಧರಧರನೊಲ್ದು ರೂಪುದೋರಿದನಾ
ಗಳ್| ೧೬

ಪೃಥ್ವೀವೃತ್ತಂ| ಘನಾಪಗೆಯಿನಿಂದು ವಿಂದನಲನಿಂಭುಜಂಗಂಗ

ಳಿಂ| ಕನದ್ವಿಪದ್ವಿಸಸ್ಥಿಯಿಂ ಭಸಿತದಿಂ ಮಹಾಸಿಂಧುರಾ|| ಜಿನಾಂಬರದಿ ಪತ್ತುತೋಳ್ಗಳನುದಾರ ಪಂಚಾಸ್ಯದಿಂ| ಮನೋಹರತೆವೆತ್ತು ರಾಜಿಸಿ ದಸದಿ ಭಿಜಾವಲ್ಲಭಂ| ೧೭

ವ| ಅಂತುರಾಜಿಸುವಶಿವನ ಮೂರ್ತಿಯಂ ಕಂಡಚ್ಯುತನಚ್ಚರಿಯಿಂ ಬೆಚ್ಚಿದಂತಾಗಿ ಪದದೊಳ್ಪೊರಳ್ದು ಗದ್ಗದಿಪಕೊರಳಿಂದ ಪ್ರತಿಮನಿಗೆ ದೊರೆಯೆನಿಸಿ ಜಾಜನಾಡಿದ ಪರಾಧಿಯೆನಿಪೆನ್ನಂ ಪೊಲ್ಲೆಯಂಕೊಳ್ಳದೆ ನಿನ್ನಮಹಾತ್ಮ್ಯಯಂ ಮೆರೆವುದ್ಧರಿಪುದೆನುತ್ತಂ ಭಯಭಕ್ತಿಯಿಂ ಬಾಷ್ಪವಾರಿಗಳಂ ಸುರಿಸುತ್ತಂ ಪರಾಶೀಭೂತನಾಗಿರ್ಪಾಗಳ್|

ಕಂ| ಕಡುಗರುಣದಿನಡಿಯೆಳ್ಪ್ಪ| ಗೆಡೆದಿರ್ಪಚ್ಯುತನ ನೆತ್ತಿಕುಳ್ಳಿರಿಸಿಮುದಂ | ಬಡೆವಿಂದುಚೂಡ ನಸುನಗು ತೊಡನತ್ಯಾನಂದದಿಂದಲುದಿಂತೆಂದಂ| ೧೮

ವಿತತದ್ಯೂತದಮುಖದಿಂ| ಕೃತಿಯರಿಯದಜೇಯನೆನಿಸುವೆನ್ನಂಗೆಲ್ದು |ಪ್ರತಿಮಗುಣಗಚ್ಯುತಂಗೀ| ಕ್ಷಿತಿಯೊಳಗಾದೊರೆಯೆನುತ್ತೆ ಪೊಗಳ್ದಂಗಿರಿಶಂ| ೧೯

ವ| ಎಂದಿಂದುಧರನಾನಂದದಿಂ ಕೊಂಡಾಡುತ್ತಂ ತಾಂಬರಿಸಿದದಿವ್ಯವಿಮಾನದೊಳಚ್ಯುತ ಮಾಹೇಶ್ವರಾನ್ವಿತಂ ಪಶುಪತಿಪ್ರಮಥಗಣಂಗಳ್ವೆರಸೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್|

ಕಂ| ಶ್ರುತಿಗಳ್ಪೊಗಳುತ್ತಿರಲ| ಚ್ಯುತರ್ಗೆಗಣಪದಮನಿತ್ತು ಮೆರೆದಕ್ಷಯನೂ| ರ್ಜಿತಮಹಿಮನೆನಿಪಗಿರಿಜಾ| ಪತಿನಲವಿಂದೊಪ್ಪಿರ್ದನಾಸ್ಥಾಯಿಕೆಯೊಳ್| ೨೦

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪಾಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವೀರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ್ರದೊಳಚ್ಯುತ ಮಾಹೇಶ್ವರಕಥಾವೃತ್ತಾಂತಂಚತುಃಪಂಚಾಶದಾಶ್ವಾಸಂ||

...ಶ್ರೀ...

## ಐವತ್ತೈದನೆಯಆಶ್ವಾಸಂ
### ತಿರುಕುರುಪಿತೊಂಡರಕಥಾವೃತ್ತಾಂತಂ

ತಿರುಕುರುಪಿತೊಂಡಮಾಹೇಶ್ವರಂಗೆ ಗಣಪದವನಿತ್ತು ಮೆರೆದೊಪ್ಪು
ವಶಂ| ಕರಶಶಿಧರ ಕರುಣಾಕರ| ನಿರುಪಮ ಸೋಮೇಶನೊಲ್ದುಪಾ
ಲಿಕೆನಮ್ಮಂ|| ೧

ಚಂಪಕಾವರ್ತಕವೃತ್ತಂ|| ಇಂದುಶೇಖರನಸಜ್ಜೆಯಮನೆತಾ| ನೆಂ
ದೆನಿಪ್ಪವರ ತೊಂಡಧರೆಯೊಳಾ| ನಂದದಿಂಸುರಪುರಕ್ಕೆ ಣೆಯೆನಿಸು|
ತ್ತಿಂಪು ಕಾಂಚಿಯುಪ್ಪೊಳಲ್ಕರಮೆಸೆಗುಂ|| ೨

ಕಂ|| ಒಪುಳತಟಾಕಾವಳಿಯಿಂ|ಸಹಕಾರಂಗಳನೇಕಧಾನ್ಯದಬೆಳೆ
ಯಿಂ| ಮಹಿಮೆಬಿಡದೆಸೆವುತಿರ್ಪುದು| ಮಹೇಶನಿಳಯಂಗಳಿಂದೆ ಕಾಂ
ಚೀನಗರಂ|| ೩

ವರಶಿವಭಕ್ತರಭವನೋ| ತ್ಕರದಿಂಪಿರಿದೆಸೆವುತಿರ್ಪ ಕಾಂಚಿಯುಪು
ರದೊಳ್| ತಿರುಕುರುಪಿತೊಂಡನೆಂಬಂ| ಪರಭಕ್ತಿಯನಿಷ್ಠೆವಿಡಿದುಬಾ
ಳುತ್ತಿರ್ಪಂ|| ೪

ಇಳೆಯುಮಳಿನತೆಯನನಿತಂ| ತೊಳೆಯಲ್ಕಾಂ ರಜಕಕುಳದೊಳೊ
ಗೆದುಮಹಾನಿ| ರ್ಮಳಭಕ್ತನೆನಿಸುತಂಕಂ| ಗೊಳಿಪಂ ತಿರುಕುರುಪಿ
ತೊಂಡನೆಂಬಶಿವೈಕ್ಯಂ|| ೫

ಹರಭಕ್ತರವರವಸ್ತ್ರೋ| ತ್ಕರಮಲ್ಲದೆ ಭವಿಗಳಂಬರವನೊಗೆಯದ
ನಚ್ಚರಿತಂಜಂಗಮಭಕ್ತಿಯ| ಮರುಳಾತಿರುಕುರುಪಿ ತೊಂಡನತು
ಳೋದ್ದಂಡಂ|| ೬

ಹರಿಣೀವೃತ್ತಂ|| ತಿರುಕುರುಪಿತೊಂಡನಿಚ್ಚಂ ಭಕ್ತಿಭಾವದಿನೆದ್ದು
ಭಾ| ಸ್ಕರನುದಯದೊಳ್ನಾನಾಪುಷ್ಪಂಗಳಿಂ ನೆರೆಕೈಮನಂ ಪದಮುಮು
ದವೊಂದಾಗಲ್ಕಾಂಬೀಶನ ನರ್ಚನೆಗೆಯ್ದುಮುಂ| ದಿರದೆ ಕುಣಿದಾಡು
ತ್ತಿಂ ಪಾಡುತ್ತಿರ್ಪನಲಂಪಿನಿಂ|| ೭

ವ|| ಅಂತೀಪರಿಯ ಲಿಂಗಾರ್ಚನೆಯಂಮಾಡಿ ಬಳಿಕನಂತರಂ ತಿರು
ಕುರಪಿತೊಂಡಂ ತನ್ನಮಡಿವಳಕಾಯಕಕ್ಕೆ ಚಿತ್ತವಿತ್ತಿರ್ಪ ನಂತು
ಮಲ್ಲದೆಯುಂ||

ಕಂ|| ಪಿರಿದೊಳ್ಪಿತೆನಿಸಿ ಶಿವಭಕ್ತರವಸ್ತ್ರಮನೊಗೆದು ಕೊಟ್ಟುಫಳಿ

ಸಿವಘನಮಂ| ಶರಣಗಿರೀವೃತ್ತತ್ತ್ವಾ | ದರದಿಂತಿರುಕುರುಪಿತೊಂಡನಿ
ರ್ಜನಸದೊಳ್|| ೮

ಕರಯಂಗಳೆಂಕಾಯಕದೊಳ್ | ವರಚಿತ್ತಂಲಿಂಗದಂಘ್ರಿಪಂಕೇರು
ಹದೊಳ್| ಬೆರಸಿತೆರಪಿಲ್ಲದಿಂತಸ| ವರತಂ ತಿರುಕುರುಪಿ ತೊಂಡನಿರ್ಪ
ವಸರದೊಳ್|| ೯

ವ|| ಮತ್ತವಿ-ತ್ತಲ್ಪದಾಶಿವನೋಿವಿಂ ಮನವಮಂನೋಡಲ್ಕೈಲಾಸದಿಂಪ್ರ
ಮಥಸಂಕುಳಮಂ ಕಳ-ಪಲವರ್ಮರ್ತ್ಯದಭಕ್ತರ ವೇಷದಿಂದಸಗವೊ
ಳಿಗೆಬಂದು ತವ್ಮ ತಮ್ಮ ಸೀರೆಗಳಂಪಾಯ್ಕಲ್ಕಾತಿರುಕುರುಪಿತೊಂಡಂ
ಹಸಾದವೆನುತ್ತವಂ ನಿರ್ಮಳಮಪ್ಪಂತೊಗಯಲುದ್ಯುತನಾದನಂತಾ
ಗಳ್

ಚಂ|| ಗಿರಿಗೆಸಮಾನಮಾಗಿ ವಳಸೋತ್ಕರವೊಟ್ಟಿರೆಕಂಡು ಭಕ್ತಿ
ಯಿಂ| ಹರಶರಣೆಂದೆನುತ್ತ ಮವವಾರಿಯೊಳದ್ದಿ ಶಿಲಾತಲಾಗ್ರದೊಳ್|
ಪಿಂದೊಗೆದೊಲ್ದು ನೋಡಲವ್ರುತೀಳದೆ ಪತ್ತುಪವಾಗವಾಗಲಾ| ಸುರ
ದೊಳೆ| ಮತ್ತೆಮತೆತ್ತುಗೆವ್ರುತೊಟ್ಟುತ ಮಿದರ್ನುಮೇಶ ಕಿಂಕರಂ||

ವ|| ಅಂತುಮೇಶಕಿಂಕರನದಂ ಕಂಡಂಜೆನಂಜೆನೆನುತ್ತೆಂತು ಸೀರೆಗ
ಳ್ ಘನವಾಗಲ್ಕಂತಂತೆ ಸಂತೋಷಂಪೆರ್ಚೆ ನಿರ್ಮಳಮಪ್ಪಂತವನೊ
ಗೆದು ಘಳಿಗೆಯಂಮಾಡಿ ಘಟ್ಟಿಸಿನುಂಪುಗೆಯ್ದು ತದ್ಗಣಂಗಳಗೊಪ್ಪಿಸಿ
ಕೊಟ್ಟಪರೊಕ್ಕದಂ ಸದ್ಭಕ್ತಿರಸಾವೇಶ ದಾನಂದದಿಂದಿರುತಿರ್ದ
ನಂತುಮಲ್ಲದೆಯುಂ||

ಕಂ|| ಪರಭಕ್ತನಜಸದೆಸೆವಂ| ಭರದಿಂತೋರ್ಪಂತಿರುಟ್ಟತಮ್ಮಯ
ಥವಳಾಂ| ಬರತತಿಪೊರೆಯಲ್ ಪ್ರಮಥರ್| ಹರನಲ್ಲಿಗೆಬಂದು ಕೈಗಳಂ
ಮುಗಿದೆಂದರ್|| ೧೧

ಪಿರಿದುಪವಾಸಂಪತ್ತು! ತ್ತಿರಲಂಜವೆಪಲವುಸೀರೆಗಳನೊಗೆದೆಮಗಾ
ದರದಿಂಲೇಸೆನಿಸಿದತ,ಚ್ಛರಣಂಗೆಣೆಯಿಲ್ಲಧರೆಯೊಳೆಂದ ಪ್ರಮಥರ್||

ವ|| ಅಂತಾತಿರುಪಿತೊಂಡನಭಕ್ತಿಯುಂ | ಪ್ರಮಥಕೊರ್ಂಡಾಡಲ್ಕೇ
ಳ್ದು ಮೆಚ್ಚಿಭಕ್ತವತ್ಸಳನಪ್ಪ ಶಂಭುತಾಂ ನೋಡಲ್ಕೆಂದು ಕೈಲಾಸದಿಂ
ಪೋರಮಟ್ಟು ಮಾನವತಪಸಿಯಾಗಿಕಾಂಚೀಪುರಕ್ಕೈತಂದಾಗಳ್||

ಕಂ|| ಕರದಕಪಾಲಮೆತ್ತಾಂ ಭರ್ಸ್ಮ ರಮುಖಭಟ್ಟಾಂಗಮದುಪೆಶಾ

ಕುಳಮೆನೆಪಾ| ಕರಿಚರ್ಮಂಕಂಥೆಯುದಾ| ಗಿರಿಜಪಶುಪತಿ ಭಿಕ್ಷುವೇಷ
ದಿಂದಂಬಂದಂ|| ೧೩

ವ|| ಅಂತತುಳಲೀಲೆಯಿಂದಸಗ ವೊಳೆಗೆಬಂದಮುನಿ ವೇಷದೀಶನಂ
ದೂರದೊಳ್ಕಂಡಾ ನಂದವುನೆಯ್ದಿ ಭಕ್ತಿರಸಾವೇಶದಿಂ ಪರಿತಂದುಚರ
ಣಯುಗದೊಳ್ಪೊರಳ್ದು ಪರವಶನಾಗಿರಲ್ಕರುಣದಿಂ ಪಿಡಿದೆತ್ತಿಪರಸುತ್ತೆ
ಲಿವುಗನೆತಿರುಕುರುಪಿ ತೊಂಡನೆಂಬಪೆಸರಭಕ್ತಂ ನೀನೆನಿರ್ಮಲಾತ್ಮ
ಕನೆಂಬುದಂ ಕೇಳ್ದು ಬಂದೆವೆನುತ್ತಿಂತೆಂದಂ||

ಕಂ|| ಪೊಪದೆವ್ಮ್ಮ ಕರಿಯುಕಂಥೆಯು| ನಿದನಿಂದಿರದೊಗೆದು ಬಿಳದ
ನೊಲವಿಂಪಾಷುವು ದದುನವುಗಥಿ-ಯೆನುತ್ತಂ| ಮುದದಿಂತಿರುಕು
ರುಪಿ ತೊಂಡಗೀಶಂನ.ಡಿದಂ|| ೧೪

ಮಾದೇವಂಬೆಳಸಿದೊಡೆಹ ನಾದವೆನುತ್ತೀಸಿಕೊಂಡು ಕಂಥೆಯುನ
ದನ| ತ್ಯಾದರದಿಂದಂಪೊತ್ತುಗು| ಣೋದಧಿ ತಿರುಕುರುಪಿತೊಂಡ ನೆರೆ
ತಾಂಮಗ ಳ್ದಂ|| ೧೫

ವ|| ಅಂ ತಾಗಳಾವ ಎನಿಯುಂಕಳುಪಿಕಂಥೆಯುಂಪೊತ್ತುಕೊಂಡುಬಂದ
ಸಗವೊಳೆಯ ಕಲ್ಲಮೇಲಿರಿಸಿಶಿವಭಕ್ತಿಸುಮುರುಳಪ್ಪತಿರುಕುರುಪಿತೊಂ
ಡನಪ್ಪಂ ನಿರ್ಮಳಜಲದೊಳದ್ದಿ ಹರುಷದಿಂ ಜಳ್ಪಿಸಿಮೊಗೆವುತಿರ್ದ ನಾ
ಗಳ್||

ಕಂ|| ಉದಯುಂವೊದಲಾಗಿರೆನಿ| ಲ್ಲದೆಜಾವಂಮೂರು ಮುಟ್ಟಲೊಗೆ
ದೊಗೆದೊರಸು| ತ್ತುದಕವೊಳದ್ದಿ ಸಿರೀಕ್ಷಿಸು| ತಘಟುದಂಬೀಸಿಮು
ತ್ತವೊಗೆವುತ್ತಿರ್ದಂ|| ೧೬

ಕರದತೊವಲ್ಪಿಡಿಬತ್ತ್ಯಾ| ಸುರದಿಂಪೊಗೆ ಜೆ. ಗೆವುನೋಪಲಾಕಂ
ಥೆಕರಂ| ಕರಿವೆನಿಕುತಿರ್ಮದಲ್ಲದೆ| ನಿರುತಂಬಿಳನಪ್ಪ ಪೊಲಬದಿಲ್ಲಾ
ಯ್ತಾಗಳ್|| ೧೭

ಅನಿತಕ್ಕ್ರೂರೊಳಗಿಂದಂ| ಮುನಿಬರುತಿರೆಕಂಡು ನೊಂದುಪುಸಿಪೊ
ರ್ದಿತ್ತಿಂ| ದೆನಗಕಟೀಕಂಥೆಯುಬಿಳಿ|ವೆನಿಸದೆ ಪೋಯ್ತೆನುತೆಮರುಗಿ
ದಂತದ್ಭಕ್ತಂ|| ೧೮

ವ|| ಅಂತುಮರ,ಗುತ್ತಾಮುಗ್ಧನಪ್ಪ ತಿರುಕರುಪಿತೊಂಡಂ ಕಂಥೆಬಿ
ಳಿದಾಗದೆನುತ್ತಂತನ್ನಂ ಪರಿಚ್ಛೇದಿಸಲ್ಪಗೆದಂತಾಗಳ್

ಕಂ॥ ಬಿಳಿದಾಗದೆ ಕಂಥೆಗೆ ತ। ತ್ಕಳೇವರವನೊಗೆದು ಕೊಡುವೆನೆನುತಾ ಕಲ್ಲೊಳ್। ಘಳಿಲನೆ ತನ್ನಂ ತಾನಪ್ಪಳಿಸುತ್ತಿರೆ ಭಕ್ತನಂ ಮಹೇಶಂ ಪಿಡಿದಂ॥ ೧೯

ಕರುಣದಿನ ಭವಂ ಪಿಡಿದಾ। ದರದಿಂ ತಿರುಕುರುಪಿತೊಂಡ ನಿನ್ನ ಯಥಲಡಾ। ಸುರಭಕ್ತಿಗೊಲಿದೆನೆನುತಂ। ಪಿರಿದೊಲವುತೆ ತನ್ನ ರೂಪುದೋರಿದನಾಗಳ್॥ ೨೦

ಭುಜಂಗಪ್ರಯಾತವೃತ್ತಂ॥ ನದೀವಾರಿ ಚಂದ್ರಂ ಹುತಾಶಂ ಭುಜಂಗಂ। ಪೊದಳ್ದಸ್ಥಿಭಸ್ಮಂ ವಿಷಂ ದುರ್ಗಿ ಶೂಲಂ। ಮಹೇಭಾಜಿನಂ ಪತ್ತು ತೋಳ್ಪಂಚವಕ್ತ್ರಂ ಮುದಂಬೆತ್ತು ಕಣ್ಗೊಪ್ಪ ಲೊಪ್ಪಿರ್ದನೀಶಂ॥

ವ॥ ಅಂತೊಪ್ಪುವ ದಿವ್ಯಮೂರ್ತಿಯುಮಂ ಕಂಡು ತಿರುಕುರುಪಿತೊಂಡಂ ಒಡವಂ ಕಡವರಮುಂ ಕಂಡಂತಾನಂದಮನೆಯ್ದಿ ಪರ್ಚಿ ಪೆಗ್ಗತ್ತಡಿದಾವರೆಯೊಳ್ಸೈಗೆಡೆದು ಪರವಶನಾಗಿರ್ದಾಗಳ್॥

ಕಂ॥ ಪಿಡಿದೆತ್ತಿ ಕಳ್ಳಿರಿಸಿದಂ। ಮೃಡವುತೆ ತಿರುಕುರುಪಿತೊಂಡಮೂನಲಿದಾಗಳ್। ಕಡುಭಕ್ತಿಯ ಫಲದೊಲವಂ। ವೃಡನಾಗಳ್ನಂದಿನಾಥನೊಡನಿಂತೆಂದಂ॥ ೨೧

ಎನ್ನಯ ಕಂಥೆಗೆ ಕಡುಪಿಂ। ತನ್ನಂ ತಾಂ ಶಿಲೆಯೊಳೊಗೆದು ಕೊಂಡನೆನುತ್ತಂ। ಪನ್ನಗಭೂಷಣನೊಲವಿಂ। ದುನ್ನತ ತಿರುಕುರುಪಿತೊಂಡನಂ ತರಸವಂಪೊಗಳ್ದಂ॥ ೨೨

ವ॥ ಅಂತು ಕೊಂಡಾಡುತ್ತಂ ತಾಂ ಬರಿಸಿದ ದಿವ್ಯವಿಮಾನದೊಳ್ ತಿರುಕುರುಪಿತೊಂಡರಂ ಕರುಣದಿಂ ಕುಳ್ಳಿರಿಸಿ ನಿಯಾಮಿಸಲಕ್ಕಾಗಳ್॥

ಕಂ॥ ತಿರುಕುರುಪಿತೊಂಡಭಕ್ತಂ। ಬೆರಸಾಕಾಶಮನೆ ಬೆಳಗುತಂ ಮಣಿಮಕುಟಂ। ಘುರಪುಷ್ಪಾಸುಸ್ವಪದಿಂ। ದಿರದೇಳ್ತಂದು ತ್ತ್ತ ರಜತಗಿರಿಗಂತಾಗಳ್॥ ೨೩

ವ॥ ಅಂತೇಳ್ತಂದು ತಿರುಕುರುಪಿ ತೊಂಡಂ ತಾಂ ಬೆರಸು ಗಿರಿಜೆಯರಸಂ ಮಹಾಗಣಸಮೇತ ನತಿಶಯರೂಪದಿಂ ಬೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಘನಕಾರುಣ್ಯಂವಿಂಗಲತ್ತಿ। ವಿನಯದಿ ತಿರುಕುರುಪಿತೊಂಡ ಮಾಹೇಶಂಗ। ದನ... [illegible] ...ದಸ್ತ್ರಂ। ... [illegible] ...ತೆವುತಿರ್ದನಾ

ಸಾಯಿಕೆಯೊಳ್॥ ೨೫೩

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಪುಷ್ಪತ್ರಿಷಷ್ಟಿಪುರಾತನರ ಚಾರಿತ್ರದೊಳ್ತಿರುಕುರುಪಿತೊಂಡಭಕ್ತ ಮಾಹೇಶ್ವರ ಕಥಾವೃತ್ತಾಂತಂ ಪಂಚೋತ್ತರಪಂಚಾಶ ದಾಶ್ವಾಸಂ॥

— ೫೫ —

ಐವತ್ತಾರನೆಯಆಶ್ವಾಸಂ

ತಿರುನಾಳ್ಪೋವರ ಕಥಾವೃತ್ತಾಂತಂ

ಧರೆಯಜನಮುದ್ಭೃತಂಬಡೆ। ತಿರುನಾಳ್ಪೋವರ್ಗೆಮೆಚ್ಚಿ ಗಣಪದಮುಂ ಸ। ತ್ಕರುಣದಿನಿತ್ತೊಲವಿಂನಿ। ರ್ಜರನುತಸೋಮೇಶನೊಲ್ದು ಪಾಲಿಕೆನಮ್ಮಂ॥ ೧

ಘನಚೋಳೋರ್ವರೆಯೊಳ್ಸ। ದ್ವನದಿಂನವಗಂಧಶಾಲಿಗಳಗರ್ವೆಗಳಿಂ। ತನುಗಂಪಿನಪೂಡೋಂಟದಿ. ನನವರತಂಪಾದನೂರುನೆರೆರಂಜಿಸುಗುಂ॥

ನಳನಳಿಸಿಪ್ಪೊಳೆವ ಪೊಸಪೊಂ।ಗಳಸಂಗಳನುಳ್ಳಚೆಲ್ವಲಿಂಗಾವಸಥಂ। ಗಳನಭವಭಕ್ತಗೃಹಸಂ ಕುಲದಿಂದಾವಾದನೂರ್ಕರಂರಂಜಿಸುಗುಂ॥

ವ॥ ಮತ್ತಮಾವಾದ ನೂರಬಹಿರ್ವಾಳಿಯದೊಳೊಂದು ಮನೆಯಂ ಮಾಡಿಕೊಂಡು ಭವಿಗಳ್ಪೋಂಕದಂತೆಪಿರಿಯ ಭಕ್ತನೆನಿಸಿಕೊಳ್ಳುತ್ತಂ ತಿರುನಾಳ್ಪೋವನೆಂಬ ಪೆಸರುಳ್ಳ ಮಾಹೇಶ್ವರಂ ಗುಪ್ತದೊಳ್ ಜಂಗಮ ಲಿಂಗಕ್ಕೆ ಬೆಸಕೆಯ್ವುತ್ತಿರ್ದನಂತುಮಲ್ಲದೆಯುಂ॥

ಕಂ॥ ಭವಿಗಳಕೈಯುಂಪೊರ್ದಂ, ಶಿವಭಕ್ತಕೊಟ್ಟ ಕೂಲಿಕೊಂಡ

ನವರತಂ| ತವಗಳಕ್ಕೈಕೆಲಸಮನು|| ಸ್ವವದಿಂದಂ ಮಾಳ್ಪನಲ್ಲಿತಿರುನಾಳ್ಪೋವಂ|| ೪

ವ|| ಅಂತೀಪರಿಯ ಕೃಷಿಯಂ ಮಾಡುತ್ತಿರ್ಪನ್ನೆಗ ಮೊಂದುದಿವಸಂ ಬೆಳೆಸಿರಿವಂತನಪ್ಪೊರ್ಬ ಶಿವ ಬ್ರಾಹ್ಮಣನೊಂದು ತಿಂಗಳ ಕೂಲಿಯನೊಮ್ಮಗೆಕೊಟ್ಟು ತನ್ನ ಕಳವೆಯ ಗರ್ದೆಯಂ ಕೊಯ್ದೊಟ್ಟಿ ಕೊಡಲ್ವೇಳ್ದಂದೊಡದಂ ಕೈಕೊಂಡು ತಿರುನಾಳ್ಪೋವಂ ಕೂಲಿಗೆಯ್ಯುತ್ತಿರ್ದನಂತುಮಲ್ಲದೆಯುಂ||

ಕಂ|| ತಿರುನಾಳ್ಪೋವಂ ತಾನೀಪರಿಯೊಳ್ಕೂಲಿಯನೆ ಮಾಡುತಿರುತೊಂದುದಿನಂ| ಭರದಿಂಪೊನ್ನಾಂಬಲದಾ| ತಿರುನಾಳ್ಗಂಪೋಪೆನೆಂದು ಮನಮುಂತಾಳ್ದಂ|| ೫

ವ||ಪಿರಿದುಂಕಾಯಕಮೆಂಬುದುತ್ಸಕಳಮಷ್ಟೇ ತಿಂಗಳೊಳ್ವಿಷ್ಟಿಯಂ ತಿರುನಾಳಂನಲವಿಂದೆ ಪೋಪೆನೆನಿಪೊಂದುದ್ಯೋಗ ದೊಳಾತ್ಮನಂ| ವರಪೊನ್ನಾಂಬಲ ನಾಥನಪ್ಪ ಶಿವಲಿಂಗಧ್ಯಾನದೊಳ್ಸಂತತಂ ತಿರುನಾಳ್ಪೋವನತೀವ್ರಭಕ್ತಿಯೊಡವಿಂದಿರ್ಪಂ ಮಹಾನಂದದಿಂ|| ೬

ಕಂ|| ತಿರುನಾಳೆಂಬುದುತನಗಂ| ಸಿರುತಂತಾಯ್ತೆಂದೆ ಬಂಧುಗತಿಮತಿಯೆ ನುತಂ| ತಿರುನಾಳ್ಪೋವಂ ತಾನೀಪರಿಯೊಳ್ಪೊ ನ್ನಾಂಬಲಮನೆ ಜಾನಿಸುತಿರ್ಪಂ|| ೭

ವ|| ಅಂತೀಪರಿಯೊಳಿರುಳುಂಪಗಲುಂಪೊನ್ನಾಂಬಲೇಶನತಿರುನಾಳ್ಗೆ ಪೋಪೆನೆಂಬುದ್ಯೋಗದಿಂ ಪಸಿವುನೀರಡಕೆಯಂ ಮರೆದುಮನೆಗಬಂದು ಪೋಪನುವಂ ಕಾಣದೆಸುಯ್ದುಳಲ್ದು ಇನ್ನೆಂತುದಿನಂ ಪೊನ್ನಾಂಬಲೇಶನಿನ್ನಂ ಕಾಣದೆಂತುಬದುರ್ಕುವೆನೆನುತಂ ತಿರುನಾಳ್ಪೋವನೆನಿಪ್ಪುತ್ತೆಂತಾನುಂಬೆಳಗಂಮಾಡಿ| ನಿಚ್ಚಕಿನಂದದಿಂ ಗರ್ದೆಗಪೋಪಾಗಳ್ಪೊನ್ನಾಂಬಲಕ್ಕೆ ಪೋಗುತ್ತಿರ್ಪಜಾತ್ರೆಯವರಂಕಂಡುಹರ್ಷದಿಂಬಂದಂತೆಹಾರೈಸಿಪೆರ್ಚಿ ಪಿಗ್ಗುತ್ತಿರ್ಪಾಗಳ್ಮುನ್ನಕೂಲಿಯಂಕೊಟ್ಟಿರ್ದ ಶಿವಬ್ರಾಹ್ಮಣಂ ಕರೆಯಲ್ಬಂದೊಡಾ ತಿರುನಾಳ್ಪೋವನಿಂತೆಂದಂ||

ಕಂ|| ಮುನ್ನೆಂದುಂಪೊನ್ನಾಂಬಲ ಕಾಂನಿರುತಂಪೋದುದಿಲ್ಲವುದು ಕಾರಣದಿಂ| ದಂನಾಳಿಪ್ಪೋಪೆನೊಲವಿಂ ದೆನ್ನಕಳುಪುವುದೆನಲ್ಕೆ ಪೇಂನುಡಿದಂ|| ೮

ತಿಂಗಳಕೆಲಸವಮನೀಗಲ್ ಪಿಂಗದೆಮಾಡಿ ದೊಡೆನಾಳೆಕಳುಪುವೆನಾಂ
ನಿ ಷ್ಣಂಗುಣನೆಂಬಾತದ್ವಿ। ಪ್ರಂಗೊಲವಿಂದೆಂದನಂದುತಿರುನಾಳ್ಪೋ
ವಂ॥ ೯

ಇಂದೆಲ್ಲಾ ಕೆಲಸವಮನಾಂ। ಕುಂದಿಲ್ಲದೆಮಾಳ್ಪೆನೆಂದು ಶರಣಂಕೈ
ಕೊಂ।ಡಂದಾವಿಪ್ರನಗದೆಗ। ಬಂದೊಲವಿಂಕೊಯ್ಯುತಿರ್ದ ನತು
ಳೋತ್ಸವದಿಂ॥ ೧೧

ವ॥ ಅಂತುತ್ಸಾಹದಿಂ ತಿರುನಾಳ್ಪೋವಂ ತಿರುನಾಳ್ಗೆ ಪೋಪ ಭಕ್ತ್ಯು
ದ್ರೇಕದಿಂ ಮೆಯ್ಮರೆದು ಕಡೆಯಿಲ್ಲದೆಬೆಳೆದಗದ್ದೆಯನನಿತನೊರ್ವನೆ
ಕೊಯ್ಯುತ್ತಿರಲ್ ಜಗದ್ವ್ಯಾಪಕನಪ್ಪಶಿವಂಕರುಣದಿಂನಿಜಭೂತಗಣಂ
ಗಳ್ಗೆ ಕೊಯ್ದುಕೊಡುವುದೆಂದು ನಿರೂಪಿಸಲ್ಕವಿಬರೆಲ್ಲಂ ಬಂದುನಿಮಿ
ಷದೊಳದೃಶ್ಯಾಕಾರದಿಂ ಕೊಯ್ದು ಬ್ಬಳಿಕ್ಕಲದಂ ವಿಪ್ರಂಕಂಡು ಮನ
ದೊಳದ್ಭುತಂ ಬಟ್ಟೀಕೊಯ್ದನೆಲ್ಲ ಪುಲ್ಲವನೆಲ್ಲವನೆನ್ನ ಕಳದೊಳ್ಪೊತ್ತು
ತಂದೊಟ್ಟ ಪೋಪುದೆನಲ್ಕಾಗಳ್॥

ಮ॥ ತಿರುನಾಳೆಪ್ಪೋವನುಮೇಶ ಭಕ್ತಿರಸದುದ್ರೇಕಂ ಮಿಗಲ್ಕಾಗ
ಲಾ। ಸುರದಿಂಭೂತಗಣಾನ್ವಿತಂ ಪಿಡಿದುಮುನ್ನಂ ಕೊಯ್ದ ಪುಲ್ಲೆಲ್ಲ
ವಂ। ಭರದಿಂಪೆಬೊರ್ಗೆಸಗಟ್ಟಿ ನೋಳ್ಪಜನಮುಂದಂದದ್ಭುತಂ ಬೆತ್ತಿರಲ್
ಶಿರದೊಳೆಪ್ಪೊತ್ತು ಕಳಕ್ಕೆತಂದು ನಲಿದೊಂದೇಬಾರಿಯಿಂದೊಟ್ಟಿದಂ॥

ಕಂ॥ ಪಿರಿದಪ್ಪನೆಲ್ಲ ಪುಲ್ಲಂ। ಹರಕೃಪೆಯಿಂದೊಮ್ಮೆನಲ್ಲಿ ತಂದೊಟ್ಟ
ಕೊಡಲ್। ತಿರುನಾಳ್ಪೋವಂಗಂಡ। ಚ್ಚರಿವಟ್ಟಾಪ್ರನೋತು ಪೋಗೆ
ನುತಿರ್ದಂ॥ ೧೨

ವ॥ ಅಂತ ಪಾರ್ವನಾಶ್ಚರ್ಯಂ ಬಟ್ಟುಕಾರಣ ದೇಹಿಯಪ್ಪನೆಂದರಿದು
ಕೈಗಳಂಮುಗಿದು ಕಳುಪಲ್ಕಾಗಳಾಸವ.ಯದೊಳ್ಬಾರಿ ಕಾರಬಂದು
ಪೊನ್ನಾಂಬಲಕ್ಕಕ್ಕೆ ಗಳಂಕಳುಪುವುದೆಂದು ಸದ್ವಿಪ್ರಂಗೆ ಪೇಳಲ್ಕೇಳ್ದು
ಬಿಟ್ಟಯಾಳ್ಗಳಂ ಪರಿಕಿಸಲ್ಪೋಗುತ್ತಿರಲ್ಕದಂ ಕಂಡುತಿರುನಾಳ್ಪೋವಂ
ಭಕ್ತ್ಯುದ್ರೇಕದಿಂ ಪಲವುಕೆಲವುನೆಲ್ಲಕ್ಕೆಯಮೂಡೆಗಳಂತಾಂಪೊತ್ತು
ಕೊಂಡು ಪೊರಮಟ್ಟಾಗಳ್॥

ಕಂ॥ ನೆರೆದತುಳಪ್ರಮೋದದಿ ನುಡಿಯೆನುತಂ ತಿರುನಾಳ್ಗೆ ಪೋಪ
ನ ಚ್ಛರಣಸಮೂಹದೊತ್ತರಮನೀಕ್ಷಿಸಿ ಹರ್ಷಮನೆಯ್ದಿ ಪಚರ್ಣತ।

ಚ್ಚರಿವಿರ್ಗಳುಬ್ಬಿ ಪಾಡುತೊಲವಿಂ ನಲಿದಾಡುತೆಬಂದು ಕೂಡಿಕೊಂ|
ಡಿರಲಭ್ರದೊಳ್ಮಹೋತ್ಸ| ವದೆತಾಂತಳೆರ್ದಂಗಿರಿಜೇಶಕಿಂಕರರ್|| ೧೩

ಕಂ| ಕೇರಳೆಗಳ್ಕಂಪನವಕ್ಷಿಯೊ| ಳಿರದುದಯಿಸುವ ಶ್ರುತನುವಿ
ನೊಳ್ಪುಳಕಂತೋ| ರಿರೆಭಕ್ತಿಯಿಂದೆನಡೆದಂ ತಿರುನಾಳ್ತಿರುನಾಳೆನುತ್ತೆ
ತಿರುನಾಳ್ಪ್ರೇವಂ|| ೧೪

ಪೊನ್ನಾಂಬಲವದುಮನದೊ| ಳ್ತಾಂನೆಲಸಿರೆಭಕ್ತಿರಸದಪರವಶದಿಂ
ದಂ| ಪೊನ್ನಾಂಬಲಪೊನ್ನಾಂಬಲ ಪೊನ್ನಾಂಬಲಶರಣೆನುತ್ತೆ ಭಕ್ತಂ
ಬಂದಂ|| ೧೫

ಆಹಾಪೊನ್ನಾಂಬಲಪತಿ| ಯೆಹೇಹೇಪೊನ್ನಾಂಬಲೇಶ ಶರಣೆಂದೆ
ನುತು| ತ್ಸಾಹದಿ ಬರೆಬರೆಕಂಡಂ| ಮೋಹನತೆಯನೀವುತಿರ್ಪ ಪೊ
ನ್ನಾಂಬಲಮಂ|| ೧೬

ವ|| ಅಂತಾಪೊನ್ನಾಂಬಲಮಂ ಕಂಡು ತನ್ನ ಮನದೊಳುಬ್ಬಿ ಕೊ
ಬ್ಬುತ್ತಿಂತೆಂದಂ||

ಕಂ|| ವರವಾರಣಾಸಿಯೊಳ್ಶ್ರೀ| ಗಿರಿಯೊಳ್ಸುತ್ತೀಕ್ಷಿಸಲ್ಕೆ ಮುಕ್ತಿಗ
ಳೆಂಬಾ| ಪರಿಯಿಂಪೊನ್ನಾಂಬಲವಾ| ದರದಿಂಸೇವಿಪರ್ಗೆ ಮೋಕ್ಷಮಪ್ಪ
ದುನಿರುತಂ|| ೧೭

ವ|| ಅಂತಾಮಹಿಮೆವಡೆದೆಸೆವ ಪೊನ್ನಾಂಬಲದತಿರುನಾಳ್ವಂದೊಡಂ
ಬನೇಕಭೇರಿಗಳದಿಂಧಿಮಿಕೆಂಬ ಮುರಜೆಗಳ ಖಿರಖಿರಟೆಂಬಕರಡೆಗಳ
ಝುಗುರುಝುಗುಗೆಂಬ ಪಾವುಜೆಗಳ ಝಗಕಣ್ಣಣೆಂಬ ಕಹಳೆಗಳ ಭುಂ
ಭುಂಯೆಂಬಶಂಖಂಗಳ ಘಣಂಘಣಮೆಂಬ ಘಂಟೆಗಳನಾನಂದದಿಂದುಘೆ
ಯುಘೆಯೆಂಬ ಭಕ್ತಜನದಸಂಭ್ರಮದೊಳ್||

ಚಂ| ವರನವರತ್ನಮಂಟಪದ ನಾಲ್ದೆಸೆಯೊಳ್ತನೆದಾಮತಿರ್ಪಸೀ|
ಗುರಿಪೊಸಚಾಮರಂ ಪೊಳೆವಕನ್ನಡಿಪೋಂಗಳ ಸಂವೃಷಧ್ವಜಂ| ಸುರು
ಚಿರ ತೋರಣಂ ಕಲಶದೊಳ್ಪು| ವಪೆಗುರ್ಡಿಗಳ್ವಿರಾಜಿಸ| ಲ್ಗಿರೀಶನ
ತೇರ್ಚಿತರಂ ಮೆರೆವುತೇಳ್ತರುತಿರ್ದುದು ತತ್ಪುರಾಂತಮೊಳ್| ೧೮

ವ|| ಅಂತಾಬೀದಿಯೊಳ್ಮೆರೆವುತ್ತುಂಬಪರ್ಪೊನ್ನಾಂಬಲೇಶನಪೊಂದೇ
ರಂಸುತ್ತಿ ನಿಂದಾನೆಗಳನೇರಿ ನೋಳ್ಪರಾಜಕುಮಾರವರ್ಗಂಗಳಿಂ| ಸಿಂ
ಗರದ ತುರಂಗಂಗಳ ನೇರಿನೋಳ್ಪಸಚಿವೇಂದ್ರ ಸಂದೋಹಂಗಳಿಂ ಕ

ಶುಮಾಡಂಗಳನೇರಿನೋಳ್ಪ ಕಮನೀಯಕಾಂತಾ ಸಂತಾನಂಗಳಿಂ ಮಾಗಿಲಂಪುಟ್ಟನೋಳ್ಪ ಪಿರಿದಪ್ಪನೆರವಿಗಳಿಂದಾನಂದದಿಂದಿದಿರೊಳ್ ರಂಪಾಡಂಪಾಡುವ ಗಾಯಕನಿಕಾಯಂಗಳಿಂ ದುಬಿನಲವಿನಿಂನರ್ತಿಪ ನರ್ತಕನಿಕರಂಗಳಿಂ ಬೊಬ್ಬಿರಿದಬ್ಬರಿಸಿ ಕಠಾರದಿಂ ಕೊರಲ್ಗಳಂ ಕಡಿದಿಡುಕುವಕೈಕೊಳರಬಳಗಂಗಳಿಂ ಕಣ್ಣುಗಳಂ ಕಳೆದು ನಿವಾಳಿಸುವ ವೀರರ್ಕಳಿಂದತುಳ್ದ ಸಂಭ್ರಮಂಬೆತ್ತು ತಿರುನಾಳೆಸೆವುತಿರ್ಪಾಗಳ್॥

ಕಂ॥ ಹೃದಯಂಗಳಂದೆ ಪೊರಪೊಣ್ಮಿದಕಮಳಾವಳಿಯೆನಲ್ಕೆ ಮುಗಿದಕರಂಗಳ್ಪವೆದೊಪ್ಪೆ ನೋಳ್ಪಭಕ್ತಾಳಿ ಘಿದೊಳಭವನ ತೇರ್ಕರಂ ವಿರಾಜಿಸಿತಾಗಳ್॥ ೧೯

ವ॥ ಆ ಸಮಯದೊಳ್

ಕಂ॥ ಎಡಹಿದೊಡರಿಯದೆ ಮಿಗೆ ಕಕರ್ದೊಡೆಕೇಳದೆ ಪರವಶತ್ವದಿಂ ಕುಣಿದಾಡುತ್ತಡಿಗಡಿಗೆ ಶಂಭುಶಂಕರ ಮೃಡಜಯಎನುತಿರ್ದನುರ್ವಿ ತಿರುನಾಳ್ಪೋವಂ॥ ೨೦

ಜಯಜಯಪೊನ್ನಾಂಬಲಪತಿ ಜಯಜಯಪೊನ್ನಾಂಬಲೇಶ ಜಯಜಯಸಚ್ಚಿನ್ಮಯಪೊನ್ನಾಂಬಲದರಸನೆ ಜಯಜಯಎನುತಿರ್ದನೊಸೆದುತಿರುನಾಳ್ಪೋವಂ॥ ೨೧

ನೆರವಿನಿರೀಕ್ಷಿಸಿಮರುಳೆನು ತಿರೆಕಣ್ಗಳಿ ನುಣ್ಮುವಶ್ರುಧಾರೆಗಳಂದಾ ಸುರರ್ದಿಪಾಡುತ್ತಾಡುತೆ ತಿರುನಾಳ್ಪೋವಂ ಬರುತ್ತಿರಲ್ಕಂತಾಗಳ್॥ ೨೨

ಪರವಶದಭಕ್ತಿಯಿಂದಂ ತಿರುನಾಳ್ಪೋವಂ ಕಡಂಗಿಮೆಯ್ಮರೆದಿರೆಸ ತ್ಕರುಣದಿಪೊನ್ನಾಂಬಲಪತಿ ಪಿರಿದೀಕ್ಷಿಸಿ ಕೂರ್ತುನಂದಿಯೊಡನಿಂತೆಂದಂ॥ ೨೩

ನೆರಪಿಪುಗಲೀಯದಿಪ್ಪರ್ ತಿರುನಾಳ್ಪೋವಾಖ್ಯಪರಮ ಭಕ್ತನನೊಯ್ದು ದರದಿಂ ಕೂಪವಜಲದೊಳ್ ತ್ವರಿತದಿಪಿಡಿದದ್ದಿ ಕೊಂಡುಬಾನೀನೆಂದಂ॥ ೨೪

ವ॥ ಎಂದುಸದಾಶಿವಂ ನಂದಿನಾಥಂಗೆ ನಿಯಾಮಿಸಲ್ಕಾತಂಪೋಗಿ॥

ಕಂ॥ ತ್ವರಿತದಿನಾತಿರುನಾಳ್ಪೋ ಪರನೊಲವಿಂನಂದಿಕೇಶ್ವರಂಪಿಡಿದಾಗಳ್ ಪರದೇವಕೂಪಜಲದೊ ಳ್ಪರಿದರ್ಬ್ಬಿಪ್ರಕುಜನನಿಸುತ್ತಿ

ರ್ದ॥ ೭೩

ವ॥ ಅಂತೇಳಲಲ್ಕಾಗಲ್॥

ಕಂ॥ ಭರದಿಂನಂದೀಶಂಪೋ। ಗಿರದೋ೬ವಿಂದೇಳ್ತರಲ್ಕೆ ನಲಿವುತ್ತಿ ರ್ಪ್ಪ। ತಿರುನಾಳ್ಪೋವರಭಕ್ತಿಗೆ। ಹರನಾಗಳ್ಮೆಚ್ಚಿರೂಪು ದೋರಿದ ನಾಗಲ್॥ ೭೬

ಲಲಿತಪದವೃತ್ತಂ॥ ಪರಜಟೆಗಂಗೆಹಿಮಾಂಶುಹುತಾಶಂ। ಗರಳಗಳಂ ಭಸಿತಂಗಜಚರ್ಮಂ। ನಿರುಪಮಪಂಚಮುಖಂ ದಶದೋರ್ಗಳ್। ಪಿರಿ ದೆಸೆಯುಲ್ ಶಿವನೊಪ್ಪಿದನಾಗಲ್॥ ೭೭

ವ॥ ಅಂತೊಪ್ಪುವಪೊನ್ನಂಬಲೇಶನದಿವ್ಯಮೂರ್ತಿಯಂಕಂಡಾನಂ ದಮುನೆಯ್ದಿ ಪರವಶದಿಂಪೊನ್ನಂಬಲೇಶನನುತಂ ಚರಣದೊಳ್ಪೊರ ಳುತ್ತಿರ್ಪ ತಿರುನಾಳ್ಪೋವರಂ ಕಾರುಣ್ಯದಿಂಪಿಡಿದೆತ್ತಿಕುಳ್ಳಿರಿಸಿ ಭಕ್ತ ವತ್ಸಲಂ ಗಿರಿಜೆಗಿಂತೆಂದಂ॥

ಕಂ॥ ಎನ್ನಯತಿರುನಾಳೆಂದೊಡೆ ತನ್ನಂತಾಂಮರೆದು ಸಕಲಕೃಷಿ ಯಂ ತೊರೆದ। ತ್ಯುನ್ನತಭಕ್ತಿಯೊಳೇಳ್ತಂ। ದಂನಿಜದಿಂದಿವಗದಾರ್ಸ ಮಾನಂಧರೆಯೊಳ್॥

ವ॥ ಎಂದುಕೊಂಡಾಡಿ ಕಾರುಣ್ಯದಿಂಭಕ್ತವತ್ಸಲನಪ್ಪ ಶಿವಂತಾಂಬರಿ ಸಿದ ದಿವ್ಯವಿಮಾನ ದೊಳ್ತಿರುನಾಳ್ಪೋವರಂ ಕುಳ್ಳಿರಿಸಿನಿಯಾಮಿಸಿದಾ ಗಲ್॥

ಕಂ॥ ಸುರಿವಲರಮಳೆಯೊಳಿರದ। ಬ್ಬರಿಪಾನಕರಾವದೊಳಗೆತಳ್ತಿವ ಭಕಂ। ಬೆರಸಮರಪುಷ್ಪಕಂ ಸುರುಚಿರರಜತಾಚಳಕೆ ಭರದಿಬಂದು ತ್ತಾಗಲ್॥ ೭೯

ವ॥ ಅಂತುಬಂದು ತಿರುನಾಳ್ಪೋವಮಾಹೇಶ್ವರಂ ಬೆರಸುಸಕಲಗ ಣಾನ್ವಿತಂ ಗಿರಿಜಾನಾಥನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಲ್॥

ಕಂ॥ ತಿರುನಾಳ್ಪೋವರ್ಗಮರೋ ತ್ಕರವಿಟ್ಟಿರಿವಡುತಿರಲ್ಕೆ ಗಣಪ ದಮಂಕೊ। ಟ್ಟುರುತರ ಗಣಯುತನೆನಿಸುವ, ಗಿರಿಜಾವರನೆಸೆವುತಿ ರ್ದನಾಸ್ಥಾಯಿಕಯೊಳ್॥ ೮೦

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮ ರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ತುಲಿಗೆರೆಯ ಪುರಾಧಿಪ ಶ್ರೀ

ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ
ಮಪ್ಪ ತ್ರಿಷಷ್ಠಿಪುರಾತನರಚಾರಿತ್ರದೊಳ್ತಿರುನಾಳ್ಪೋವ ಮಾಹೇಶ್ವ
ರಕಥಾವೃತ್ತಾಂತಂ ಷಡುತ್ತರಪಂಚಾಶದಾಶ್ವಾಸಂ

—ಶ್ರೀ—

ಐವತ್ತೇಳನೆಯ ಆಶ್ವಾಸಂ

ಅತಿಭಕ್ತಮಾಹೇಶ್ವರಕಥಾವೃತ್ತಾಂತಂ

ಚತುರಾಸ್ಯಂಪೊಗಳುತ್ತಿರ ಲತಿಭಕ್ತಂಗೊಲ್ಮೆಯಿಂದೆ ಗಣಪದವಿತ್ತ|
ಪ್ರತಿಮಂ ಸದ್ಗುಣನಿಳಯಂ| ಶ್ರುತಿನುತಸೋಮೇಶನೊಲ್ದು ಪಾಲಿಕೆ
ನಮ್ಮಂ|| ೧

ಅತಿರಮ್ಯವೃತ್ತಂ|| ಗಿರಿಜೇಶನಾವಾಸಮೆನಿಪ್ಪ ಚೋಳೋ| ರ್ವರೆಯ
ಲ್ಲಿ ಲಿಂಗಾಲಯದಿಂದೊಪ್ಪುವಂತಾ| ಹರಭಕ್ತರಾಗಾರಚಯಂಗಳೊಳ್ಪಿಂ
ತಿರುವೆಣ್ಣೆಯೆಂಬೂರೆಸೆವುತ್ತಮಿರ್ಕುಂ|| ೨

ಕಂ|| ಘನತರದಲಪೋರ್ಟಂಕ| ಬಿನಗದರ್ತಟಾಕ ಮಧಿಕಕ್ಷ
ಳಮಕ್ಷೇತ್ರಂ| ತೊನೆವಫಲತತಿಯೊಳೊಪ್ಪುವ| ವನಮೆಂಬಿವರಿಂದಮಾ
ಪುರಂ ಕರಮೆಸೆಗುಂ|| ೩

ಧನಿಕರ್ಭಕ್ತಸುಜನರ್ ಧನಿಕಪುರಿದೊಪ್ಪುತಿರ್ಪ ತತ್ಪುರದೊ
ಳಪ್ಪ| ವನಲಿಂಗಜಂಗಮಪ್ರಿಯ| ನೆನಿಸುತ್ತತಿಭಕ್ತ ನೆಂಬನೊರ್ವಂ ಮೆ
ರೆವಂ|| ೪

ಧರೆಯೊಳ್ ಶಿವಂಗೆಮುನ್ನೀ| ಪರಿಯೊಳ್ತನ್ನಂತಿರರ್ಪಿಸಿ ದಿರಿಲ್ಲೆನಿಪ|
ಚ್ಚರಿಯಪೊಸನಿಯಮಮಂತಾ| ಳ್ದಿರುತಿರ್ಪಂ ಪರಮಭಕ್ತಿಯಿಂದತಿಭ
ಕ್ತಂ|| ೫

ವ|| ಅಂತತಿಭಕ್ತಂ ಪೊಸತಪ್ಪನಿಯಮಮ ನೊಂದಂ ಮನದೊಳಾ
ಳ್ದು||

ಕಂ॥ ತಿರುವಣ್ಣೆಯೆಂಬತೊರೆಯೊಳ್। ಬೆರದಿಂಪ್ರೊಸಗಾಳಮಿಕ್ಕಿ ತೆಗೆದಾವಿಶಾನಂ। ಗಿರಿಶಂಗೆವೊದಲೊಳರ್ಪಿಸಿ। ವರನಿಯಮಮನೋತು ಸಲಿಸಿಬಳಿಕತಿಭಕ್ತಂ॥ ೬

ನಯದಿಂದತಿಭಕ್ತಂತ। ನ್ನಯನಿಯಮಮದಾಗಲೊಡನೆ ಬಳಿಕಾತಿಶುವ। ಣ್ಣೆಯೊಳಾಸುರದಿಂದನಿಮಿಷ। ಚಯಂಗಳಂಗಾಳದಿಂಪೆ ತೆಗೆವುತ್ತಿರ್ದಂ॥ ೭

ವ॥ ಕೊರವಂಗೋಜಳೆ ಸಣ್ಣಗ। ಣ್ಣನೊರವಂಕಾಗೆಂಡೆ ಹೆಗ್ಗಬುರಹೆಂ। ಗರಿಗಂ ಸಕ್ಕರೆಗಂ ಸಿಸಿಲ್ಪವಳವಾಯುಂಹೈದಲುಂಬಾಳೆಹೆಗ್ಗರಿಲುಂ ಕಿಲ್ಲಡಿಶಂಖವಾಯ ನರಿಲುಂಬಂಸಾನೆಮೂಗುಂಹರಲ್। ಮುಡಿಲುಂ ಪಂದಿಗನೆಂಬವಿರ್ಗ ದೆಗೆದನಾಭಕ್ತಂ ಮಹಾಲೀಲೆಯಿಂ॥ ೮

ಕಂ॥ ಅಂತಾವಿಶಾನ್ಗಳನೊದಗಿಸಿ। ಸಂತೋಷದಿನೆಯ್ದೆ ಮಾರಿದಾಧನದಿಂದಂ। ಕಂತುಹರಪದಭಕ್ತರ। ಪಂತಿಗಬೆಸಕೆಯ್ವುತಿರ್ದನೋತತಿಭಕಂ॥ ೯

ಪಲವುದಿನವೀಪ್ರಕಾರದ। ಛಲದಿಂಜಂಗಮಕೆ ಮಾಡುವತಿಭಕ್ತನುಮಂ। ಸಲೆಮೆರೆವೆನೆಂದು ಶಂಕರ। ನೊಲವಿಂದುಮೆಪೆರಸು ನಭದೊಳೋಲಗವಿತ್ತಂ॥ ೧೦

ವ॥ ಮತ್ತಮಿತ್ತಲದ ತೋಳ್ಕೆಣ್ಕೆತ್ತಲಿಂದಾವ ಲೇಸಪ್ಪುದೋ ಎನುತತಿ ಭಕ್ತಂ ನಿಚ್ಚಕಿನ ದದಿಂ ದೊಂದುದಿನಂ ಜಂಗಮಲಿಂಗದಪರಿಚೆಯಕ್ಕೆಂದು ತಿರುವಣ್ಣೆಯೆಂಬ ನದಿಯತ ಡಿಯೊಳ್ಕುಳ್ಳಿರ್ದಾಗಾಗಟ್ಟಿಗೆಯುಂಬೀಸಿಪಾಯ್ಕುಳ್ಕಾಗಳ್॥

ಕಂ॥ ಹರನನಿರೂಪದಿನವರ। ತ್ನರಚಿತಝುಷವೊಂದು ಗಾಳದೊಳ್ಸಿಲೆಹರುಷಾ। ತ್ತುರದಿಶಿವಲಿಂಗಕರ್ಪಿಸಿ। ಮರಳ್ದಡಿಗಡಿಗದೆಬರಲ್ಸಮರ್ಪಿಸುತಿರ್ದಂ॥ ೧೧

ಎನ್ನಯಶಿವಂಗೆತಕ್ಕುದು ರನ್ನದವಿಶಾನಿಂತಿದೆನುತೆ ಮಡಿಗಡಿಗೆಬರಲ್। ಮನ್ನಿಸಿಳಮರ್ಪಿಸುತಿ। ರ್ದಂನಗಜಾಪತಿಗೆ ಪಲವುಪೊಳ್ತತಿಭಕ್ತಂ॥ ೧೨

ಸಲೆಮುಗುಳ್ದು ಮುಗುಳ್ದು ಬರಲು। ಜ್ವಳಮಣಿಮಯಝುಷ ಮದೊಂದೆ ಒರಲಿತ್ತು ... ಭಕ್ತನ ... ಭಕ್ತನೋತುರೂಪು

ದೋರಿದನಾಗಳ್॥ ೧೬

ವನಮಯೂರವೃತ್ತ॥ ದೇವನದಿಕಂಪ್ರನನಲಾಕ್ಷ ಭುಜಗೇಂ ದ್ರಂ ಗ್ರೀವದವಿಷಂ ಭಸಿತವಸ್ತ್ರಗಜಚರ್ಮಂ। ಭೂವಿನುತಬಾಹುದಳ ವೈದ್ಯುವೊಗವೊಪ್ಪಲ್। ಪಾವನಶಿವಾಪತಿನಿಜಾಕೃತಿಯೊಳಿರ್ದಂ॥ ೧೪

ವ॥ ಅಂತುದಿವ್ಯರೂಪಂತೋರಿದ ಶಿವನಪದಕಮಲ ದೊಳ್ಪೊಗಳಸ್ಕೈ ಗಡಿದು ಕಣ್ಣಳಿಂದಶ್ರುವಾರಿ ಪೊಗರಿಡುತ್ತಿರಲತಿಭಕ್ತಂ ಪೆರ್ಚಿಪಿಗಿಕ್ಕ ಡುನೇಹವಿಂ ನೋಡುತ್ತಿರ್ಪಾಗಳ್॥

ಕಂ॥ ಪಿಡಿಪೆತ್ತಿಕುಳ್ಳಿರಿಸಿಪೆ। ಜ್ಜಡವಿಕರಂಮೆಚ್ಚಿ ತನ್ನನಿಯಮದ ಫಲಮಂ। ಬಿಡದತಿಭಕ್ತನಗುಣಮಂ।ಮೃಡನೊಲವಿಂ ನಂದಿನಾಥನೊ ಡನಿಂತೆಂದಂ॥

ಧರಣೀತಳದೊಳ್ಮನ್ನೀ। ಪರಿಯಮಹಾನಿಯಮದಿಂದ ಪೆನ್ನುಮು ನಿವನಂ। ತಿರೆಮೆಚ್ಚಿಸಿದ ಪರಾರೆನು। ತುರುಕರುಣದಿ ಶಂಭುಪೊಗಳು ತಿರ್ಪವಸರದೊಳ್॥

ಜನವಿನುತಕುಸುಮವರ್ಷದೊ। ಳನಿಮಿಷದುಂದುಭಿಯರವದೊ ಳೆಲ್ಲಂದಮಹಾ। ಘನಪುಷ್ಪಕದೊಳಗತಿಭ। ಕ್ತನನಿರಿಸಿಶಿವಾಥವಂ ನಿ ರೂಪಿಸಲಾಗಳ್॥ ೧೭

ಅತಿಭಕ್ತಂಬೆರಸುಮಹೋ। ಜ್ವತದಿವ್ಯವಿಮಾನವಖಿಳ ದೆಸೆಯುಂಬೆ ಳಗ। ತ್ತಾತುಳಿತಸಂಭ್ರಮದಿಂಸುರ। ತತಿಪೊಗಳಲ್ಕಾರಗಿರಿಗೆ ಬಂದು ತ್ತಾಗಳ್॥ ೧೮

ವ। ಅಂತುಬಂದತಿಭಕ್ತಂಬೆರಸುಗಿರಿಜೆಯಸಂಕೈಲಾಸ ಸಭಾಮಂ ಟಪದೊಳೆ ಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ವಾಚಸ್ಪತಿಪೊಗಳುತ್ತಿರೆ। ಖೇಚರರುಘೇಯೆಂದೆನುತ್ತಿರಲ್ಕತಿ ಭ ಕ್ತಂ। ಗಾಚಂದ್ರಮೌಳಿಕೊಂತುಕ ಮಂ। ಹಾಚಳಪದವಿತ್ತು ಮೆರೆದನಾ ನಂದಯಿಂಕೆಯೊಳ್॥ ೧೯

ಗದ್ಯ ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ ಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳತಿಭಕ್ತ ಮಾಹೇಶ್ವರಕಥಾವೃತ್ತಂ

ತ॥ಸಪ್ತೋತ್ತರಪಂಚಾಶದಾಶ್ವಾಸಂ||

...ಶ್ರೀ...

## ಐವತ್ತೆಂಟನೆಯ ಆಶ್ವಾಸಂ

## ಐಯಡಿಗಳ ಕಥಾವೃತ್ತಾಂತಂ

ಪರಮಶಿವಭಕ್ತಿಯಂತಾಳ್ದಿರುತಿರ್ಪ ಯ್ಯಡಿಗೆ ಮೆಚ್ಚಿ ಗಣಪದಮಂಸ| ತ್ಕರುಣದಿ ನಿತ್ತ ಮಹಾಮುನಿ| ಪರನುತಸೋಮೇಶನೊಲ್ದು ಪಾಲಿಕೆನಮ್ಮಂ|| ೧

ಘನಮಹಿಮೆವಡೆದ ಚೋಳಾ| ವನಿಯೊಳ್ವಾಸಪನಪುರ ಮನೇಳಿಸುತಂತಾ| ವಿನುತ ತಿರುವಣ್ಣರಂಬಾ. ಘನಪುರಮತ್ಯಧಿಕ ಜನಮನಾಂತೆಸೆದಿರ್ಕುಂ|| ೨

ವ|| ಮತ್ತಮಾಪುರದ ಪುರವಳಯದೊಳ್ನೀಲಕ್ಕೈರವಾಬ್ಜಮತ್ತಾಳಿವೃಂದದಿಂದೆ ಕಲ್ಲೋಲಜಾಲದಿಂ ತಟಾಕಾದಿಗಳ್ವಿರಾಜಿಸುತಿರ್ಪುದಂತುಮಲ್ಲದೆಯುಂ||

ಉದಾರವೃತ್ತಂ|| ಬೆಳೆದೊರಗುತ್ತಂ| ಕಳವೆಯ ಕೈಗಳ್| ಬಳಸಿತಕಪಂಕಂ ಗೊಳಿಸುತಮಿರ್ಕುಂ|| ೩

ಕಾಂಚನಮಾಲಾವೃತ್ತಂ|| ತಂಪಿನಸೊಂಪಿಂ| ದಂಪುರದುದ್ಯಾ| ನಂ ಫಲದೊಪ್ಪಿಂ| ಪೆಂಪಿನೊಳಿರ್ಕುಂ|| ೪

ಕಂ|| ಪಿರಿದೊಪ್ಪುವಣ್ಣರಂಬಾ| ಪುರದೊಳ್ಪಾರ್ಥಿವ ಕುಲೋದ್ಭವಂ ತಾನೆನಿಪಂ| ತ್ತಿರುವಿತ್ತದಿ ಸೈಯ್ಯಾಯಂದಿ| ಹರಪರಭಕ್ತಿಯನೆ ಧರೆಗೆ ಬೀರುತ್ತಿರ್ದಂ|| ೫

ವ|| ಅಂತತ್ಯಂತಭಕ್ತಿಯಿಂ ಜನದಿಂ ಭೂಪಾಳಂ ಸುಖದಿನಿರುತ್ತಿರ್ದೊಂದು ದಿವಸಂ ತನ್ನ ಮನದೊಳೊಂದು ಸುಕೃತಮಪ್ಪ ಕಾರ್ಯಮಂನೆನೆದು

ಕಂ|| ಪಿರಿದುಂ ಪೆರ್ಚಿದ ಸಂಪದಮುಂ| ಪರಬೋಳ್ಬೊರ್ಪದೆಯೊಳೀಶಜೀರ್ಣಾಲಯಮಂ| [illegible] ಪೆಲ್ಮೆಡಿಸುಸಂ| ನಿರುತ್ತಮಿಸುತ್ತಿರ್ತು

ನುಡಿವನ್ನೈಯಡಿಭೂಪಂ॥ ೬

ವ॥ ಅಂತುನುಡಿದುಶಿಲ್ಪಶಾಸ್ತ್ರವಿಶಾರದರ ಪ್ಪಾಚಾರ್ಯ್ಯರಂ ಬರಿಸಿಪರ ಮೋತ್ಸವದಿಂದೈಯಡಿಭೂಪಂ ಶ್ರೀರಮಟ್ಟಾಗಳ್।

ಕಂ॥ ಎಲ್ಲೆಲ್ಲಿಲಿಂಗಪೂಜೆಗ ಳಿಲ್ಲದಜೀರ್ಣಾಲಯಂಗಳಂ ಪೊಸತಪ್ಪಂ ತಲ್ಲಲ್ಲಿಮಾಡಿಪೂಜಿಸಿ॥ ಸಲ್ಲೀಲೆಯೊಳಿಪ್ಪತಿರ್ದ ನಯ್ಯಡಿಜಸದೊಳ್।

ವ॥ ಅಂತೀಪರಿಯೊಳ್ಸೋಳಡೇಶದೊಳೆಲ್ಲೆಲ್ಲಿ ಜೀರ್ಣಶಿವಾಲಯಂಗ ಳುಂಟಲ್ಲಲ್ಲಿಗೆ ಪೋಗಿಪೊಸತಪಂತೆ ಮಾಡಿಸುತತುಳಭಕ್ತಿಯಿಂದೈಯಡಿ ಭೂಪಾಳನಿರುತ್ತಮೊಂದುದಿವಸಂ।

ಕಂ॥ ಸುರುಚಿರಕಾಂಚನತತಿಯಿಂ॥ ಪರಗೃಹವೇಂದ್ರನಭೋಂತ ಮುಂಮುಟ್ಟಲ್ಕೆ। ದರದಿಂಮಾಡಿಸಿಭಕ್ತಿಯ॥ ಪರಸುನಿರೀಕ್ಷಿಸುತಮಿರ್ದ ನ್ನೈಯಡಿಭೂಪಂ। ೮

ವ॥ ಅಂತುನಿರೀಕ್ಷಿಸುತಯ್ಯಡಿ ಭೂಪಾಳಂ ತಚ್ಛಿವಾಲಯಮು ನಡ ದುರ್ದ ತನ್ನಕೆಂಗಳೆನಿತು ಕಾಣ್ಬನಿತರೂಗಳಂ ಶಿವಭಕ್ತರಿಗಿತ್ತೆಲ್ಲಿಂದೆ ಳ ಡು ಶಿವಲಿಂಗದಸಮೀಪಕ್ಕೆಯ್ತಂದು ಪದ್ಮಾಸನಮುನಲಂಕರಿಸಿ ಯೋಗ ಮೋಕ್ತಿಯಿಂ ವಿಭೂತಿರುದ್ರಾಕ್ಷೆಗಳಂತಾಳ್ದು ಜಲಗಂಧಾಕ್ಷತೆ ಪುಷ್ಪ ಧೂಪದೀಪನೈವೇದ್ಯ ತಾಂಬೂಲಮೆಂಬಷ್ಟ ವಿಧಾರ್ಚನೆಯಂಮಾಡಿಛ ತ್ರಚಾಮರ ದರ್ಪಣಪಾದುಕೆ ನೀರಾಜನದಕ್ಷಿಣಾ ಪುಷ್ಪಾಂಜಳಿಕ್ಷ ಮಾಪಣಪ್ರದಕ್ಷಿಣನಮಸ್ಕಾರಾತ್ಮಸಮರ್ಪಣ ವಿಸರ್ಜನವೆಂಬ ಷೋ ಡಶೋಪಚಾರಂಗಳೆಸೆಯಲ್ ಶಿವಲಿಂಗಾರ್ಚನೆಯಂಮಾಡಿ।

ಕಂ॥ ರಯ್ಯಡಿನಭವನನರ್ಚಿಸಿ॥ ಮೆಯ್ಯಿಕ್ಕಿನಮಃಶಿವಾಯ ಜಯಜ ಯಎನುತಂ॥ ದಯ್ಯಡಿಭಕ್ತಿರಸಂಮಿಗೆ! ಕೈಯಂಮುಗಿದಾಡಿ ಪಾಡಿನ ಲಿವುತ್ತಿರ್ದಂ। ೯

ವ॥ ಅಂತುಭಕ್ತಿರಸದಿಂದಾನಂದಮಯನಾಗಿ ನಲಿದಾಡು ವಯ್ಯಡಿಯಂ ಸದಾಶಿವಂನೋಡಿ ಯೆನ್ನಜೀರ್ಣಾಲಯಮುಮಂಮಾಡಿಸುವಲ್ಲಿತನ್ನಸರ್ವ ಧನಮುಂ ಸಲಿಸಿದನೆಂದು ಕರುಣಮುಂಮಾಡಿ।

ಕಂಜಡೆಯಿಡು ತುರುಬಾಂದೊರೆನೊಸ॥ ಲಿಡೆಯೊಳ್ಮರೆವರ್ಧ ಚಂ ದ್ರನಂ ಗದಭಸಿತಂ॥ ನಿಡಿದೋಳೆ ಪತ್ತೈದುವೋಗಂ॥ ಕಡುವೆರೆಯ ಲ್ಪಾರ್ವತೀಶನೊಪ್ಪಿದನಾಗಳ್ ೧೦

ವ|| ಅಂತೊಪ್ಪುವದಿವ್ಯಮೂರ್ತಿಯಂ ಕಂಡೆಯ್ಯಡಿಭೂಪಾಳಂ ಪಕವು ಹರುಷಪುಳಕಿತನಾಗಿ ಚರಣಕಮಲದೊಳ್ಸ್ಟೈಗೆಡೆದು ಪರವಶೀಭೂತನಾಗಿರಲ್ಕರುಣದಿಂಪಿಡಿದೆತ್ತಿ ಕುಳ್ಳಿರಿಸಿಪೆಯ್ದುಪವಿ ಕಡುನೇಹದಿಂವ್ಯಾಡಂಮುಂದಿರ್ದನಂದಿನಾಥಂಗಿಂತೆಂದಂ!

ಕಂ|| ಪಿರಿದಸ್ನೆಯಜೀರ್ಣಾಲಯ|ಕಿರದೊಲವಿಂತನ್ನವಿತ್ತಮಂಸಮೆಮಿಸದೀ| ಪರಮಶಿವೈಕ್ಯಂಗಾದೊರೆ, ಪರಿಕಿಪೊಡೀಧರೆಯೊಳೆಂದುನುಡಿದಂಗಿರಿಶಂ|

ವ|| ಎಂದುಶಿವಂಕೊಂಡಾಡುತ್ತಂ ತಾಂಬರಿಸಿದದಿವ್ಯವಿಮಾನದೊಳಯ್ಯಡಿಯಂ ಕುಳ್ಳಿರಿಸಿನಿಯಾಮಿಸಲ್ಕಾಗಳ್|

ಕಂ|| ಹರಭಕ್ತನೆನಿಸುವಯ್ಯಡಿ ಪೆರಸಮರ ಭೇರಿವೊಳಗೆಮಣಿಪುಷ್ಪಕವಂ| ಬರತಳಮಂನೆರೆ ಬೆಳಗು, ತ್ತಿರಪೇಳ್ತಂಪುತ್ತು ರಜತಶೈಲಕ್ಕಾಗಳ್| ೧೨

ವ|| ಅಂತಯ್ಯಡಿಮಾಹೇಶ್ವರಂಗೂಡಿ ಸಕಲಪ್ರಮಥಗಣಂಬೆರಸುಗಿರಿಜಾರಮಣನೊಡ್ಡೋಲಗಂಗೊಟ್ಟು ಕುಳ್ಳಿದಾಗಳ್|

ಕಂ|| ಜನನುತಭಕ್ತರಕಿಂಕರ, ನೆನಿಪಯ್ಯಡಿಗಳ್ಗೆ ಪರಮಾಣಪದಮಂನೆ| ಟ್ಟನೆಕೊಟ್ಟು ಮೆರೆದಭವನತ್ಯುದಾರದಿ ನೆಸೆವುತಿರ್ದನಾಸ್ಥಿ ಮಿಕೆಯೊಳ್| ೧೪

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀ ಪುತ್ತುಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಠಿಪುರಾತನರ ಚಾರಿತ್ರದೊಳಯ್ಯಡಿಮಾಹೇಶ್ವರಕಥಾವೃತ್ತಾಂತಂ ಅಷ್ಟೋತ್ತರ ಪಂಚಾಶದಾಶ್ವಾಸಂ||

— ಶ್ರೀ —

## ಐವತ್ತೊಂಭತ್ತನೆಯ ಆಶ್ವಾಸಂ

### ಅಡವಳೆಯ ಪೆರುಮಾಳರ ಕಥನಂ

ಪ್ರಿಯದಿನಡವಳೆಯ ಪೆರುಮಾ| ಳೆಯ ಭಕ್ತಿಗೆ ಮೆಚ್ಚಿ ಪರಮಗಣಪದವಿ
ತ್ತ| ಕ್ಷಯಮೂರ್ತಿ ಭಕ್ತಜನಭವ| ಭಯಹರ ಸೋಮೇಶ ನೊಲ್ದು ಪಾ
ಲಿಕೆ ನಮ್ಮಂ|| ೧

ಕಂಗೊಳಿಪ ಚೋಳಧರಿತ್ರಿಯೊಳ್| ಲಿಂಗಾಯತನಗಳಿಂ ಮಹಾಭ
ಕ್ತಾಗಾ| ರಂಗಳಿನನಿಶಂ ಪಿಂ| ಪಿಂಗದೆ ತಿರುನಾಗಪಟ್ಟಣಂ ಕರಮೆಸೆ
ಗುಂ|| ೨

ಮತ್ತಮಲ್ಲಿ

ಪ್ರಿಯಮಂ ಭಕ್ತರ್ಗೀವುತೆ| ಜಯದಿಂ ತಿರುನಾಗಪಟ್ಟಣದೊಳೀಶ್ವ
ರಭ ಕ್ತಿಯೊಳಿನಡವಳೆಯ ಪೆರುಮಾ|ಳೆಯೆನಿಪ್ಪವನೀಶ ನೆಸೆವುತಿರ್ಪಂ
ಜನದೊಳ್|| ೩

ವ|| ಅಂತು ಸತ್ಕೀರ್ತಿಯಿಂದೆಸೆವುತಿರ್ದ ಡವಳೆಯ ಪೆರುಮಾಳೆ
ಮಾಹೇಶ್ವರಂ ತ್ರಿಕಾಲದೊಳ್ಪರಮಭಕ್ತಿಯಿಂ ಶಿವಲಿಂಗಾರ್ಚನೆಯಂ
ಮಾಡುತ್ತಂ ದಿನದಿನದೊಳ್ಬಂದ ಲಿಂಗವಂತಮಾಹೇಶ್ವರರ್ಗಿಷ್ಟಾರ್ಥ
ಸಿದ್ಧಿಯಂ ಕೊಟ್ಟು ತುಷ್ಟಿವಡಿಸುತಂ ಹರುಷದಿಂದಿರ್ದನಂತುಮಲ್ಲದೆ
ಯುಂ||

ಉ|| ಆನತಪಂಗೆ ಸಂಪದದ ಪೆರ್ಚುಗೆಯಿಂ ಶಿವಭಕ್ತಿಯೇಳ್ಗೆಯಿಂ|
ದಾನದ ಪೆರ್ಮೆಯಿಂ ಸದೃಶಮಾಗಿ ಸರಾಗದಿ ತತ್ಪುರಾಂತದೊಳ್ಬಾನು
ತ ಕೀರ್ತಿವೆತ್ತು ಧನಪಾಲಸಮಾಖ್ಯೆಯ ವೈಶ್ಯನೊರ್ಬನಂ| ಭೋ
ಸಿಧಿಪ್ರೋಲ್ಲಭೀರಗುಣಮಂ ನೆರೆಬೀರುತಮಿರ್ಪ ನಾವಗಂ|| ೪

ವ|| ಅಂತೀಪರಿಯೊಳ್ತಿರು ನಾಗಪಟ್ಟಣದೊಳಡವಳೆಯ ಪೆರುಮಾಳೆ
ಯೆಂಬರಾಜಂಗೆ ಮಿತ್ರನೆನಿಸುತ್ತಂ ಧನಪಾಲನೆಂಬ ವ್ಯವಹಾರಿ ಸದ್ಭಕ್ತಿ
ಯಿಂ ಲಿಂಗಜಂಗಮಂಗಳ್ಗೆ ನಾನಾಪರಿಯಿಂ ಬೆಸಕೆಯ್ವುತಿರುತಿರ್ಪನ್ನೆ
ಗಂ||

ಕಂ|| ಮಳೆಯುರತ ಚೋಳಧರೆಯೊಳ್| ಬೆಳೆಯಿಲ್ಲದೆ ಧಾನ್ಯಮಡಗಿ ಬ
ರನಾಗಿ ಜನಂ| ಬಳವಳಿದು ಪೊಟ್ಟೆಗಿಲ್ಲದೆ| ಕಳವಳದಿಂ ಬಾಯಬಿಡುತಮಿ
ರ್ಪವಸರದೊಳ್|| ೫

ಅದನೀಕ್ಷಿಸಿ ಧನಪಾಲಂ ಮದನಾರಿಯ ಭಕ್ತಜನಮನೀ ಬರನೋಳ್ಪೋ
ಡಿದರ್ಥಾನ್ವಿತ್ತು ಸಂತಸ| ದೊದವಿಂದಿರ್ಪಂತೆ ಮಾಳ್ಪೆನೆಂದೆನುತಿರ್ದಂ||

ವ|| ಅಂತಾ ಬರನೊಳಾ ಚೋಳಮಂಡಲದೊಳೆಲ್ಲಿಲ್ಲಿ ಬಡತನಂಪತ್ತಿ ರ್ಪ ಶಿವಭಕ್ತಜನಮುಂ ತಾನಿರ್ಪ ತಿರುನಾಗಪಟ್ಟಣಕ್ಕಂ ಬರಿಸಿ ಮನೆಗಳಂ ಕೊಟ್ಟು ಸದ್ವಿನಯದಿಂ ಮೂರುಸಾಸಿರ ಕಣಜದ ಭತ್ತಮನಿಕ್ಕಿ ಸಂತಸಂಬಡಿಸುತ್ತಿರ್ದನಂತುಮಲ್ಲದೆಯುಂ||

ಕಂ|| ಅನಿತಕ್ಕೆ ಚೋಳಧರೆಯೊಳ್| ಘನವೃಷ್ಟಿಯದಾಗೆ ಬರನಡಂಗ
ಭಕ್ತ| ರ್ಗನ್ನದಯದಿಂದುಡಲಿತ್ತಾ ಧನಪಾಲಂ ಕಳುಪಲೆಂಬ ಬಗೆಯಿಂ
ಫಿರ್ದಂ|| ೭

ವ|| ಅಂತಾ ಧನಪಾಲಂ ಬರದೊಳ್ ಭಕ್ತರಬಳಗಕ್ಕೆ ಮೂರುಸಾಸಿರಕಣಜದ ಭತ್ತಮನಿಕ್ಕಿ ಸಂತಸಂಬಡಿಸಿ ಕಳುಪುವಸುದ್ದಿಯಂ ಚರರಿಂ ಕೇಳ್ದ ಡಳವೆಯ ಪಿರುಮಾಳೆರಾಜಂ ಸಂತಸಮನೆಯ್ದಿ ತಲೆದೂಗುತ್ತಂ ಹಾರೈಸಿ ತತ್ಪುಣ್ಯಮೆನಗೆ ದೊರಕದಾದುದೆನುತ್ತಂ ಖತಿಗೊಂಡು ಮನದೊಳ್ನೆನೆದಾಗಳ್||

ತರಳವೃತ್ತಂ|| ಹರನಭಕ್ತಜನಕ್ಕೆ ತದ್ಧನಪಾಲಕಂನೆರೆ ಮೂರುಸಾ|
ಸಿರಕಣಂಜದಭತ್ತಮಂ ಬರದಲ್ಲಿಸಲ್ಮೆಯೊಳಿತ್ತನಿ| ರ್ಭರದಿ ಸಾಧಿಸಿ
ಕೊಂಡ ಪುಣ್ಯಮನೆನ್ನ ರಾಜ್ಯಮನೆಯ್ದೆಕೊ| ಟ್ಟರದೆ ಕೊಂಬೆನೆನುತ್ತೆ
ತಾಂ ಪೊರಮಟ್ಟನಾ ನೃಪನರ್ಥಿಯಿಂ|| ೮

ವ|| ಅಂತು ಪೊರಮಟ್ಟಡಳವೆಯ ಪಿರುಮಾಳೆರಾಜಂ ಬರಲ್ಧನಪಾಲನಾ ದರಸಿ ತನ್ನ ಮನೆಯೊಳಿಯಿಂ ಕೊಡಗೊಂಡೊಯ್ದು ಸದ್ಭಕ್ತ ತಿಂಥಿಣಿಯೊಳ್ಕುಳ್ಳಿರಿಸಲಾಗಳಂತೆಂದಂ||

ಕಂ|| ಎಲೆ ಧನಪಾಲಕ ನಿನ್ನಯ| ನಿಳಯಕ್ಕಾಂ ಬಂದು ದರ್ಕೆ ನೀನಾ
ಸೇನಂ| ನಲವಿಂದೆ ಬೇಳ್ಪೆನದನೀ| ಯಲೆವೇಳ್ಕೆನಗೆಂದು ನೃಪತಿ ಕೈಮುಗಿ
ದಿರ್ದಂ|| ೯

ವ|| ಅಂತಾ ನೃಪತಿ ಕೈಮುಗಿಯಲ್ದಾಕ್ಷಿಣ್ಯಕ್ಕೆ ಸಿಕ್ಕಿ ದೇವರೇನಂ ನಿರೂಪಿಸುವಿರದಕ್ಕೆ ಪಸಾದವೆನುತ್ತಂ ಕೈಕೊಂಡಾಗಳ್||

ಚಂ|| ಪಿರಿಪಹುದೆನ್ನ ರಾಜ್ಯದೊದವಂ ನೆರೆಕೊಟ್ಟಪೆನೊಲ್ದು ನಿಚ್ಚ
ಮು| ಚ್ಚಳಿಗೆ ಮೂರುಸಾಸಿರ ಕಣಂಜದಭತ್ತಮನೆಯ್ದೆ ಲಿಂಗ| ಭ

ಕ್ತರಬಳಗಕ್ಕೆ ಕೊಟ್ಟಘನಪುಣ್ಯಮನೀವು| ದೆನಲ್ಕ್ನೃಪಂಗೆಭಾ| ಸುರ
ಘನಪಾಳಕಂ ಛರದಿಧಾರೆಯ ನೋಲ್ದಿರೆದಿತ್ತನಲ್ಕರಿಂ||

ಕ|| ಧನಪಾಲನಪುಣ್ಯಮನೆ| ಯ್ದನುನಯದಿಂದಾರೆಗೊಂಡು ನಿಜ
ರಾಜ್ಯಮನಿ| ತ್ತಾನೃಪಂಪುರಮಂ ಪೊರಮಡ| ಲನುಗೆಯ್ಯಲ್ ಶಂಭು
ರೂಪುದೋರಿದನಾಗಳ್|| ೧೧

ಮಿರುಪಜಡೆಪೇವನದಿಶಿಖಿ| ಕರಭುಜಗೇಂದ್ರಂ ನಗೇಂದ್ರನಂದನೆ
ಭಸಿತಂ| ಪೆರೆಪಂಚಮುಃಖಂ ದಶಭುಜ ಮೆರೆಯಲ್ನಿಜಮೂರ್ತಿಯಿಂ
ದಮೊಪ್ಪಿದನೀಶಂ|| ೧೨

ವ|| ಅಂತಾದಿವ್ಯಮೂರ್ತಿಯಂಕಂಡು ಭಯಚಕಿತಹೃದಯನಾಗಿ
ಪರಮಾನಂದದಿಂ ಭಕ್ತಿಮಿಗೆಚರಣದೊಳ್ಸೈಗೆಡೆದು ಪರವಶದೊಳಿರ್ಪ
ಡಘುವೆಯ ಪೆರುಮಾಳೆಯಂ ಕಾರುಣ್ಯದಿಂಪಿಡಿದೆತ್ತಿ ಕುಳ್ಳಿರಿಸಿಬೋಳೈಸು
ತ್ತಂ ಗಿರಿಜೇಶಂನು ೨ನಾಥಂಗಂದಿಂತೆಂದಂ||

ಕಂ|| ಜಪದಿಪನ್ನಿಯ ಭಕ್ತನೋವಿದಫಲಮಂ ಮಾರುಗೊಂಡುನಿ
ಜರಾಜ್ಯಮನಿ| ತ್ತುದಿತಗುಣಾಂಬುಧಿಯೆ ನಿಪೀಸದಮಳಭಕ್ತಂಗವಾ
ರ್ಸಮಾನಂಧರೆಯೊಳ್|| ೧೩

ವ|| ಎಂದುಕೊಂಡಾಡಿ ಖಂಡೇಂದುಧರಂ ತಾಂಬರಿಸಿದದಿವ್ಯವಿಮಾನ
ದೊಳಡಘುವೆಯ ಪೆರುಮಾಳಿಮಾಹೇಶ್ವರನಂ ಕುಳ್ಳಿರಿಸಿಪುಣ್ಯಮಂ ಮಾ
ರುಗೊಟ್ಟ ಧನಪಾಲನುಮಲ್ಲಿರ್ದ ಶರಣಜನಮುಂನೋಡಿ ಬೆರಗುವಡೆ
ದು ನಿರೀಕ್ಷಿಸುತ್ತಿರಲ್ಕಿಯಾಮಿಸಲ್ಕಾಗಳ್||

ಕಂ|| ಅಂತಾಭಕ್ತಂಬೆರಸುನ| ಭೋಂತಮನುರೆಬೆಳಪರಸ್ಪುಪ್ಪಕ
ಮುಮರ| ರ್ಸಂತಸದಿಂಪೊಗಳುತ್ತಿರೆ ಕಂತುಹರಾಚಳಕೆ ಬಂದುದಾನ
ಕರವದಿಂ|| ೧೪

ವ|| ಅಂತುಬಂದಡಘುವೆಯ ಪೆರುಮಾಳಿಯುಮ್ಪೆರಸು |ಸಕಲಗುಣಾ
ನ್ವಿತಂ ಫಣಿಕುಂಡಲ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ನೆಗಳ್ದುಡಘುವೆಯಪೆರುಮಾ| ಳಿಗೆಗಣಪದಮಂ ಸಮಸ್ತ ದಿವಿಜ
ಗಣಂನೆ| ಟ್ಟನೆಪೊಗಳುತ್ತಿರೆಕೊಟ್ಟಾ| ಮೃಗಧರಧರ ನೆಸೆವುತಿರ್ದನಾ
ಸ್ಥಾಯಿಕೆಯೊಳ್|| ೧೫

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ

ಘುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ ದೊಳಗೆ ಘವೆಯುಪೆರುಮಾಳೆ ಮಹೇಶ್ವರಕಥಾವೃತ್ತಾಂತಮೇಕೋನಷಷ್ಟಿತಮಾಶ್ವಾಸಂ॥

—ಶ್ರೀ—

## ಅರುವತ್ತನೆಯ ಆಶ್ವಾಸಂ

## ನರಶಿಂಗಮೊನೆಯರಕಥಾವೃತ್ತಾಂತಂ

ಹರಿಧಾತಪೋಗಳುತ್ತಿರೆ। ಕರ್ಣಾದಿನರಸಿಂಗ ಮೊನೆಯರಾಜಂಗೆಸಾದರದಿಂಗಣಪದವಿತ್ತಾ ನಿರುಪಮ ಸೋಮೇಶನೊಲ್ದು ಪಾಲಿಕೆನಮ್ಮಂ

ಪಿರಿದೆಸೆವಾ ತಿರುನಾವ। ಲ್ಪುರದೊಳ್ನರಸಿಂಗ ಮೊನೆಯರಾಜಂ ಸದ್ಭಕ್ತರನೊಲವಿಂ ಪಾಲಿಸ। ತಿರುತಿರ್ದಂ ಬಹುಳತರದಸಂಪದದಿಂ॥ ೨

ವರಜಂಗಮಮಂ ಪೆರದುದನಾ। ದರದಿಂದೀವೃತ್ತಿ ಬಹುಳತರಯಶದಿಂದಂ। ನರಶಿಂಗಮೊನೆಯರಾಜಂ। ಪರಮೋತ್ಸವದಿಂದಮಿರ್ದನದನೇವೇಳ್ವೆಂ॥ ೩

ವ॥ ಅಂತೀಪರಿಯೊಳ್ಜಂಗಮಮುಮಂ ಲಿಂಗಮೂರ್ತಿಗಳೆಂಬ ಭಾವದಿಂ ತನುಮನಧನಮೆಂಬಿವರೊಳ್ವಂಚನೆಯಿಲ್ಲದೆಯುವ ಬೇಡಿದುದನೀವುತ್ತಿರಲ್ಪುಣ್ಯದ ಬೆಳಸಿಗೆ ಕೈಲಾಸದೊಳ್ಪಸರಿಸಲ್ ಶಿವಂವಿಸ್ಮಿತನಾಗಿಮಕೆಯುಳ್ಮನಂದಂದಾಗಳ್॥

ಕಂ॥ ಹರಮರಿಕೌತುಕದಿಂದಂ। ಪರವಿಟವೇಷಮನೆತಾಳ್ದು ರಜತಾಚಳದಿಂ। ಧರದೆ ತಿರುನಾವಲೂರಂ। ಹರುಷಂಮಿಗೆಪೊಕ್ಕು ವೀಧಿಯೊ ೪
ಳ್ಬರುತಿರ್ದಂ॥

ಮ॥ ನಸುಗರ್ಪಂತಲೆದಿಪ್ಪ ವಿಾಸೆಗಳಿನುದ್ಯತ್ಕೇಶಪಾಶಂಗಳಿಂ। ಪೊಸಕಾಶಾಂಬರದಿಂ ಲಸದ್ಭಸಿತದಿಂದೊಪ್ಪುತ್ತೆ ಸದ್ಗೀತಮಂ। ರಸಮೆತ್ತೊಲ್ದಿಕೆ ಪಾಡುತಂತ್ರಿಪುರಿಯಿಂದಂ ಬಾಜಿಸುತ್ತಂದುತಾ। ನಸಮಾ

ಕ್ಷಂ ವರಜಂಗಮಮಾ ಕೃತಿಯೊಳೀಳ್ತಂದಂ ಘನೋತ್ಸಾಹದಿಂ॥ ೫

ವ॥ ಅಂತುವಿಟವೇಷದೀಶಂ ನರಸಿಂಗಮೋನೆಯ ರಾಜನರಮನೆಗೆ ಬ ಕಲ್ಕಂಡಿದಿರೆದ್ದರ್ ಸಾಷ್ಟಾಂಗವೆರಗಿಪೊಡಮಟ್ಟುತಂಸುರತ್ನಪೀಠದೊಳ್ಕುಳ್ಳಿರಿಸಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡು ನಿಜ ಸತಿಯರ್ತಂದ ಮಂಗಳಾರತಿಗಳನೆತ್ತಿ ಸದ್ವಿನಯದಿಂದಿಂತೆಂದಂ॥

ಕಂ॥ ವರಮುನಿಪತಿ ನೀವಿಲ್ಲಿಗೆ। ಭರದಿಂದೇಳ್ತಂದಿರಾವುದಿಷ್ಟಮದಂ ಸಾ। ದರದಿಂಬೇಳ್ಪುದುಮಾಳ್ಪೆಂ। ನಿರುತಮೆನುತೆಱಗುತು ನುಡಿದನಾ ಭೂಪಾಲಂ॥ ೬

ವ॥ ಎನಲಾಮಾತಂಕೇಳ್ದು ವಿಟರೂಪಿನಶಿವನಿಂತೆಂದಂ॥

ಕಂ॥ ಕ್ಷಿತಿನಾಥಂಕೇಳ್ವುದುನಾ। ವತಿವ್ಯಸನಿಗಳಂತದಕ್ಕೆಸಮುಯುದ ಪೊಸ್ನಂ। ಮತಿಮಿಗೆನೀನೀಸಿತೆಱಪಯಿಾ ಕ್ಷಿತಿಯೊಳ್ನೀಂದಾನಿಯೆಂದುನುಡಿದಂಮುನಿಪಂ॥ ೭

ಕಂ॥ ಎನಲಾಮಾತಂಕೇಳ್ದಾ। ಜನಪತಿಸತ್ಪ್ರೀತಿಯಿಂದೆಕೈಕೊಂಡು ಮಹಾ। ಘನತರಭಂಗಾರಮನಾ। ದನುನಯದಿಂ ಕುಹಕವೇಷದೀಶಂ ಗಿತ್ತಂ॥ ೮

ವ॥ ಅಂತೀಯಲ್ಕುಹಕವೇಷದೀಶಂ ಮನದೊಳ್ಮೆಚ್ಚಿ ನಿಜ ರೂಪುದೋರಿದನಾಗಳ್॥

ಕಂ॥ ಪರಜಡೆಶಿಖಿಶಶಿಬ್ಬಾಂದೊರೆ ಸರುಚಿರಜಪಮಾಲೆಡಮರುಗಂ ಗಜದಜಿನಂ। ಪಿರಿದೆಸೆವ ಪಂಚಮುಖದಿಂ। ಗಿರಿಶಂನಿಜದಿವ್ಯರೂಪಿನಿಂ ನಿಂದಿರ್ದಂ॥ ೯

ವ॥ ಅಂತಾದಿವ್ಯಮೂರ್ತಿಯಂಕಂಡುಭಯ ಚಕಿತಹೃದಯನಾಗಿ ಪದಕಮಲದೊಳ್ಪೊರಳುತ್ತಿರ್ಪ ನರಸಿಂಗಮೋನೆಯರಾಜನಂ ಪಿಡಿದೆತ್ತಿ ಕುಳ್ಳಿರಿಸಿ ಬೋಳೈಸುತಂ ಸದಾಶಿವಂನಂದಿನಾಥಂಗಂದಿಂತೆಂದಂ॥

ಕಂ॥ ಪಿರಿದುಂಜೀವಮೆನಿಪ್ಪುರು। ತರವಿತ್ತಮನೆನಗೆ ಭಕ್ತಿಮಿಗಲಿತ್ತ [illegible] ಪ ಠಿಕಿಪೊಡಿವನಲ್ಲದೆಮಾ। ತ್ತಿರಪನುತಂ ನಂದಿಗೆಂದನಂದಗಜೇಶಂ॥ ೧೦

ವ॥ ಎಂದುಕೊಂಡಾಡುತ್ತಿರಲಿತ್ತಲ್

ಕಂ॥ ಪಿರಿದುಂಭಕ್ತಿಯೊಳೊಪ್ಪುವ। ವರಯುಸ್ವಜ್ಞಾನಿ ಜಡೆಯನಾರ

ಗರ್ಗಂಸ| ತ್ಕರುಣದಿಗಣಪದವಿತ್ತಾ' ನಿರುಪಮಸೋಪೋಕನೊಲ್ದುಪಾ
ಲಿಕೆನಮ್ಮಂ|| ೧೧

ನರಸಿಂಗವೊಡೆಯನೃಪಗಂ| ಗಿರಿಶಂನಿಜದಿವ್ಯಮೂರ್ತಿದೋರಿದು
ದಂಕೇ| ಲ್ದಿರದಾದಂಪತಿಗಳ್ಕಡು | ಭರದಿಂಪೆಯ್ತಂದರುತ್ಸವಂಮಿಗಲಾ
ಗಳ್|| ೧೨

ಪರವಶದಭಕ್ತಿಯಿಂದಂ ಪರಮಾನಂದಾಶ್ರುವಾರಿನಯನದಿನುಣ್ಮು
ತ್ತಿರೆ ತದ್ದಂಪತಿಗಳ್ಕಂ| ಕರನಂಕಂಡುರ್ವಿಭರದಿಪಡೆಯೊಳ್ಪ್ವರಲ್ಕೆ
ವ|| ಅಂತಡಿಯೊಳ್ಪೊರಳುತ್ತಿರ್ದ ತದ್ದಂಪತಿಗಳಂನಾಂ ದರನಂಪೆತ್ತ
ತಾಯ್ತಂದೆಗಳೆಂಬ ಕರುಣದಿಂಪಿಡಿದೆತ್ತಿತಾಂಬರಿಸಿದ ದಿವ್ಯಪುಷ್ಪಕದೊ
ಳ್||

ಕಂ|| ನರಸಿಂಗವೊಡೆಯರಾಜಂ| ಬೆರಸೂದಂಪತಿಗಳಂಮುಕಾನಕರ
ವೆದೊಳ್| ಪರಮಣಿಪುಷ್ಪಕದೊಳ್ಕು ಳ್ಳಿರಿಸಿದನಗಜಾವರಂಮುದಂಮಿ
ಗಲಾಗಳ್||

ವ|| ಅಂತುಕುಳ್ಳಿರಿಸಿ ಪರಮಕರುಣದಿಂಗಿರಿಶಂ ನಿಯಾಮಿಸಲ್ಕಾಗಳ್

ಕಂ|| ಸುರರಲರಮಳೆಯನೊಲವಿಂ| ಸುರಿಯಲ್ ನವರತ್ನ ಖಚಿತದಿ
ವ್ಯವಿಮಾನಂ| ಹರಭಕ್ತರ್ವೆರಸಾಗ| ಲ್ವರರಜತಾಚಳಕೆಬಂದುದುತ್ಸವ
ದಿಂದಂ|| ೧೪

ವ|| ಅಂತುತದ್ಭಕ್ತರ್ವೆರಸದ್ರಿಜಾರಮಣಂವೀರಭದ್ರಾದಿಗಣಾನ್ವಿತಂ
ಕೈಲಾಸಸಭಾಮಂಟಪದೊಳೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ|| ಪರಮಾನಂದದಿಸುರಖೇ| ಚರತತಿಪೊಗಳಲ್ಕೆ ಕರುಣದಿಂದಂತಾ
ಗಳ್| ನರಸಿಂಗವೊಡೆಯನೃಪಗಂ | ಗಿರಿಶಂಗಣಪದವನಿತ್ತನತುಳೋ
ತ್ಸವದಿಂ|| ೧೫

ವ|| ಮತ್ತಮನಂತರಂ||

ಕಂ|| ನಗಧರನತಿಮುದದಿಂದಂ| ಪೊಗಳಲ್ಕಾ ಜಡೆಯನಾರಗಂ'ಯುಸ್ವ
ಜ್ಞಾ| ನಿಗೆಗಣಪದಮಂನಲವಿಂ| ದಗಜಾವರನಿತ್ತುಮೆರೆದನಾಸ್ವಾಮಿಕೆ
ಯೊಳ್|| ೧೬

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪಾಲಿಗೆರೆಯ ಪುರಾಧಿಪಶ್ರೀಸೋ

ಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳ್ನಿರಸಿಂಗಮುನೆಯುಮಾಹೇಶ್ವರನಜಡೆಯನಾರಯಿಸೃಜಜ್ಞಾನಿದೇವಿಯರ್ಕಳ ಕಥಾವೃತ್ತಾಂತಂ ಷಷ್ಟಿತಮಾಶ್ವಾಸಂ ...ಶ್ರೀ...

ಅರುವತ್ತೊಂದನೆಯಆಶ್ವಾಸಂ

ಕಾರಿಕಾಲಿಮ್ಮೆಗಳವೃತ್ತಾಂತಂ

ವರಮುನಿನಿಕರಂಪೊಗಳಲ್। ಕಿರದಿಂನಡೆದೆಸೆವಕಾರಿಕಾಲಿಮ್ಮೆಗೆಯೊ। ದರದಿಂಗಣಪದವಿತ್ತಾ। ನಿರುಪಮಸೋಮೇಶನೊಲ್ದುಕಾಲಿಕೆನಮ್ಮಂ

ನೆಗಲ್ದಿಸೆವಚೋಳಧರೆಯೊಳ್। ಗಗಣಿತಭಕ್ತಾಲಯಂಗಳಂಶಿವಗೃಹದಿಂ। ಬಗಮಿಗೆನೋಳ್ಪೊಡೆದೃಷ್ಟಿಗ। ಸೊಗಯಿಸುತಂ ಕಾರಿಕಾಲಿನಿಪ್ಪುರಿಕರ್ಣಂ॥ ೨

ಶಿವಭಕ್ತಿಗಿಕ್ಕೆದಾಣಂ। ಶಿವಭಕ್ತರಜನ್ಮಭೂಮಿ ಶಿವಭಕ್ತರಸ್ಸಂದ್ಭವನಂತಾನೆನಿಸುತ್ತೊ। ಪ್ಪುವಕಾರಿಯಕಾಲಿಗಾವಪುರವೆಣಧರೆಯೊಳ್ ಮತ್ತಮಾಪುರದೊಳ್॥

ಪರಿಕಿಪೊಡೆಭಾಗ್ಯದೊಲವಿಂ। ಸಿರಿಯುಂರೂಪಿಂಪೆರೆತಿಯು ನೂರ್ಜಿತಕಳೆಯಿಂ। ಸರಸತಿಯಂ ಪಳಿವತ್ತಂ। ಪಿರಿದೊಪ್ಪಿಂಕಾರಿಕಾಲಮ್ಮೆ।ರಿತಿ ರ್ದಪ್ಪಳ್॥ ೪

ವ॥ ಅಂತಾಕಾರಿಕಾಲಿಮ್ಮೆ ನಿಜಪತಿಭವಿಯಾಗಿರಲ್ತಾನತಿ ಭಕ್ತೆಯಾಗಿ ತನುಧನಮುನಮೋಳ್ವಂಚನೆಯಿಲ್ಲದೆಬಂದ ಶಿವಭಕ್ತರ್ಗೆಗುಪ್ತದಿಂಬೆಸಕೆಯ್ವುತ್ತಂ ಕಾಲಮಂಕಳಿಸುತ್ತಿರಲೊಂದು ದಿವಸಂ ತನ್ನಪತಿಯೆರಡು ಮಾವಿನಪಣ್ಣಳಂ ತಂದಿತ್ತಿರ್ದ॥

ಕಂ॥ ವರಚೂತಫಲಂ ಗಳಬೈತಿಲಸಲ್ ಶಿವನಂದುಕಾರಿಕಾಲಮ್ಮೆಯುಮಂ, ದಿರಕೇಲ್ತರಲಂತಾಗ। ಭರದಿಂದತಿಭಕ್ತಿಯಿಂದ ಮಾನತೆಯಾದಳ್ ೫

ವ॥ ಅಂತಾನತೆಯಾಗಿ ಕೈಗೊಟ್ಟೊಳಯಿಂಕೆ ಬಿಜಯಂಗೆಯ್ಸಿತಂದು ಪೀಠಮನಿಕ್ಕಿ ಕುಳ್ಳಿರಿಸಿ ಮತ್ತಮಾಗಳ್॥

ಕಂ॥ ಚರಣಪ ಕ್ಷಾಳನೆಗೆ| ಯ್ದಿರದಾಗಳತಿಭಕ್ತಿಯಿಂದೆ ಪಾದೋದ ಕಮಂ| ಧರಿಯಿಸಿತತ್ಪತಿತಂದಾ| ವರ ಚೂತದ ಫಲಮನೊಲವಿಂನಿದಂ ಕೊಟ್ಟಳ್॥ ೬

ವ॥ ಅಂತುಕೊಟ್ಟು ದೇವಕಾರ್ಯೋಗಿಪುದೆನಿಸ್ಕವರಕಾರ್ಯೋಗಿಸಿಪೋಪುದಂ ತತ್ಪತಿಕಂಡು ಮನದೊಳ್ಕೋಪಮಂತಾಳ್ದು ಬಂದೊಳಗಂಪೊಕ್ಕು ಕುಳ್ಳಿರ್ದು ಕಾರಿಕಾಲಮ್ಮಗಿಂತೆಂದಂ॥

ಕಂ॥ ಪಿರಿದುಂನೀನೊಲವಿಂಬೈ| ತಿರಿಸಿದಮಾಕಂದಫಲಮನೆನಗಂತಾರೆಂ| ದಿರದೆಪತಿಬೇಡಲಾಗ| ಳ್ವರಸತಿ ಶಂಕಿಸದೆತಂದು ಕೊಟ್ಟಳ್ಭರದಿಂ|

ವ|| ಅಂತುಕುಡಲ್ಪತಿ ತನ್ನಮನದೊಳ್ಬೆರಗಾಗಿ ಮಹಾಮಹಿಮೆಯೆಂದರಿದು ಚರಣಕ್ಕೆರಗಲ್ಕದಂಕಂಡೆನ್ನ ಗುಪ್ತಮಾಹೇಶ್ವರಿ ತಮಿಂದಿನೊಳ್‌ಪ್ರಕಟಮಾದುದಿನ್ನೀ ಸಂಸಾರದಿಂದೆನಗೆ ಸಾಲ್ಕೆಂದು ಸರ್ವಸಂಗಪರಿತ್ಯಾಗಮಂಮಾಡಿ ನಿಜಪುರದಿಂ ಪೊರಮಟ್ಟು ಪೋಗಲ್ಕಿತ್ತತ್ಪತಿಯ ಮಿತ್ರರೆನಿಪಪುರಜನ ಪರಿಜನಂನೋಡುತ್ತಿರೆ ಮೂರಲ್ಮೆಸಗಿತನ್ನಸತಿಗಭಿಮಾನಂ ಗೆಟ್ಟುಕಳುಪಿದಂ ಗಡನಾಂಪೋಗಲೀಯುಪಡಪೊಕ್ಕುಮಕಳ್ಟುವವೆಂದು ಪರಿದುಬರಲ್ಕಾರಿ ಕಾಲಮ್ಮ ಕಂಡು |

ಕಂ| ಪಿರಿದುಂವೈರಾಗ್ಯದಿನಿಜ| ಶರೀರಪಿಶಿತಮಂತೆಗೆದುಬಿಸುಟತ್ಯಾಸುರದಿಂ ನಿಮ್ಮಾಸೊಮ್ಮಿದೆ ನಿರುತಂಕೊಳ್ಳೆಂದು ಭಕ್ತೆನುಡಿಯಲ್ಕಾಗಳ್|

ವ|| ಅಂತುನುಡಿಯಲ್ಕಮಾತಂಕೇಳ್ದು ತತ್ಪತಿಯಾಪ್ತರಪ್ಪ ಪರಿಜನ ಪುರಜನಂಭಯಂಗೊಂಡು ತಿರುಗಿಪೋಗಲ್ಕಾಗಲ್ಕಾರಿಕಾಲಮ್ಮೆಯಲ್ಲಿಂ ತಳರ್ದು||

ಕಂ|| ವರಕನಕಕಲಶದಿಂದಂ. ಪಿರಿದೊಪ್ಪುವಲಿಂಗದೇಹದಿಂ ರಂಜಿಸುವಾ| ತಿರುವಾಲಂಗಾಡೆಂಬಾ| ಪುರಕ್ಕೆತದ್ಭಕ್ತೆ ಭರದಿನಿರದೇಳ್ತಂದಳ್ ೮

ವ| ಅಂತೇಳ್ತಂದು ತಿರುವಾಲಂಗಾಡಪುರದೀಶ್ವರ ನಪ್ಪಶಿವಲಿಂಗನಿಳ

ಱುಮಂಪೊಕ್ಕು ಲಿಂಗದಸವಿಾಪಕ್ಕೆ ಬರ್ಪಾಗಳ್॥
ಕಂ॥ ಗಿರಿಜಾತೆ ಕಂಡುಸುಬಿದ। ಳ್ವರನೊಳಿದೆಲ್ಲಿಯ ಮರುಳ್ಬರುತ್ತೈದೆ ನೆಕೇ। ಳ್ದಿರವಾಕೆಯೆಮ್ಮತಾಯೆಂ। ದುಱುಮುದದಿಂ ಪೇಳ್ದನಾಗಳಾಗಿ ರಿಜೇಶಂ॥ ೧೦
ವ॥ ಅಂತುಪೇಳುತ್ತಿರ್ಪಾಗಳ್ಕಾರಿಕಾಲಮ್ಮೆ ತಲ್ಲಿಂಗಮುಂಕಂಡು ಭಕ್ತಿಯಿಂಸಾಷ್ಟಾಂಗವೆರಗಿ ದಂಡಪ್ರಣುತೆಯಾಗಿ ರಪ್ಪಿಕ್ಕವತ್ಸಳನಪ್ಪ ಸದಾಶಿವಂ ನಿಜರೂಪಂದೋರಿ ತನ್ನ ಕರಪಲ್ಲವದಿಂ ಪಿಡಿದೆತ್ತಿ ಕುಳ್ಳಿರಿಸಿವಜ್ರದೇಹಮಪ್ಪಂತೆ ಮೆಯ್ದುಡವಿ ತಾಳವೆರಡುಂ ಕುಡಲಾಕೆಯೊತ್ತಲ್ಕಾಗತಿಗೆ ತಾಂಡವಮುಂತೋರಿಸಿ ನೀಂಕೈಲಾಸಕ್ಕೆ ಪೋಗೆಂದುಕಳುಪಲ್ಬ ನಾಡಮೆನುತ್ತಾಗಳ್॥
ಕಂ॥ ಶರಣರ್ನಡೆದೀಘೆರೆಯಿಂ। ದಿರವತಿಭಯದಿಂದೆ ಕಾರಿಕಾಲಮ್ಮೆಯುರಾ। ದರದಿಂಶಿರದೊಳ್ನಡೆವುತೆ। ಭರದಿಂರಜತಾಚಳಕ್ಕೆ ಪೋಗುತ್ತಿರ್ದಾರ್॥ ೧೧
ವರಮುಪುರಾತನರಂಸಾದರದಿಂತಿರುಪಾಡಿನಲ್ಲಿಪೊಗಳ್ದುಮಗುಳ್ದಾ। ಗಿರಿಶಸುತಂಬಂದಾಗ ಳ್ತಿರುವಾರೂರಲ್ಲಿ ಸುಖವನಾಂತಿರು ತಿರ್ದಂ॥
ವ॥ ಅಂತುತಿರುವಾರೊ ಳ್ಪರಮಸುಖದಿಂಸಂಬಿಯಣ್ಣನಿರುತ್ತೊಂದು ದಿವಸಂ ಚೇರಮನಪುರಕ್ಕೆ ಪೋಗಲ್ಮನಂದಂದಾಗಳ್॥
ಕಂ॥ ಮುರಜಾನಕಮುಂದುಭಿಕಂ। ಖರವಂಸೆಗಳಲ್ಕೆ ನಿಜಬಲಂಬೆರಸಾಗಳ್। ತಿರುವಾರೂರಿಂ ಪುರಹರ ವರಸುತನತುಳೋತ್ಸವಂ ಮಿಗಲ್ಪೊರಮಟ್ಟಂ॥ ೧೨
ವ॥ ಅಂತುಸಾಂದರಂ ನಿಜಬಲಂಬೆರಸು ಪೊರಮಟ್ಟು ತಿರುನಾಗಪಟ್ಟಣಕ್ಕೆಬಂದು ಶಿವನಿಳಯಕ್ಕೆಯ್ತಂದು ಲಿಂಗಕ್ಕರ್ಚನೆಯುಂಮಾಡಿಪೊಡಮಟ್ಟು ನಲಿದಾಡಿತಿರುಪಾಡಂಪಾಡಿ ಯಿಲೆದೇವಾ ನಾಂಚೇರಮನಪುರಕ್ಕೆ ಪೋಗುತ್ತಿರ್ದಪೆ ನೆನಗೊಂದೆರಂಕೆಯ ಕುದುರೆಯುಂ ಬೆಳ್ಗೊಡೆಯುಮನೀವುದೆಂದುಸಾಂದರಂ ಬಿನ್ನವಿಸಲ್ಕಾಗಳ್॥
ಕಂ॥ ಗರುಡನಮುರುತನಜವಮಂ। ಜರಿದೆಸೆವಾಪಕ್ಷದಶ್ವಮೊಂದಂನೆರಭಾ। ಸುರದಾಜೆಳ್ಗೊಡೆಯುಂಸಾಂ। ದರಪೆರುಮಾಳಿಗೆಗಿರೀಶನೊಲವಿಂಕೊಟ್ಟಂ॥ ೧೪

ವ|| ಅಂತುಶಿವನಿತ್ತತುರಂಗಮಂಬೆಳ್ಗೊಡೆಯ.ಂ ಪಡೆವಲ್ಲಿಂತೆಳರ್ದುಸ್ವ ಲವುಕೆಲವುಯೋಜನಮುಂ ದಾಂಟಬರುತ್ತಿರ್ದಾಗಳೊರ್ವ ದೂತಂತಿ ರುವಾರೂರಿಂ ದುಃಖಾಕುಳನಾಗುತ್ತುಂಬಂದು ಸೌಂದರನಿದಿರೊಳ್ನಿಂ ದಿಂತೆಂದಂ||

ಕಂ|| ಸ್ಮರಹರಸುತನೀನಿಲ್ಲಿಗೆ ಬರಲಂತಾಪರವೆವಿಂಜಿನುಜ್ವಳತೆಯು ನಾಂ| ತಿರದೆಗಗನಕ್ಕೆ ಭರದಿಂ| ಪಿರಿದಟ್ಟರಿಯಿಂದ ದೃಶ್ಯೆಯಾಗಿಯೆಪೋ ದಳ್|| ೧೫

ವ|| ಅಂತಾದೂತಂಪೇಳಲ್ಕೇಳ್ದು ಸೌಂದರಂಖತಿಗೊಳುತ್ತಿರಲ್ ಶಿವ ನೇಬಲ್ಲನೆನುತ್ತಂ ಕೊಂಗುದೇಶಮಂಪ್ರೊಕ್ಕು ವಿನಾಶಿಯೆಂಬ ಪುರಕ್ಕೇ ಳ್ತಂದೊಂದು ಬಹುಳತರತಟಾಕವಿರಲದರ ತಡಿಯೊಳ್ನಿಜಬಲಮಂ ಬಿ ಡಿಸಿದರವಾಸುರಾಗದಿಂ ಶಿವಭಕ್ತ ವೇರಸು ಕುಳ್ಳಿರ್ದುನೋಳ್ಪಾಗಳ್

ಕಂ|| ಸ್ಫುಟಿತಶಫರಾಳಿದಂಷ್ಟ್ರಾ/ಂ| ಕುರನುರುರಕ್ತಾಂಬುಜಂಗಳಂ ಕಿಸುಗಂಗ ಳ್ಪಿರಿದೆನಿಸೆತತಟಾಕಂ| ನಿರುತಂರಾಕ್ಷಸಿಯು ವದನದಂತೆ ಪೊಲೆಸೆಗುಂ|| ೧೬

ವ|| ಅಂತತಿಭಯಂಕರಮಪ್ಪ ತತ್ತಟಾಕಮಂನಂಬಿಯುಣ್ಣಂ ವಿಸ್ಮ ಯಂಬಟ್ಟು ನೋಡುತ್ತಿರ್ದನ್ನೆಗಮೊರ್ವಳ್||

ಮ|| ಪುರವೊಳ್ಕೇಳಲೆಕಂದ ನಿನ್ನೊಡನೆಪುಟ್ಟಿದಾತ ಗುತ್ಸಾಹದಿಂ ಪಿರಿದುಂಮುಂಜಿಯನಂದು ಕಟ್ಟಿದಪರಾರೆಂ ನಿನ್ನನಿಂತೀಭಯಂ| ಕರ ಮಪ್ಪೀ ಕೆರೆಗೆಂದುಪೆತ್ತೆನಕಟಾಂ ಮೋಹೆಂಬುದೇಂ ನಂಬಿಯೆಂ| ದಿರ ದಾಗಳ್ಪಾವಿಪ್ಪುದು ತ್ತೊದರಿದ ಳ್ಶೋಳ್ಬರ್ಭಯಂಗೊಳ್ವನಂ|| ೧೭

ಕಂ|| ಬಿಸುಸುಯ್ಯುತ್ತಂ ದುಃಖದಿನಸದಳದಿ ಪೊರಳುತಕಟಕಂದ ನೆನಿನ್ನಂ| ಮೊಸಳೆಗೆಪೆತ್ತೆನೆನುತ್ತು| ಬ್ಬಸದಿಂದ ಮುದೊರ್ವಳಳುತಿರ ಲ್ಕಂತಾಗಳ್|| ೧೮

ವ|| ಎಂಬಳುತ್ತಿರ್ದದನಿಯಂ ನಂಬಿಯುಣ್ಣನಭತ್ರಧರಂ ಕೇಳ್ದುಪರಿ ತಂದೆಲೆವೇವಾ ನಿಮ್ಮಪೆಸರ್ಗೊಂಡೊರ್ವಳ್ ಳುತ್ತಿರ್ದಪಳೆಂದು ಪೇಳ ಲ್ಕೇಳ್ದು ಸೌಂದರಂತವಕದಿಂ ಅವಿನಾಶಿಯೆಂಬ ಪೆಸರಶಿವಲಿಂಗದೆಡೆಗೇ ಳ್ತಂದು ತಾಳಮಂಪಿಡಿದು ತಿರುಪಾಡಿಂದಿಂತೆಂದಂ||

ಕಂ|| ಕರಗಿಸೊಲವಿಂಕೇಳ್ದು ಪಿರಿದೆನ್ನ ಪೆಸರಶಿವನೀ ಕೆರೆ

